ನೆಹರೂ ಬಾಲ ಪುಸ್ತಕಾಲಯ

# ಕಡಲ ತೀರದ ಗ್ರಾಮ

ಅನಿತಾ ದೇಸಾಯಿ

ಅನುವಾದ

ಎಚ್.ಕೆ. ರಾಮಕೃಷ್ಣ

ಚಿತ್ರಗಳು

ಮಿಕ್ಕಿ ಪಟೇಲ್



ನ್ಯಾಷನಲ್ ಬುಕ್ ಟ್ರಸ್ಟ್, ಇಂಡಿಯಾ

ISBN 81-237-2523-X

ಮೊದಲ ಮುದ್ರಣ : 1998 (ಶಕ 1920)



The Village by the Sea (*Kannada*)

**ರೂ. 30.00**

ನಿರ್ದೇಶಕರು, ನ್ಯಾಷನಲ್ ಬುಕ್ ಟ್ರಸ್ಟ್, ಇಂಡಿಯಾ

ಎ-5, ಗ್ರೀನ್ ಪಾರ್ಕ್, ಹೊಸ ದೆಹಲಿ - 110 016 ಇವರಿಂದ ಪ್ರಕಟಿತ

ಲೀನ, ಅದಿತಿ, ಮತ್ತು ರಣಜಿತ್ ಮಾಯಾದಾಸ್
ಅವರುಗಳಿಗೆ ಸಮರ್ಪಣೆ.
ಧುಲ್‌ನಲ್ಲಿನ ಅವರ ಮನೆ ನನ್ನ ರಜಾದಿನಗಳ
ವಾಸಸ್ಥಾನವಷ್ಟೇ ಆಗಿರದೆ ಈ ಪುಸ್ತಕಕ್ಕೆ
ಸಾಮಗ್ರಿಯನ್ನು ಒದಗಿಸಿಕೊಟ್ಟಿತು.

# 1

ಲೀಲ ಕಡಲ ದಂಡೆಗೆ ಹೋದಾಗ ಇನ್ನೂ ನಸುಕಾಗಿತ್ತು. ಅಲ್ಲಿ ಯಾರೂ ಇರಲಿಲ್ಲ. ರಾತ್ರಿಯ ಅಲೆಗಳಿಂದಾಗಿ ಮರಳು ಸ್ವಚ್ಛವಾಗಿತ್ತು. ಅದರ ಮೇಲೆ ಯಾರೂ ನಡೆದಿರಲಿಲ್ಲ. ಆದರೆ, ಗಲ್ ಹಕ್ಕಿಗಳು, ಕ್ರೌಂಚ ಪಕ್ಷಿಗಳು ಮತ್ತು ಇತರ ಹಕ್ಕಿಗಳ ಹೆಜ್ಜೆಗುರುತುಗಳು ಮಾತ್ರ ದಂಡೆಯುದ್ದಕ್ಕೂ ಕಾಣುತ್ತಿದ್ದವು. ಲೀಲ ಕೈಯಲ್ಲಿ ಹೂವಿನ ಬುಟ್ಟಿಯೊಂದನ್ನು ಹಿಡಿದಿದ್ದಳು. ಮನೆಯ ಸುತ್ತಮುತ್ತಲ ತೋಟದಲ್ಲಿ ಆಯ್ದ ಸುಂದರವಾದ ದಾಸವಾಳಗಳು, ಸುವಾಸನೆಯ ವಸಂತ ಪುಷ್ಪಗಳು ಹಾಗೂ ಇತರ ಹೂಗಳಿಂದ ಬುಟ್ಟಿ ತುಂಬಿತ್ತು.

ಕಡಲ ತೀರವನ್ನು ತಲುಪಿದ ನಂತರ ಅವಳು ಸೀರೆಯ ನೆರಿಗೆಯನ್ನು ಹಿಡಿದೆತ್ತಿ ಸೊಂಟಕ್ಕೆ ಸಿಕ್ಕಿಸಿದಳು. ಅಲೆಗಳ ನಡುವೆ ನಡೆದು, ತೀರವನ್ನು ಹಾಯ್ದು ಮುಂದುವರಿದಳು. ಅಲೆಗಳು ಅವಳ ಕಾಲಿಗೆ ಬಡಿಯುತ್ತಾ ನೊರೆನೊರೆಯಾಗಿ ಕಾಲಿನ ಸುತ್ತ ಸುತ್ತುತ್ತಿದ್ದವು. ಅವಳು ಹಾಗೇ ನಡೆದುಕೊಂಡು ಮೂರು ಬಂಡೆಗಳ ಸಮೂಹವನ್ನು ತಲುಪಿದಳು. ಅವುಗಳ ಪೈಕಿ ಒಂದು ಬಂಡೆಗೆ ಕುಂಕುಮ ಮತ್ತು ವಿಭೂತಿಯನ್ನು ಬಳಿಯಲಾಗಿತ್ತು. ಅದೊಂದು ಪವಿತ್ರ ಬಂಡೆ. ಎತ್ತರದ ಅಲೆಗಳಲ್ಲಿ ಅದು ಮುಳುಗಿಹೋಗಿರುತ್ತದೆ. ಆದರೆ ಈಗ ಸಣ್ಣ ಅಲೆಗಳ ನೀರಿನ ಅಭಿಷೇಕದಿಂದ ಪರಿಶುದ್ಧವಾಗಿ ಕಾಣುತ್ತಿದೆ. ಲೀಲ, ತನ್ನ ಬುಟ್ಟಿಯಿಂದ ಹೂಗಳನ್ನು ತೆಗೆದು ಬಂಡೆಯ ಮೇಲೆ ಹರಡಿ, ಕೈಮುಗಿದು ನಮಿಸಿದಳು.

ಅದೇ ವೇಳೆಗೆ ಕಡಲ ದಂಡೆಯುದ್ದಕ್ಕೂ ಇದ್ದ ತೆಂಗಿನ ಮರಗಳ ಸಾಲುಗಳ ಮೇಲಿನಿಂದ ಸೂರ್ಯನು ಉದಯಿಸಿ ಬಿಳಿ ಮರಳ ದಂಡೆಯ ಮೇಲೆ ತನ್ನ ಕಿರಣಗಳನ್ನು ಹಾಯಿಸಿದ. ಲೀಲಳ ಕತ್ತಿನ ಹಿಂಭಾಗದ ಮೇಲೂ ಕಿರಣಗಳು ಬಿದ್ದವು. ಬೆಚ್ಚನೆಯ ಆ ಕಿರಣಗಳಿಂದ ಪುಳಕಿತಗೊಂಡ ಲೀಲ ಬಂಡೆಯ ಮುಂದೆ ಇನ್ನೂ ಸ್ವಲ್ಪ ಸಮಯ ಬಾಗಿ ನಿಂತಿದ್ದಳು. ತಣ್ಣನೆಯ ಮತ್ತು ಜುಳು ಜುಳು ಶಬ್ದ ಮಾಡುತ್ತಾ ಹರಿಯುತ್ತಿದ್ದ ನೀರಿನ ಅಲೆಗಳಲ್ಲಿ ಅವಳ ಕಾಲುಗಳು ಇನ್ನೂ ಮುಳುಗಿದ್ದವು. ಸೂರ್ಯನು ತನ್ನ ಕಿರಣಗಳಿಂದ ಉಜ್ವಲವಾದ ನಸುಗೆಂಪಿನ ಮತ್ತು ಧೂಮ್ರವರ್ಣದ ಅಲೆಗಳನ್ನು ಎಬ್ಬಿಸಿದ. ದೂರದ ಕ್ಷಿತಿಜದುದ್ದಕ್ಕೂ ಇಡೀ ರಾತ್ರಿ ಹೊರಗಿದ್ದ ಬೆಸ್ತರ ದೋಣಿಗಳು ಬಿಳಿ ರೆಕ್ಕೆಯಂತಹ ತಮ್ಮ ಪಟಗಳನ್ನೆತ್ತಿ ಸಮುದ್ರದ ಮೇಲೆ ಕಾಣಿಸಿಕೊಂಡವು. ಲಂಗರು ಹಾಕಿದ್ದ ಅವು ಸ್ತಬ್ಧವಾಗಿ ನಿಂತಿದ್ದವು. ಸೂರ್ಯಾಸ್ತಕ್ಕೆ ಮುನ್ನ ಅವು ಹಿಂತಿರುಗಲಾರವು.

ಬೆಳಗಾದಂತೆ ಹೆಂಗಸರು ಹೆಚ್ಚಿನ ಸಂಖ್ಯೆಯಲ್ಲಿ ಅಲ್ಲಿಗೆ ಬಂದು ಪವಿತ್ರ ಬಂಡೆಗೆ ಪುಷ್ಪಗಳನ್ನು ಅರ್ಪಿಸಿ ಪೂಜಿಸುವರು. ಸಮುದ್ರಕ್ಕೆ ಹೋಗಿರುವ ಮೀನುಗಾರರ ಸುರಕ್ಷತೆಗಾಗಿ

ಕೆಲವರು ಪ್ರಾರ್ಥನೆ ಸಲ್ಲಿಸುವರು. ಅವರು ಮೀನುಗಾರರ ಪತ್ನಿಯರೂ, ಪುತ್ರಿಯರೂ ಆಗಿರುವುದೇ ಇದಕ್ಕೆ ಕಾರಣ. ಮತ್ತೆ ಕೆಲವರು ಲೀಲಳಂತೆ, ಶಿಲೆಯ ಮುಂದೆ ಸುಮ್ಮನೆ ತಲೆಬಾಗಿ ನಮಿಸುವರು. ದಿನದ ಪ್ರಾರಂಭಕ್ಕೆ ಇದೊಂದು ಒಳ್ಳೆಯ ಅಭ್ಯಾಸ. ಬೇರೆ ಬಂಡೆಗಳನ್ನು ಬಿಟ್ಟು ಈ ಬಂಡೆಗೇ ಅವರು ಏಕೆ ಪೂಜಿಸುವರೆಂಬುದಕ್ಕೆ ವಿಶಿಷ್ಟ ಕಾರಣವೇನೂ ಇಲ್ಲ. ಒಟ್ಟಿನಲ್ಲಿ ಅವರು ಪ್ರಾರ್ಥಿಸಬೇಕು. ಹೂ, ಕುಂಕುಮವನ್ನು ಅರ್ಪಿಸಬೇಕು. ಈ ದೃಷ್ಟಿಯಿಂದ ಮೇಲ್ಭಾಗದಲ್ಲಿ ಸ್ವಲ್ಪ ಚಪ್ಪಟೆಯಾಗಿರುವ ಈ ಬಂಡೆ ಅವರಿಗೆ ಅನುಕೂಲ-ವೆನಿಸಿದೆ. ಹೆಚ್ಚು ಆಳವಿಲ್ಲದ ಜಾಗದಲ್ಲಿ ನಿಂತಿರುವ ಆ ಬಂಡೆಯ ಬಳಿಗೆ ಹೋಗುವುದೂ ಅವರಿಗೆ ಸುಲಭ. ಕಡಲ ದಂಡೆಯ ತುದಿಯಲ್ಲಿನ ಗ್ರಾಮದಲ್ಲಿರುವ ಗುಡಿಯೂ ಸಹ ಅಂತಹ ದೂರವೇನಿಲ್ಲ. ಆದರೆ ಅಲ್ಲಿ ತಮಗಾಗಿ ಪೂಜೆ ಮಾಡುವ ಪೂಜಾರಿಗೆ ದಕ್ಷಿಣೆ ಕೊಡಬೇಕು. ಇಲ್ಲಾದರೋ ಆ ಬಂಡೆಗೆ ತಾವೇ ಸ್ವತಃ ಮನಃ ತೃಪ್ತಿಯಾಗುವ ತನಕ ಪೂಜೆ ಮಾಡಬಹುದು.

ಹಿಂದೆ ಲೀಲಳ ತಂದೆ ಒಂದು ದೋಣಿಯನ್ನು ಹೊಂದಿದ್ದು, ಮೀನು ಹಿಡಿಯಲು ಸಮುದ್ರಕ್ಕೆ ಹೋಗುತ್ತಿದ್ದಾಗ ಅವಳ ತಾಯಿ ಹೂಗಳನ್ನು ತಂದು ಆ ಬಂಡೆಯನ್ನು ಪೂಜಿಸುತ್ತಿದ್ದಳು. ಆದರೆ ಈಗ ಅವನ ಬಳಿ ದೋಣಿ ಇಲ್ಲ. ತನ್ನ ಸಾಲಗಳನ್ನು ತೀರಿಸಲು ಅದನ್ನು ಮಾರಿಬಿಟ್ಟಿದ್ದ. ಅವಳ ತಾಯಿ ತುಂಬಾ ಅಸ್ವಸ್ಥಳಾಗಿದ್ದು ಹಾಸಿಗೆಯಿಂದ ಏಳದಷ್ಟು ನಿಶ್ಶಕ್ತಳಾಗಿದ್ದಾಳೆ. ಹೀಗಾಗಿ ಲೀಲ ಹೂಗಳನ್ನು ಅರ್ಪಿಸಲು ನಸುಕಿನಲ್ಲೇ ಇಲ್ಲಿಗೆ ಬರಲಾರಂಭಿಸಿದ್ದಳು. ಇಡೀ ದಿನದಲ್ಲೇ ಅದು ಅತ್ಯುತ್ತಮ ಸಮಯವೆಂದು ಅವಳು ಭಾವಿಸಿದ್ದಳು. ಅದು ಆಹ್ಲಾದಕರವೂ, ಶಾಂತವೂ ಆದ ಸಮಯವಾಗಿತ್ತು. ಬುಟ್ಟಿಯಲ್ಲಿದ್ದ ಹೂವಿನ ಕೊನೆಯ ದಳಗಳನ್ನು ಅವಳು ಕಡಲಲ್ಲಿ ಹಾಕಿದಳು. ಅಲೆಗಳು ಅವನ್ನು ಶೀಘ್ರವಾಗಿ ಕೊಚ್ಚಿಕೊಂಡು ಹೋದವು. ಅವಳು ಹಿಂದಿರುಗಿ ದಂಡೆಯ ಮೇಲೆ ನಡೆದು ಸೂರ್ಯನ ಕಿರಣಗಳಿಂದ ಹೊಳೆಯುತ್ತಿದ್ದ ತೆಂಗಿನ ಮರಗಳ ಸಾಲುಗಳತ್ತ ಹೋದಳು. ದಿನದ ಕೆಲಸ ಪ್ರಾರಂಭಿಸಲು ಅದು ಸೂಕ್ತವಾದ ಸಮಯ.

ಕಡಲ ಪಾರ್ಶ್ವದಲ್ಲಿ ತುತ್ತೂರಿಯಾಕಾರದ ಉಜ್ವಲ ವರ್ಣದ ಹೂಗಳಿಂದ ಪಸರಿಸಿ-ರುವ, ಮರಳ ದಿಣ್ಣೆಯನ್ನು ಹತ್ತಿ ಅವಳು ತೆಂಗಿನ ತೋಟದೊಳಗೆ ಹೋದಳು. ಬೀಗ ಹಾಕಿದ್ದ, ಕಿಟಕಿ ಬಾಗಿಲುಗಳನ್ನು ಮುಚ್ಚಿದ್ದ ಬಿಳಿಯ ಬಂಗಲೆಯ ಪಕ್ಕದಲ್ಲಿ ಹಾದು ಹೋದಳು. ಆ ಬಂಗಲೆಯು ಮುಂಬೈನ ಶ್ರೀಮಂತರಿಗೆ ಸೇರಿದ್ದು. ಅವರು ತಮ್ಮ ರಜೆಯ ದಿನಗಳಲ್ಲಿ ಅಪರೂಪವಾಗಿ ಅಲ್ಲಿಗೆ ಬರುತ್ತಾರೆ. ತಗಡಿನ ಫಲಕವೊಂದರ ಮೇಲೆ ಮನೆಯ ಹೆಸರನ್ನು ಬರೆದಿದ್ದು ಅದನ್ನು ತೆಂಗಿನ ಮರದ ಕಾಂಡಕ್ಕೆ ತೂಗುಹಾಕಲಾಗಿದೆ. ಹೆಸರು 'ಮೋನ್ ರಿಪೋಸ್'. ಅದರ ಅರ್ಥವೇನು? ಲೀಲಳಿಗೂ ಅದನ್ನು ತಿಳಿಯಲು ಆಗಿಲ್ಲ. ಪ್ರತಿ ಸಲ ಬಂಗಲೆಯನ್ನು ಹಾದು ತೆಂಗಿನ ತೋಟದತ್ತ ಹೋದಾಗಲೆಲ್ಲಾ ಲೀಲ ಆ ಹೆಸರಿನ ಬಗ್ಗೆ ಯೋಚಿಸುತ್ತಾಳೆ.

ಮಂದವಾದ ಸೂರ್ಯನ ಬೆಳಕು ತೆಂಗಿನ ಗರಿಗಳ ಮೂಲಕ ಹಾದು ಬರುತ್ತಿದೆ. ಮರೆಯಲ್ಲಿರುವ ಗುಡಿಸಿಲುಗಳಿಂದ ಸುರುಳಿ ಸುರುಳಿಯಾಗಿ ಬರುತ್ತಿರುವ ನೀಲಿ ಹೊಗೆಯು ಅದರೊಡನೆ ಸೇರಿಕೊಂಡಿದೆ. ಬಲಿತ ಹುಲ್ಲಿನ ಮೇಲೆ ಇನ್ನೂ ಉಳಿದಿರುವ ಇಬ್ಬನಿಯ ಹನಿಗಳು, ಜೇಡರ ಬಲೆಗಳು ಫಳಫಳನೆ ಹೊಳೆಯುತ್ತಿವೆ. ಪ್ರತಿ ಬಲೆಯ ಮಧ್ಯದಲ್ಲಿ

ರಂಧ್ರವಿದ್ದು ಹಾದುಹೋಗುವ ಹುಳಹುಪ್ಪಟೆಯನ್ನು ಹಿಡಿಯಲು ಅನುಕೂಲಕರವಾಗಿದೆ. ಪೊದೆಗಳಿಂದ ಮತ್ತು ಕಾಡುಹೂಗಳ ಗೊಂಚಲುಗಳಿಂದ ಚಿಟ್ಟೆಗಳು ಹಾರಿ ಬರುತ್ತಿವೆ. ರೆಕ್ಕೆಗಳ ಅಂಚಿನಲ್ಲಿ ತಿಳಿನೀಲಿ ಬಣ್ಣದ ಪಟ್ಟೆಯುಳ್ಳ ಚಿಟ್ಟೆಗಳೂ, ರೆಕ್ಕೆಯ ತುದಿಯಲ್ಲಿ ಕಡುಗೆಂಪು ಬಣ್ಣದ ಕಪ್ಪುಚಿಟ್ಟೆಗಳೂ ಮತ್ತು ಹಳದಿ ಬಣ್ಣದ ಚಿಟ್ಟೆಗಳೂ ಎರಡು-ಮೂರರ ಗುಂಪಿನಲ್ಲಿ ಹಾರಾಡುತ್ತಿವೆ.

ಚೂಪಾಗಿ ನಿಂತಿರುವ ಸರ್ವೆ ಮರಗಳಿಂದ ಮತ್ತು ಪೀತದಾರು ಮರಗಳಿಂದ ದಿನದ ಮತ್ತಾವ ಸಮಯದಲ್ಲೂ ಕೇಳಿ ಬರದ ರೀತಿಯಲ್ಲಿ, ಪಕ್ಷಿಗಳು ಜೋರಾಗಿ ಚಿಲಿಪಿಲಿ-ಗುಟ್ಟುತ್ತಾ, ಕರೆ ನೀಡುತ್ತಾ, ಶೀಟಿ ಹೊಡೆಯುತ್ತಾ ಗುಂಪುಗುಂಪಾಗಿ ಹಾರಿ ಬರುತ್ತಿವೆ. ಗಂಡು ಜೇನುಹುಳುಗಳು ಝೇಂಕರಿಸುತ್ತಾ ಗಾಳಿಯನ್ನು ಭೇದಿಸಿ ಮುನ್ನುಗ್ಗುತ್ತಿದ್ದು ಬಿಸಿಲಿನಿಂದಾಗಿ ಕಡುನೀಲಿ ಬಣ್ಣದಲ್ಲಿ ಹೊಳೆಯುತ್ತಿವೆ. ಕೆಂಪೆದೆಯ ಸಣ್ಣ ಹಕ್ಕಿಗಳು, ಜೇಡರ ಬಲೆಗೆ ಸಿಕ್ಕುವ ಹುಳಹುಪ್ಪಟೆಯನ್ನು ಹಿಡಿಯಲು ಇಬ್ಬನಿಯ ಹುಲ್ಲುಗಳ ಮೇಲೆ ಜಿಗಿದು ಹಾರಾಡುತ್ತಿವೆ. ಕೊಂಬೆಗಳ ಮೇಲೆ ಕುಳಿತ ಬೇಟೆಯ ಹಕ್ಕಿಯು ಕರ್ಕಶ ಧ್ವನಿಯಲ್ಲಿ ಕೂ-ಕೂ-ಕೂ ಎಂದು



ಕೂಗುತ್ತಿದೆ. ಪಾರಿವಾಳಗಳ ಗಡುಸಾದ ಗುಟರ್‌ಗೂ ಧ್ವನಿ ಕೇಳಿ ಬರುತ್ತಿದೆ. ಇದು ಧುಲ್ ಗ್ರಾಮದ ಧ್ವನಿ. ಇದರ ಜೊತೆಗೆ ಕಡಲ ಅಲೆಗಳ ಭೋರ್ಗರೆತ ಮತ್ತು ತೆಂಗಿನ ಮರಗಳ ಗಾಳಿಯ ಮರ್ಮರವೂ ಸೇರಿಕೊಂಡಿದೆ. ನೆಮ್ಮದಿ ಹಾಗೂ ಸಂತೋಷದಿಂದಿರುವಂತೆಯೂ, ಹಿಂದಿನಂತೆಯೇ ಎಲ್ಲವೂ ಸುಗಮವಾಗುವುದೆಂದೂ ಅವು ಲೀಲಳಿಗೆ ಹೇಳುತ್ತಿರುವಂತೆ ಭಾಸವಾಗುತ್ತಿದೆ.

ಆದರೆ ಮತ್ತೊಂದು ಪಾರ್ಶ್ವದಲ್ಲಿದ್ದ ತಮ್ಮ ಗುಡಿಸಿಲಿಗೆ ದಾರಿ ಮಾಡಿಕೊಡುವ ಸೇತುವೆಯಂತಿದ್ದ, ಜೊಂಡಿನ ಕೊರಕಲ ಮೇಲಿನ ದಿಮ್ಮಿಯ ಬಳಿ ಬಂದು ಲೀಲ ತಮ್ಮ ಗುಡಿಸಿಲನ್ನು ನೋಡಿದಾಗ, ಹಿಂದಿದ್ದಂತೆ ಈಗ ಯಾವುದೂ ಇಲ್ಲ, ಯಾವುದೂ ಸಮರ್ಪಕವಾಗಿಲ್ಲವೆಂಬ ಭಾವನೆ ಅವಳಿಗುಂಟಾಯಿತು. ವರ್ಷಗಳ ಹಿಂದೆಯೇ ಗುಡಿಸಿಲಿಗೆ ಹೊಸ ಮಾಡನ್ನು ಹಾಕಬೇಕಿತ್ತು. ಹಳೆಯ ತೆಂಗಿನ ಗರಿಗಳ ಚಾಪೆಯು ಕಿತ್ತುಹೋಗಿದ್ದು, ಅವು ತೊಲೆಗಳಿಂದ ಕಳಚಿ ಬೀಳುವಂತಿದ್ದವು. ಮಣ್ಣಿನ ಗೋಡೆಗಳು ಕುಸಿಯುತ್ತಿದ್ದವು. ಬಾಗಿಲಿಲ್ಲದ ಕಿಟಕಿಗಳು ಬಿರುಕುಬಿಟ್ಟಿದ್ದವು. ತೆಂಗಿನ ಮತ್ತು ಬಾಳೆಯ ತೋಟಗಳ ಮಧ್ಯೆ ಇದ್ದ ಇತರ ಗುಡಿಸಿಲುಗಳಲ್ಲಿನ ಒಲೆಗಳಿಂದ ಸುರುಳಿ ಸುರುಳಿಯಾಗಿ ಏಳುತ್ತಿದ್ದ ಹೊಗೆ ತಮ್ಮ ಗುಡಿಸಿಲಿನಲ್ಲಿ ಕಾಣುತ್ತಿರಲಿಲ್ಲ.

ಬಾಗಿಲ ಬಳಿ ನಿಂತಿದ್ದ ಅವಳ ಇಬ್ಬರು ತಂಗಿಯರಾದ ಬೇಲ ಮತ್ತು ಕಮಲ, ಗುಡಿಸಿಲ ಹಿಂದಿನ ಬೇವಿನ ಮರದಿಂದ ಮುರಿದ ಕಡ್ಡಿಗಳಿಂದ ತಮ್ಮ ಹಲ್ಲುಗಳನ್ನು ಉಜ್ಜುತ್ತಿದ್ದರು. ಅವರಿನ್ನೂ ಮುಖ ತೊಳೆದಿರಲಿಲ್ಲ. ಶಾಲೆಗೆ ಹೋಗುವ ಉಡುಪು ಧರಿಸಿರಲಿಲ್ಲ. ''ಶಾಲಾ ಉಡುಪನ್ನೇಕೆ ಧರಿಸಿಲ್ಲ? ಶಾಲೆಗೆ ಹೊತ್ತಾಗುತ್ತದೆ'' ಎಂದು ಲೀಲ ಹೇಳಿದಾಗ, ''ನೀನಿನ್ನೂ ನಮಗೆ ಚಹಾ ಸಹ ಮಾಡಿಲ್ಲವಲ್ಲ. ನಿನ್ನದೇ ತಡ'' ಎಂದು ಹುಡುಗಿಯರು ಹೇಳಿದರು.

ಲೀಲ ಬಾಗಿಲಲ್ಲೇ ಸಣ್ಣ ಹೂಬುಟ್ಟಿಯನ್ನು ಬಿಸಾಡಿ ಒಲೆ ಹೊತ್ತಿಸಲು ಒಳಗೆ ಧಾವಿಸಿದಳು. ಕಡಲ ದಂಡೆಗೆ ಹೋಗುವ ಮುನ್ನವೇ ಆ ಕೆಲಸ ಮಾಡಬೇಕಿತ್ತೆಂದು ಅವಳಿಗನಿಸಿತು. ನೀರಿನ ಮಡಕೆಯನ್ನು ಒಲೆಯ ಮೇಲಿಟ್ಟು ಹೋಗಿದ್ದರೆ ತಾನು ಹಿಂದಿರುಗುವ ವೇಳೆಗೆ ನೀರು ಕುದ್ದಿರುತ್ತಿತ್ತೆಂದು ಭಾವಿಸಿದಳು. ಆದರೆ, ಬೆಳಿಗ್ಗೆ ಎದ್ದಾಗ ಮೊದಲು ಕಡಲ ದಂಡೆಯತ್ತ ಓಡಬೇಕೆಂದು ಅವಳಿಗನ್ನಿಸಿತ್ತು. ಕಡಲನ್ನು ಕಂಡು ಪವಿತ್ರ ಬಂಡೆಯ ಮೇಲೆ ಹೂಗಳನ್ನು ಸಮರ್ಪಿಸುವ ಮುನ್ನ, ಬೂದಿಯಿಂದ ತುಂಬಿದ ಒಲೆಯನ್ನೂ, ಕಳೆದ ರಾತ್ರಿಯ ಮುಸುರೆ ಪಾತ್ರೆಗಳನ್ನೂ ನೋಡಲು ಅವಳಿಗೆ ಇಷ್ಟವಾಗಿರಲಿಲ್ಲ. ಈಗ ತಾನು ಅಲ್ಲಿಗೆ ಹೋಗಿ ಬಂದಾಗಿದೆ. ಉರುವಲನ್ನು ಸಂಗ್ರಹಿಸಿ, ಒಲೆ ಹಚ್ಚಿ, ಕುಟುಂಬಕ್ಕೆ ಚಹಾ ಮಾಡಬಹುದು. ಬೇಲ ಮತ್ತು ಕಮಲ ಈ ವಿಷಯವನ್ನು ಅರ್ಥಮಾಡಿಕೊಳ್ಳುವಂತಾಗಲಿ ಎಂದು ಆಶಿಸಿದಳು.

ಹೊಗೆ ಉಗುಳುತ್ತಿದ್ದ ಒಲೆಯ ಮೇಲಿಟ್ಟಿದ್ದ ನೀರಿನ ಪಾತ್ರೆಯೊಳಗೆ ಒಂದಿಷ್ಟು ಚಹಾ ಪುಡಿಯನ್ನೂ, ಮತ್ತೊಂದು ಹಿಡಿ ಸಕ್ಕರೆಯನ್ನೂ, ಲೀಲ ಮೌನದಿಂದ ಹಾಕಿದಳು. ಸೋದರ ಸ್ವಲ್ಪ ಹಾಲನ್ನು ತರುವ ತನಕ, ನೀರು ಕುದಿಯುವುದನ್ನು ನೋಡುತ್ತಾ ಮೂವರು ಸೋದರಿಯರೂ ಒಲೆಯ ಸುತ್ತ ಕುಳಿತರು. ಹಿಂದೊಮ್ಮೆ ಅವರ ಬಳಿ ಒಂದು ಎಮ್ಮೆಯಿತ್ತು. ಆದರೆ ಸಾಲವನ್ನು ತೀರಿಸಲು ಅದನ್ನು ಮಾರಿಯಾಗಿತ್ತು. ಈಗ ಗ್ರಾಮದ ಗೌಳಿಗನಿಂದ ಹಾಲನ್ನು ಕೊಂಡು ತರಬೇಕಾಗಿತ್ತು. ತೆಂಗಿನ ತೋಟದತ್ತ ಹೋಗುತ್ತಿದ್ದ ಹಾದಿ ನೋಡುತ್ತಾ ಅವರು

ಬಾಗಿಲ ಬಳಿ ಬಂದು ಕುಳಿತರು. ಸಣ್ಣ ಹಿತ್ತಾಳೆಯ ಪಾತ್ರೆಯಲ್ಲಿ ಹರಿ ಹಾಲು ತರುತ್ತಿದ್ದುದು ಅವರಿಗೆ ಕಾಣಿಸಿತು. ತನ್ನ ತಂಗಿಯರಂತಲ್ಲದೆ, ಹರಿ ಸ್ನಾನ ಮಾಡಿ ಸ್ವಚ್ಛವಾದ ಖಾಕಿ ನಿಕ್ಕರನ್ನೂ, ಷರ್ಟನ್ನೂ ಹಾಕಿಕೊಂಡಿದ್ದ. ಅವನಿಂದ ಹಾಲು ತೆಗೆದುಕೊಳ್ಳಲು ತಂಗಿಯರು ಓಡಿದರು. ಲೀಲ ಸ್ವಲ್ಪ ಹಾಲನ್ನು ಪಾತ್ರೆಗೆ ಸುರಿದಳು. ಶೀಘ್ರವಾಗಿ ಚಹಾ ಸಿದ್ಧವಾಯಿತು. ಅವರು ತಮ್ಮ ಚಹಾ ಲೋಟಗಳನ್ನು ಹಿಡಿದು, ಹೊರಗೆ ಪ್ಲಮ್ ಮರದ ಕೆಳಗಿದ್ದ ಹಗ್ಗದ ಮಂಚದ ಮೇಲೆ ಕುಳಿತು ಚಹಾ ಕುಡಿಯಲಾರಂಭಿಸಿದರು.

''ಅಪ್ಪ-ಅಮ್ಮಗೆ?'' ಹರಿ ಕೇಳಿದ.

''ಅಮ್ಮನಿಗೆ ಒಂದು ಲೋಟ ಚಹಾ ಒಯ್ಯುತ್ತೇನೆ'' ಲೀಲ ಹೇಳಿದಳು.

''ಆದರೆ ಅಪ್ಪ ಇನ್ನೂ ಮಲಗಿದ್ದಾರೆ'' ಬೇಲ ಮತ್ತು ಕಮಲ ಒಟ್ಟಿಗೆ ಹೇಳಿದರು.

ಖಾಲಿ ಲೋಟವನ್ನು ನೋಡುತ್ತಿದ್ದಂತೆ ಹರಿ ತಲೆಯನ್ನು ಬಗ್ಗಿಸಿದ. ಲೀಲ ಇಬ್ಬರು ತಂಗಿಯರನ್ನೂ ತಳ್ಳಿಕೊಂಡು ಒಳಗೆ ಕರೆದುಕೊಂಡು ಹೋಗಿ, ಅವರ ಬಟ್ಟೆ ಬದಲಾಯಿಸಿದಳು. ಗ್ರಾಮದ ಎಲ್ಲ ಶಾಲಾ ಮಕ್ಕಳೂ ಧರಿಸುತ್ತಿದ್ದ ನೀಲಿ ಸ್ಕರ್ಟ್‌ಗಳನ್ನೂ ಬಿಳಿಯ ಬ್ಲೌಸ್‌ಗಳನ್ನೂ ಅವರು ಹಾಕಿಕೊಂಡರು. ಹರಿದುಹೋಗಿದ್ದ ತಮ್ಮ ಕೆಲವು ಪುಸ್ತಕಗಳನ್ನು ಹಿಡಿದು ಅವರಿಬ್ಬರೂ ಶಾಲೆಗೆ ಹೊರಟರು. ತಾನು ಅವರನ್ನು ಶಾಲೆಗೆ ತಲುಪಿಸುವುದಾಗಿಯೂ, ವಾಪಸ್ ಬರುವಾಗ ಜಮೀನಿಗೆ ಹೋಗಿ ಅಗತೆಮಾಡಿ ನೀರು ಹಾಯಿಸಿ ಬರುವುದಾಗಿಯೂ ಹರಿ ಹೇಳಿದ.

ತನ್ನ ತಾಯಿಗಾಗಿ ಒಂದು ಲೋಟ ಚಹಾವನ್ನು ತೆಗೆದುಕೊಂಡು ಲೀಲ ಒಳಗೆ ಹೋದಳು. ಚಹಾಕ್ಕೆ ಸ್ವಲ್ಪ ಹೆಚ್ಚು ಹಾಲು ಹಾಕಿದಳು. ಬಾಗಿಲಿಗೆ ಹಾಕಿದ್ದ ಪರದೆಯನ್ನು ಪಕ್ಕಕ್ಕೆ ಸರಿಸಿ ಒಳಗೆ ಹೋದಳು. ಹಳೆಯ ಬೂದು ಬಣ್ಣದ ದುಪ್ಪಟಿಗಳನ್ನು ಹಾಸಿದ್ದ ಹಗ್ಗದ ಮಂಚದ ಮೇಲೆ ತಾಯಿ ಮಲಗಿದ್ದಳು. ಅವಳೂ ಮುದುರಿ ಹೋದ ಒಂದು ದುಪ್ಪಟಿಯಂತೆ ಕಾಣುತ್ತಿದ್ದಳು. ಅವಳಿಗೋ ದೀರ್ಘ ಕಾಲದಿಂದ ಕಾಯಿಲೆ. ಕಾಯಿಲೆ ಏನೆಂಬುದು ಯಾರಿಗೂ ತಿಳಿಯದು. ಅವಳಿಗೆ ನೋವಾಗಲಿ, ಜ್ವರವಾಗಲಿ ಇರಲಿಲ್ಲ. ಆದರೆ ದಿನದಿನವೂ ದುರ್ಬಲಳಾಗುತ್ತಿದ್ದಳು. ತಾನೇ ಸ್ವತಃ ಎದ್ದು ಚಹವನ್ನೂ ಕುಡಿಯಲಾರಳು. ಲೀಲಳೇ ಅವಳ ತಲೆಯನ್ನೆತ್ತಿ ಸ್ವಲ್ಪ ಚಹಾ ಕುಡಿಸುವಳು. ತುಂಬಾ ನಿತ್ರಾಣಳಾಗಿದ್ದ ತಾಯಿಯನ್ನು ಲೀಲ ಚೆನ್ನಾಗಿ ನೋಡಿಕೊಳ್ಳುತ್ತಿದ್ದಳು.

ಕತ್ತಲೆಯ ಆ ಕೊಠಡಿಯ ಮತ್ತೊಂದು ಮೂಲೆಯಲ್ಲಿ ಚಾಪೆಯೊಂದರ ಮೇಲಿದ್ದ ಕುಪ್ಪೆಯತ್ತ ತನ್ನ ತಲೆಯನ್ನು ತಿರುಗಿಸಲೂ ಲೀಲ ಇಷ್ಟಪಡಲಿಲ್ಲ. ಆ ಕುಪ್ಪೆಯೂ ಅಲುಗಲಿಲ್ಲ. ಆದರೆ, ತಡೆ ತಡೆದು ಗಟ್ಟಿಯಾಗಿ, ಉಸಿರುಬಿಡುತ್ತಾ ಗುರುಗುಡುತ್ತಿತ್ತು. ಅತ್ತಲಿಂದ ದುರ್ವಾಸನೆಯೂ ಬರುತ್ತಿತ್ತು. ಆ ಹುಳಿಹೆಂಡದ ಕೆಟ್ಟ ವಾಸನೆಯನ್ನು ಲೀಲ ಎಷ್ಟೇ ದೂರದಿಂದಲಾದರೂ ಪತ್ತೆಹಚ್ಚುತ್ತಿದ್ದಳು. ಚಿಕ್ಕ ಹುಡುಗಿಯಾದಾಗಿನಿಂದ ಪರಿಚಯವಿದ್ದ ಆ ದುರ್ವಾಸನೆಯನ್ನು ಅವಳು ದ್ವೇಷಿಸುತ್ತಿದ್ದಳು. ಲೀಲ ತನ್ನ ಮೂಗನ್ನು ಸಿಂಡರಿಸಿ, ತನ್ನ ತಂದೆ ಮಲಗಲು ಇನ್ನಾವುದಾದರೂ, ಮೂಲೆ ಹಿಡಿಯಬೇಕಿತ್ತೆಂದೂ ಹೆಂಡದ ದುರ್ವಾಸನೆ-ಯಿಂದ ಕೊಠಡಿಯನ್ನು ಹೊಲಸು ಮಾಡಬಾರದಿತ್ತೆಂದೂ ಆಶಿಸಿದಳು. ಆದರೆ ಅವನಿಗೆ ಹೀಗೆ ಹೇಳಲು ಯಾರಿಗೂ ಧೈರ್ಯವಿರಲಿಲ್ಲ.

''ಲೀಲಾ, ಹುಡುಗಿಯರು ಶಾಲೆಗೆ ಹೋದರೆ?''ತಾಯಿ ಕೇಳಿದಳು.

''ಹೌದು.''



"ಹರಿ ಹೊಲಕ್ಕೆ ಹೋದನೆ?"

"ಹೋದ."

"ನೀನೇ ಕಸ ಗುಡಿಸಬೇಕು, ಪೇಟೆಗೆ ಹೋಗಬೇಕು, ಅಡಿಗೆ ಮಾಡಬೇಕು."

"ಹೌದಮ್ಮ" ಅಂದಳು ಲೀಲ. ಅವಳು ಶಾಲೆಗೆ ಹೋಗುವುದನ್ನು ಬಹಳ ಹಿಂದೆಯೇ ಬಿಟ್ಟಿದ್ದಳು. ಇದರಿಂದಾಗಿ ಅವಳಿಗೆ ಮನೆಯಲ್ಲೇ ಇದ್ದು ಅಡಿಗೆ ಮಾಡುವುದು, ಕಸಮುಸುರೆ ಮತ್ತು ಬಟ್ಟೆಯೊಗೆಯುವುದು ಹಾಗೂ ಇತರರನ್ನೂ ನೋಡಿಕೊಳ್ಳುವುದು ಸಾಧ್ಯವಾಗಿತ್ತು. ಕೆಲಸ ಮಾಡಲು ಲೀಲ ಎದ್ದಳು.

ಬೇಲ ಮತ್ತು ಕಮಲ ತಮ್ಮ ಪುಸ್ತಕಗಳನ್ನು ಹಿಡಿದು ಹಳ್ಳಿಯ ಹಾದಿಯಲ್ಲಿ ಓಡುತ್ತಿದ್ದರು. ಕೈಯಲ್ಲಿ ರೆಂಬೆ ಹಿಡಿದಿದ್ದ ಹರಿ ಅವರನ್ನು ಅಟ್ಟಿಸಿಕೊಂಡು ಹೋಗುವಂತೆ ನಟಿಸುತ್ತಿದ್ದ.

ದೂಳಿನಿಂದ ತುಂಬಿದ್ದ ಹಳ್ಳಿಯ ಹಾದಿಯ ಇಕ್ಕೆಲಗಳಲ್ಲೂ ಎತ್ತರವಾದ ತೆಂಗು ಮತ್ತು ಅಡಿಕೆ ಮರಗಳಿದ್ದವು. ಆ ಮಾರ್ಗದ ಬದಿಗಳಲ್ಲಿ ಹುಲ್ಲಿನ ಜೋಪಡಿಗಳಿರಲಿಲ್ಲ. ಬದಲಾಗಿ ಮರದ ಬಾಗಿಲುಗಳು ಮತ್ತು ಕಬ್ಬಿಣದ ಸರಳಿನ ಕಿಟಕಿಗಳುಳ್ಳ ಉಯ್ಯಾಲೆಗಳಿದ್ದು ಅವುಗಳ ಮೇಲೆ ಹಿತವಾದ ಬಿಸಿಲಿಗೆ ಮೈಯೊಡ್ಡಿ ತೂಕಡಿಸುತ್ತಿದ್ದ ಮುದುಕರು ಕುಳಿತಿದ್ದರು. ಬಿಳಿಯ ಬೆಕ್ಕು ನೆಲದ ಮೇಲೆ ಮಲಗಿ ನಿದ್ರಿಸುತ್ತಿತ್ತು. ಅಂಗಡಿಗಳಲ್ಲಿ ದಾಸವಾಳದ ಗಿಡಗಳು ಹೂಗಳಿಂದ ಕಂಗೊಳಿಸುತ್ತಿದ್ದವು. ಅಂಚೆ ಕಛೇರಿಯು ಇನ್ನೂ ತೆರೆದಿರಲಿಲ್ಲ. ಆದರೆ ಅಕ್ಕಿ, ಗೋಧಿ, ಸಕ್ಕರೆ



ಮತ್ತು ಸೀಮೆಎಣ್ಣೆಯನ್ನು ಮಾರುವ ಒಂದೇ ಅಂಗಡಿ ತೆರೆದಿತ್ತು. ಬೇಲ ಮತ್ತು ಕಮಲ ಅಂಗಡಿಯ ಮುಂದೆ ನಿಂತರು.

''ಹೂಂ ಹೊರಡಿ, ಹೊರಡಿ. ಈಗಾಗಲೇ ತುಂಬಾ ಹೊತ್ತಾಗಿದೆ'' ಹರಿ ಗದರಿಸುತ್ತಾ ತನ್ನ ಕೋಲನ್ನು ಎತ್ತಿದ.

''ಹರಿಯಣ್ಣಾ ನಮಗೆ ಮಿಠಾಯಿ ಕೊಡಿಸು'' ಅವರಿಬ್ಬರೂ ಹರಿಯನ್ನು ಗೋಗರೆಯುತ್ತಾ ಕೇಳಿದರು.

ಇಲ್ಲವೆಂದು ಹರಿ ಹೇಳಿದ. ''ಒಂದೇ ಒಂದು ಕೊಡಿಸು'' ಅವರು ಮತ್ತೆ ಬೇಡಿದರು.

ಹರಿ ಇಲ್ಲವೆನ್ನುವಂತೆ ತಲೆಯಾಡಿಸಿ ಗೊಣಗಿದ. ಅವನು ಗಂಭೀರವಾದುದನ್ನು ಕಂಡು ಅವನ ತಂಗಿಯರು ನಿರಾಶೆಯಿಂದ ನಡೆದು ಹೋದರು.

ಗ್ರಾಮದ ಕೊನೆಯಲ್ಲಿನ ಕೆರೆಯಲ್ಲಿ ಮೊಣಕಾಲವರೆಗೆ ನೀರಿನಲ್ಲಿ ನಿಂತ ಎಮ್ಮೆಗಳು ನೀರು ಕುಡಿಯುತ್ತಿವೆ, ಇಲ್ಲವೆ ಸ್ನಾನ ಮಾಡುತ್ತಿವೆ. ಕಮಲ ಪುಷ್ಪಗಳು ಅರಳುತ್ತಿವೆ. ಕಡುಗೆಂಪಿನ ಎಲೆಗಳು ಮತ್ತು ಕಾಂಡದೊಡನೆ ಕಡುಗೆಂಪಿನ ಹೂಗಳು, ಹಸಿರು ಎಲೆಗಳು ಮತ್ತು ಹಸಿರು ಕಾಂಡದೊಡನೆ ಅಚ್ಚಬಿಳಿಯ ಪುಷ್ಪಗಳು ಕಂಗೊಳಿಸುತ್ತಿವೆ. ದೊಡ್ಡ ಅಗಲವಾದ ಮತ್ತು ದುಂಡನೆಯ ಎಲೆಗಳ ನಡುವೆ ಬಾತುಕೋಳಿಗಳು ಸಂಚರಿಸುತ್ತಿವೆ. ಬಿಳಿಯ ಹೇರಾನ್ ಪಕ್ಷಿಗಳು ಆಳವಿಲ್ಲದ ನೀರಿನಲ್ಲಿ ನಿಂತು ಮೀನು ಹಿಡಿಯುತ್ತಿವೆ. ದೂರದ ತೀರದಲ್ಲಿ ಹೆಂಗಸರು ಹರಟೆ ಹೊಡೆಯುತ್ತ ಕಲಕಲ ಶಬ್ದ ಮಾಡುತ್ತಿದ್ದಾರೆ. ಅವರು ನಗುನಗುತ್ತಾ ಚಪ್ಪಟೆಯ ಕಲ್ಲುಗಳ ಮೇಲೆ ಬಟ್ಟೆ ಒಗೆಯುತ್ತಿದ್ದಾರೆ. ಉಜ್ವಲವಾದ ಕಡುಗೆಂಪು, ಕಿತ್ತಳೆ ಹಾಗೂ ಹಸಿರು ಸೀರೆಗಳನ್ನುಟ್ಟ ಅವರು ತಮ್ಮ ಸೀರೆಗಳ ಅಂಚನ್ನು ಎತ್ತಿ ಸೊಂಟಕ್ಕೆ ಸಿಕ್ಕಿಸಿದ್ದಾರೆ.

ರಸ್ತೆಯಲ್ಲಿ ದೂಳು ಎದ್ದಿದೆ. ಹಾದಿಯಲ್ಲಿ ಕೊರಕಲು ಜಾಡುಗಳುಂಟಾಗಿವೆ. ಆ ಜಾಡುಗಳಲ್ಲಿ ಮಕ್ಕಳು ಓಡುತ್ತಿದ್ದಾರೆ. ಖಾಕಿ ನಿಕ್ಕರ್ ಮತ್ತು ಬಿಳಿಯ ಷರ್ಟುಗಳನ್ನು ಹಾಕಿಕೊಂಡ ಶಾಲಾ ಬಾಲಕರು ಆ ಹಾದಿ ಹೆದ್ದಾರಿಗೆ ಸೇರುವ ಸ್ಥಳದಲ್ಲಿ ಬಲ ಭಾಗದಲ್ಲಿರುವ ಶಾಲೆಗೆ ಹೋಗುತ್ತಿದ್ದಾರೆ. ಎಡ ಭಾಗದಲ್ಲಿರುವ ಬಾಲಕಿಯರ ಶಾಲೆಗೆ ಕಡುಗೆಂಪು ಬಣ್ಣದ ಸ್ಕರ್ಟ್ ಮತ್ತು ಬಿಳಿಯ ಬ್ಲೌಸ್‌ಗಳನ್ನು ತೊಟ್ಟ ಬಾಲಕಿಯರು ಹೋಗುತ್ತಿದ್ದಾರೆ. ಅಲ್ಲೇ ಬೆಟ್ಟದ ತಪ್ಪಲಲ್ಲಿ ಒಂದು ಗುಡಿಯಿದೆ. ಹಿಂದೆ ಇದೇ ಬಾಲಕರ ಶಾಲೆಗೆ ಹೋಗುತ್ತಿದ್ದ ಹರಿ ಶಾಲೆ ಬಿಟ್ಟು ಕೃಷಿ ಕೆಲಸ ಮಾಡುತ್ತಿದ್ದಾನೆ. ಅವನ ತಂದೆ ನೆಪ ಮಾತ್ರಕ್ಕಾಗಿಯೂ ಜಮೀನಿನಲ್ಲಿ ಕೆಲಸ ಮಾಡುತ್ತಿಲ್ಲ. ಹರಿ ಬೆಟ್ಟದ ತಪ್ಪಲವರೆಗೂ ಬಂದ. ದೂಳಿನಿಂದ ಕೂಡಿದ ಮೈದಾನದ ಮಧ್ಯದಲ್ಲಿ ತಗಡಿನ ಛಾವಣಿಯ ತಮ್ಮ ಶಾಲೆಗೆ ಬೇಲ ಮತ್ತು ಕಮಲ ಹೊರಟರು. ಹರಿ ಹಿಂದಿರುಗಿದ.

ಅವನು ಹಿಂತಿರುಗಿದಾಗ ಫಳಫಳನೆ ಹೊಳೆಯುತ್ತಿದ್ದ ಉಬ್ಬುತಗ್ಗಿನ ಜಿಂಕ್‌ಶೀಟ್‌ನ ನಾಲ್ಕು ಗೋಡೆಗಳನ್ನೂ, ಹುಲ್ಲಿನ ಛಾವಣಿಯನ್ನೂ ಹೊಂದಿದ್ದ ಹೊಸ ಗುಡಿಸಿಲೊಂದನ್ನು ಕಂಡ. ಹಿಂದೆ ಅವನು ಅದನ್ನು ಕಂಡಿರಲಿಲ್ಲ. ಆ ಗುಡಿಸಿಲ ಮುಂದೆ ಉಕ್ಕಿನ ಕೊಳವೆಗಳಿಂದ ತುಂಬಿದ ಹಳದಿ ಲಾರಿಯೊಂದು ನಿಂತಿತ್ತು.

ಹಳ್ಳಿಯಲ್ಲಿ ಸಾಮಾನ್ಯವಾಗಿ ಹೊಸತಾವುದೂ ಕಾಣುತ್ತಿರಲಿಲ್ಲವಾದ್ದರಿಂದ,

ಉಳಿದವರಂತೆ ಹರಿಗೂ ಆ ಹೊಸ ಬೆಳವಣಿಗೆಯ ಬಗ್ಗೆ ಕುತೂಹಲವುಂಟಾಯಿತು. ಸಣ್ಣ ಕಲ್ಲೊಂದನ್ನು ಕೈಯಿಂದ ಕೈಗೆ ಆಡಿಸುತ್ತಾ ಅವನು ಲಾರಿಯತ್ತ ಹೊರಟ. ಸುತ್ತ ಮುತ್ತ ಯಾರೂ ಇರಲಿಲ್ಲ. ಗುಡಿಸಿಲ ಬಾಗಿಲು ತೆರೆದಿತ್ತು. ಅಲ್ಲಿ ನೆಲದ ಮೇಲೆ ಒಂದು ಒಲೆಯೂ, ಕೆಲವು ಕುಡಿಕೆಮಡಕೆಗಳೂ ಇದ್ದದ್ದು ಕಾಣುತ್ತಿತ್ತು. ಲಾರಿಯನ್ನು ಪರೀಕ್ಷಿಸಲು ಹರಿ ಹೊರಟ. ಮುಂದಿನ ಸೀಟಿನಲ್ಲಿ ಮಲಗಿದ್ದ ಲಾರಿ ಚಾಲಕನು ತನ್ನ ಬರಿಗಾಲುಗಳನ್ನು ಕಿಟಿಕಿಯಾಚೆಗೆ ಹಾಕಿದ್ದ. ಆ ಉಕ್ಕಿನ ಕೊಳವೆಗಳನ್ನು ಯಾರು ಕಳಿಸಿರಬಹುದು ಮತ್ತು ಏಕೆ ಎಂಬ ವಿಷಯದಲ್ಲಿ ಹರಿಗೆ ಜಿಜ್ಞಾಸೆ ಉಂಟಾಯಿತು. ಚಾಲಕ ಗಟ್ಟಿಯಾಗಿ ಗೊರಕೆ ಹೊಡೆಯುತ್ತಿದ್ದ.

ಹರಿ ವಾಪಸ್ ಹೊರಟ. ರಸ್ತೆಯಲ್ಲಿ ದೂಳೆಬ್ಬಿಸಿಕೊಂಡು ಸೈಕಲ್ ಮೇಲೆ ಬರುತ್ತಿದ್ದ ಹಳ್ಳಿಯ ಹುಡುಗನೊಬ್ಬನನ್ನು ನೋಡಿದ.

''ಏ, ರಾಮು, ಇಲ್ಲಿ ಮನೆ ಕಟ್ಟಲು ಯಾರು ಬಂದಿದ್ದಾರೆ?'' ಹರಿ ಕೇಳಿದ.

ರಾಮು ಸೈಕಲ್ ನಿಲ್ಲಿಸಿದ. ಹರಿ ತನ್ನ ಬಳಿಗೆ ಬರುವವರೆಗೆ ನಿಂತ.

''ನಿನಗೆ ಗೊತ್ತಿಲ್ಲವಾ? ಹಳ್ಳಿಯಲ್ಲಿ ಎಲ್ಲರೂ ಇದೇ ವಿಷಯ ಮಾತನಾಡುತ್ತಿದ್ದಾರೆ'' ರಾಮು ಹೇಳಿದ.

''ನಾನು ಹಳ್ಳಿಗೆ ಹೋಗುವುದೇ ಇಲ್ಲ. ಅಲ್ಲಿ ಅವರೆಲ್ಲಾ ಮಾಡುವುದೆಂದರೆ ಬರೀ ಕುಡಿಯುವುದು ಅಷ್ಟೆ'' ಹರಿ ಹೇಳಿದ. ಪಡಖಾನೆಯ ಹೊರಗೆ ತನ್ನ ತಂದೆಯನ್ನು ಕಾಣಲು ತನಗೆ ಹೆದರಿಕೆ ಎಂಬುದನ್ನಾಗಲೀ, ಹಳ್ಳಿಯ ಅಂಗಡಿಗಳಲ್ಲಿ ಏನನ್ನಾದರೂ ಕೊಳ್ಳಲು ತನ್ನಲ್ಲಿ ಹಣವಿಲ್ಲ ಎಂಬುದನ್ನಾಗಲೀ ಹರಿ ಹೊರಗೆಡಹಲಿಲ್ಲ.

''ಇದೊಂದು ಕಾರ್ಖಾನೆಯಾಗುತ್ತದೆಯೆ?'' ಹರಿ ತಗಡಿನ ಹೊಸ ಗುಡಿಸಿಲಿನತ್ತ ಕೈ ತೋರಿಸುತ್ತಾ ಅಪಹಾಸ್ಯದಿಂದ ನಗಲಾರಂಭಿಸಿದ.

''ಓ, ಅದು ಕಾವಲುಗಾರನ ಗುಡಿಸಿಲು ಅಷ್ಟೆ. ಮೊದಲು ಅವರು ಕಾವಲುಗಾರನನ್ನು ಕಳಿಸುತ್ತಾರೆ. ನಂತರ ಸರಕು-ಸಾಮಗ್ರಿಗಳು ಬರುತ್ತವೆ. ಅವುಗಳನ್ನು ಅವನು ಕಾಯುತ್ತಿರುತ್ತಾನೆ. ಆನಂತರ ಮಣ್ಣಗೆಯುವ ಮತ್ತು ಮಣ್ಣು ಎತ್ತುವ ಯಂತ್ರಗಳನ್ನೂ ಹಾಗೂ ಆವಿಯ ಉರುಳೆ ಯಂತ್ರಗಳನ್ನೂ ಕಳಿಸುತ್ತಾರೆ. ಹೆದ್ದಾರಿಯನ್ನು ಇನ್ನೂ ಎರಡರಷ್ಟು ಅಗಲ ಮಾಡುತ್ತಾರೆ. ಆಗ ಮಾತ್ರ ಅವರು ತಮ್ಮ ದೊಡ್ಡ ಯಂತ್ರಗಳನ್ನು ತರುವುದು ಸಾಧ್ಯ. ಆನಂತರ ಅವರು ತಮ್ಮ ಕೆಲಸಗಾರರಿಗೆ ಮನೆಗಳನ್ನು ಕಟ್ಟುತ್ತಾರೆ. ಕೆಲಸಗಾರರು ಬರುತ್ತಾರೆ. ಕಾರ್ಖಾನೆಗಳನ್ನು ನಿರ್ಮಿಸಲಾಗುವುದು.''

ರಾಮುವಿನ ವರ್ಣನೆಯನ್ನಾಗಲಿ, ಭವಿಷ್ಯದಲ್ಲಿ ಅಲ್ಲಿ ಬರಬಹುದಾದ ಬದಲಾವಣೆಗಳನ್ನಾಗಲಿ ಹರಿ ನಂಬುವುದೇ ಕಷ್ಟವಾಯಿತು. ತಗಡಿನ ಗುಡಿಸಿಲಾಗಲಿ, ಮಲಗಿನಿದ್ರಿಸುತ್ತಿದ್ದ ಚಾಲಕನಿರುವ ಹಳದಿ ಲಾರಿಯಾಗಲಿ ಇಂತಹ ಬೃಹತ್ ಬದಲಾಣೆಗೆ ಪ್ರಾರಂಭವೆಂದು ಅವನಿಗನಿಸಲಿಲ್ಲ.

''ಅಂದ ಮೇಲೆ ಬೆಟ್ಟದ ಮತ್ತು ಅದರ ಮೇಲಿರುವ ಗುಡಿಯ ಗತಿಯೇನು?'' ಹರಿ ಕೇಳಿದ. ಅವನಿಗೆ ರಾಮುವಿನ ಕಥೆಯಲ್ಲಿ ಸ್ವಲ್ಪವೂ ನಂಬಿಕೆ ಬರಲಿಲ್ಲ. ಹುಲ್ಲಿನ ಕಂತೆಯನ್ನು ಕತ್ತರಿಸುವ ರೀತಿಯಲ್ಲಿ ರಾಮು ತನ್ನ ಕೈ ಆಡಿಸುತ್ತಾ, ''ಅವರು ಅದನ್ನೂ ಕತ್ತರಿಸಿ ಹಾಕುತ್ತಾರೆ. ನೆಲಸಮ ಮಾಡುತ್ತಾರೆ. ಅದರ ಮೇಲೆ ಕಾರ್ಖಾನೆ ಕಟ್ಟುತ್ತಾರೆ'' ಎಂದು

ಹೇಳಿದ.

"ಓ.. ಹೋ" ರಾಮು ಹೇಳಿದ್ದನ್ನು ನಂಬದ ನಕ್ಕ. ಬೆಟ್ಟವಾಗಲಿ, ಗುಡಿಯಾಗಲಿ ಕಣ್ಮರೆಯಾಗುವುದು ಹೇಗೆ ತಾನೇ ಸಾಧ್ಯ? ತನ್ನ ಇಡೀ ಜೀವನದುದ್ದಕ್ಕೂ ಏಕೆ, ತನ್ನ ತಂದೆ ಮತ್ತು ತಾತನ ಕಾಲದಿಂದಲೂ ಅವು ಅಲ್ಲಿವೆ. ರಾಮು ಖಂಡಿತ ಕಟ್ಟು ಕಥೆಯೊಂದನ್ನು ಹೇಳುತ್ತಿದ್ದಾನೆ. "ಇರಲಿ, ನೋಡೋಣ. ಅಂದ್ಹಾಗೆ ನಿನ್ನ ಈ ಅದ್ಭುತ ಕಾರ್ಖಾನೆಯಲ್ಲಿ ತಯಾರಿಸುವುದಾದರೂ ಏನನ್ನು?" ಹರಿ ಕೇಳಿದ.

"ಅದು ನನ್ನದಲ್ಲ. ಆದರೂ ಅವರು ನನಗೊಂದು ಕೆಲಸ ಕೊಡುತ್ತಾರೆ. ಕಾರ್ಖಾನೆಯಲ್ಲಿ ಕೆಲಸ ಮಾಡಲು ಅವರಿಗೆ ಜನ ಬೇಕು. ಆದ್ದರಿಂದ ನಮಗೆ ಕೆಲಸ ಸಿಗುತ್ತದೆ." ರಾಮು ಭಾವುಕನಾಗಿ ಕೈ ಅಲ್ಲಾಡಿಸುತ್ತಾ ಗಟ್ಟಿಯಾಗಿ ಹೇಳಿದ. ಅವರಿಬ್ಬರೂ ಗ್ರಾಮದ ಕೆರೆಯ ಬಳಿಗೆ ಬಂದರು. ಅಲ್ಲಿಂದ ರಸ್ತೆಯು ಮಟ್ಟಸವೂ ಸುಗಮವೂ ಆಗಿತ್ತು. ರಾಮು ಸೈಕಲ್ ಏರಿ ಪೆಡಲು ತುಳಿಯುತ್ತಾ ಕೂಗಿದ, "ನಮಗೆ ಕೆಲಸಗಳು ಸಿಗುತ್ತವೆ. ಹರಿ, ನೋಡುತ್ತಿರು ನಮಗೆ ಕೆಲಸಗಳು ಸಿಗುತ್ತವೆ."

***

ತನ್ನ ಗುಡಿಸಲ ಹಿಂಭಾಗದ ಜಮೀನಿನಲ್ಲಿ ಕೆಲಸ ಮಾಡುತ್ತಾ ಹರಿ ಇಡೀ ಬೆಳಿಗ್ಗೆ ಅದೇ ವಿಷಯವನ್ನು ಕುರಿತು ಆಲೋಚಿಸಿದ. ಚಳಿಗಾಲದ ಕಾಯಿಪಲ್ಲೆಗಾಗಿ ನೆಲವನ್ನು ಸಿದ್ಧಪಡಿಸಲು, ತನ್ನ ಚಿಕ್ಕ ಜಮೀನನ್ನು ಅಗೆದು ಕಲ್ಲುಗಳನ್ನೂ ಬೇರುಗಳನ್ನೂ ಕಿತ್ತು ತೆಗೆಯುತ್ತಿದ್ದಾಗ ಹರಿಯ ಕಿವಿಗಳಲ್ಲಿ ಇದೇ ಮಾತುಗಳು ಗುಂಯ್‌ಗುಡುತ್ತಿದ್ದವು: "ಕೆಲಸ, ಕಾರ್ಖಾನೆ, ಅನೇಕ ಹುದ್ದೆಗಳು, ಅನೇಕ ಕಾರ್ಖಾನೆಗಳು, ಕೆಲಸಗಳು-ಕಾರ್ಖಾನೆಗಳು, ಕಾರ್ಖಾನೆಗಳು-ಕೆಲಸಗಳು." ಬಿಸಿಲಿನಲ್ಲಿ ಬಗ್ಗಿ ಶ್ರಮಪಟ್ಟು ಬೇರುಗಳನ್ನು ಎಳೆದು ಕೀಳುತ್ತಾ ಮತ್ತೆ ಅಗೆಯುತ್ತಿದ್ದ ಹರಿಯ ಮೈಯಲ್ಲಿ ಬೆವರು ಇಳಿಯಲಾರಂಭಿಸಿತು. ಒಂದು ಸಲ ಚೂಪಾದ ಕಲ್ಲೊಂದು ಅವನ ಹೆಜ್ಜೆಗೆ ಚುಚ್ಚಿ ತುಂಬಾ ನೋವಾಯಿತು. ಮತ್ತೊಂದು ಸಲ ಹೂವಿನ ಬಲವಾದ ಪೊದೆಯೊಂದನ್ನು ಕತ್ತರಿಸಲು ಹೋದಾಗ ಬುಸುಗುಟ್ಟುತ್ತಿದ್ದ ಕಪ್ಪನೆಯ ಹಾವೊಂದು ಅತ್ತ ಸರಿದು ಪೊದೆಯಲ್ಲಿ ಅಡಗಿಕೊಂಡಾಗ ಅವನು ಆ ಕೆಲಸವನ್ನು ಅಲ್ಲಿಗೆ ಬಿಡಬೇಕಾಯಿತು. ಆದರೆ ಈ ಎಲ್ಲ ಸಮಯದಲ್ಲೂ ಅವನು ಕಾರ್ಖಾನೆ ಮತ್ತು ಕೆಲಸದ ಬಗ್ಗೆಯೇ ಆಲೋಚಿಸುತ್ತಿದ್ದ. ತನಗೂ ಒಂದು ಕೆಲಸ ಸಿಗುವುದೇ? ಕಾರ್ಖಾನೆಯಲ್ಲಿ ಕೆಲಸ ಮಾಡಿ ಹಣ ಸಂಪಾದಿಸುವುದು ತನಗೆ ಸಾಧ್ಯವೇ? ಇಲ್ಲ, ಶಾಲೆಯನ್ನೇ ಬಿಟ್ಟ ತನಗೆ ಕೆಲಸ ಸಿಗಲಾರದು. ತನಗೆ ಓದುವುದು ಬರೆಯುವುದು ಮತ್ತು ಲೆಕ್ಕ ಮಾಡುವುದು ಗೊತ್ತಿದ್ದರೂ ತಾನು ಯಾವ ಪರೀಕ್ಷೆಗೂ ಕೂತಿಲ್ಲ. ಹಾಗೂ ತನ್ನಲ್ಲಿ ಯಾವ ಪದವಿಯೂ ಇಲ್ಲ. ಆದ್ದರಿಂದ ತನಗೆ ಕೆಲಸ ಸಿಗುವುದಾದರೂ ಹೇಗೆ? ಆದರೆ, ಕಾರ್ಖಾನೆಯಲ್ಲಿ ಕೆಲಸಮಾಡಲು ಪದವಿಯ ಅಗತ್ಯವಾದರೂ ಇದೆಯೇ? ಕೈಯಿಂದ ಯಂತ್ರಗಳನ್ನೂ ಉಪಕರಣಗಳನ್ನೂ ನಿರ್ವಹಿಸಬಲ್ಲ ಯಾವುದೇ ವ್ಯಕ್ತಿಯಾದರೂ ಕೆಲಸಕ್ಕೆ ಯೋಗ್ಯ. ತಾನೂ ಅಂತಹವರಲ್ಲಿ ಒಬ್ಬ.

ಹರಿ ತನ್ನ ಕೈಗಳನ್ನು ನೋಡಿಕೊಳ್ಳಲಾರಂಭಿಸಿದ. ಹೌದು, ಇವು ಶ್ರಮಿಕನ ಕೈಗಳು. ಚಪ್ಪಟೆಯಾಗಿ, ಕಂದು ಬಣ್ಣಕ್ಕೆ ತಿರುಗಿ ಜಡ್ಡುಗಟ್ಟಿವೆ. ಇವು ಅಗೆತ ಮಾಡಿವೆ, ಬಿತ್ತನೆ ಕೆಲಸ ಮಾಡಿವೆ, ತೆಂಗಿನ ಮರ ಹತ್ತಿ ಕಾಯಿಗಳನ್ನು ಕಿತ್ತು ಸುಲಿದಿವೆ ಮತ್ತು ಕಡಲಲ್ಲಿ ಬಲೆಗಳನ್ನು

ಹರಡಿವೆಯೇ ವಿನಹ ಮತ್ತಾವ ಕೆಲಸವನ್ನೂ ಮಾಡಿಲ್ಲ. ಆದರೆ ಯಂತ್ರಗಳಲ್ಲಿ ಕೆಲಸ-ಮಾಡುವುದನ್ನು ತಾನು ಈ ಕೈಗಳಿಗೆ ಕಲಿಸಬಹುದು. ಇದು ಸಾಧ್ಯವೆಂಬ ನಂಬಿಕೆ ತನಗಿದೆ. ಆದರೆ ಪೂರ್ಣ ವಿಶ್ವಾಸವಿದೆಯೇ? ಇಲ್ಲ, ಪೂರ್ಣ ವಿಶ್ವಾಸವಿಲ್ಲ.

ಹರಿ ತನ್ನ ಕೈಗಳನ್ನೇ ದೃಷ್ಟಿಸಿ ನೋಡುತ್ತಾ ಹಾಗೆಯೇ ನಿಂತಿದ್ದಾಗ ಲೀಲ ಅಲ್ಲಿಗೆ ಬಂದಳು. ಅವಳು ತನ್ನ ಒಂದು ಕೈಯನ್ನು ಸೊಂಟದ ಮೇಲಿದ್ದ ಕೊಡದ ಮೇಲಿಟ್ಟು-ಕೊಂಡಿದ್ದಳು, ಮತ್ತೊಂದು ಕೈಯಲ್ಲಿ ಹರಿಗಾಗಿ ಬಟ್ಟೆಯಲ್ಲಿ ಸುತ್ತಿದ್ದ ರೊಟ್ಟಿಯ ಬುತ್ತಿ ಹಿಡಿದಿದ್ದಳು. ಕಪ್ಪು ಮತ್ತು ಬಿಳಿ ಮಿಶ್ರಿತ ಚಿಕ್ಕ ನಾಯಿಮರಿ ಪಿಂಟೊ ಅವಳ ಹಿಂದೆಯೇ ಬರುತ್ತಿತ್ತು. ಹರಿಯನ್ನು ಕಂಡೊಡನೆಯೇ ಅದು ಮುನ್ನುಗ್ಗಿ ಅವನ ಬಳಿಗೆ ಬಂತು. ಲೀಲ ನಿಧಾನವಾಗಿ ಅದರ ಹಿಂದೆ ಬಂದಳು. ಬರಿದಾದ ಜಮೀನಿನಲ್ಲಿ ಸುಮ್ಮನೆ ನಿಂತಿದ್ದ ಹರಿಯನ್ನು ಕಂಡು ಅವಳಿಗೆ ಬೇಸರವಾಯಿತು. ಆದರೆ ಅವಳು ಏನೂ ಹೇಳದೆ, ''ಇಗೋ, ತಿನ್ನು'' ಎಂದು ರೊಟ್ಟಿಯ ಬುತ್ತಿಯನ್ನು ಅವನ ಕೈಗೆ ಕೊಟ್ಟು ಸಮೀಪದ ಬಾವಿಯಿಂದ ನೀರು ತರಲು ಕೊಡದೊಡನೆ ಹೊರಟಳು.

ಹರಿ ಅವಳ ಹಿಂದೆಯೇ ಹೋಗಿ ನೀರು ಸೇದಲು ಅವಳಿಗೆ ಸಹಾಯ ಮಾಡಿದ. ಬಾವಿಯ ತಳದಲ್ಲಿ ನಿಂತಿದ್ದ ನೀರಿನಲ್ಲಿ ಬಿಂದಿಗೆಯನ್ನು ಬಿಟ್ಟು ಕಪ್ಪೆಗಳು ಬಿಂದಿಗೆಯೊಳಗೆ ಬರದಂತೆ ಎಚ್ಚರದಿಂದ ನೀರು ತುಂಬಿ ಭಾರವಾಗಿದ್ದ ಆ ಕೊಡವನ್ನು ಸೇದಿ ಮೇಲೆಳೆದುಕೊಂಡ. ನಂತರ ರೊಟ್ಟಿಯನ್ನು ತಿನ್ನಲು ಅಲ್ಲೇ ಬಾವಿಯ ಕಟ್ಟೆಯ ಮೇಲೆ ಕುಳಿತ. ಉಪ್ಪಿನಕಾಯಿ, ಉಪ್ಪು ಮತ್ತು ಕೆಲವು ಹಸಿ ಮೆಣಸಿನ ಕಾಯಿಗಳನ್ನು ಬಿಟ್ಟು ರೊಟ್ಟಿಯೊಡನೆ ತಿನ್ನಲು ಬೇರಾವ ವ್ಯಂಜನವೂ ಇರಲಿಲ್ಲ. ಆ ಮೆಣಸಿನಕಾಯಿಗಳನ್ನು ಲೀಲ ತಮ್ಮ ಗುಡಿಸಿಲ ಸಮೀಪದ ಗಿಡದಿಂದ ಕಿತ್ತು ತಂದಿದ್ದಳು.

ಲೀಲ ಸೊಂಟದ ಮೇಲೆ ತನ್ನ ಕೈಗಳನ್ನಿಟ್ಟುಕೊಂಡು ಅವನನ್ನೇ ನೋಡುತ್ತಾ ನಿಂತಳು.

''ನಾವೇನು ಮಾಡೋಣ?'' ಹಠಾತ್ತನೆ ಅವಳು ಕೇಳಿದಳು.

ಈ ಮಾತಿನ ಅರ್ಥವೇನೆಂಬುದು ಹರಿಗೆ ಚೆನ್ನಾಗಿ ಗೊತ್ತು. ಆದರೆ ಹಾಗೆ ಹೇಳಲು ಅವನಿಗೆ ಇಷ್ಟವಾಗಲಿಲ್ಲ. ಅವನಿಗೆ ಮಾತನಾಡುವ ಮನಸ್ಸೇ ಇಲ್ಲ. ಅಲ್ಲದೆ, ಅವನು ಹೆಚ್ಚು ಮಾತನಾಡುವವನೂ ಅಲ್ಲ. ಮಾತನಾಡುವ ಮುನ್ನ ಯಾವುದೇ ವಿಷಯವನ್ನಾದರೂ ಕುರಿತು ನಿಧಾನವಾಗಿ ಮತ್ತು ಜಾಗರೂಕತೆಯಿಂದ ಆಲೋಚಿಸಲು ಇಚ್ಛಿಸುತ್ತಿದ್ದ. ಆದ್ದರಿಂದ ಅವನು ಮಾತನಾಡದೆ ಒಣ ರೊಟ್ಟಿಯ ಜೊತೆ ಮೆಣಸಿನಕಾಯಿ ತಿನ್ನುವುದನ್ನು ಮುಂದುವರಿಸಿದ.

''ಅಪ್ಪ ಇನ್ನೂ ಮಲಗಿದ್ದಾನೆ. ಇಡೀ ದಿನ ಅವನು ಮಲಗೇ ಇರುತ್ತಾನೆ. ರಾತ್ರಿ ಎದ್ದು ಸೀದಾ ಪಡಖಾನೆಗೆ ಹೋಗುತ್ತಾನೆ.'' ಲೀಲ ಹೆಚ್ಚು ಕಡಿಮೆ ಅಳುತ್ತಾ ಹೇಳಿದಳು.

''ಹಾಳಾಗಲಿ ಬಿಡು'' ಹರಿ ಹೇಳಿದ.

''ಆ ಕೆಟ್ಟ ಮನುಷ್ಯರು ತಯಾರಿಸುವ ಆ ಹೆಂಡವನ್ನು ಕುಡಿದು ಅಪ್ಪ ಸಾಯುತ್ತಾನೆ, ಅಷ್ಟೆ.''

''ಹೋಗಲಿ ಬಿಡು'' ರೊಟ್ಟಿಯನ್ನು ಅಗಿಯುತ್ತಾ ಹರಿ ಮತ್ತೆ ಹೇಳಿದ.

''ಆದರೆ ಅಮ್ಮ? ಅಮ್ಮ?'' ಲೀಲ ಅಳುತ್ತಾ ಹೇಳಿದಳು, ''ಯಾರು ನಮ್ಮನ್ನು ನೋಡಿಕೊಳ್ಳುತ್ತಾರೆ?''

ಖಾರವಾದ ಮೆಣಸಿನಕಾಯಿಯ ತುದಿಯನ್ನು ಕಡಿದು ಉಗಿಯುತ್ತಾ ಹರಿ ಹೇಳಿದ, ''ಅಪ್ಪ ನಮ್ಮನ್ನು ನೋಡಿಕೊಳ್ಳುತ್ತಿಲ್ಲ. ನಮ್ಮನ್ನು ನಾವೇ ನೋಡಿಕೊಳ್ಳಬೇಕಲ್ಲವೇ?''

''ಆದರೆ ಹೇಗೆ?'' ಲೀಲ ಕೇಳಿದಳು.

''ನಾವಂತೂ ಶಾಲೆಗೆ ಹೋಗುತ್ತಿಲ್ಲ, ಬೇಲ ಮತ್ತು ಕಮಲ ಮಾತ್ರ ಹೋಗುತ್ತಿದ್ದಾರೆ. ಮುಂದಿನ ವರ್ಷ ಅವರಿಗೆ ಹೊಸ ಪುಸ್ತಕಗಳನ್ನು ಕೊಂಡು ಕೊಡುವಷ್ಟೂ ನಮಗೆ ಚೈತನ್ಯವಿಲ್ಲ. ನಾವು ಪ್ರತಿ ದಿನ ಈ ಒಣ ರೊಟ್ಟಿ. ಇಲ್ಲವೆ ಒಣ ಅನ್ನವನ್ನು ತಿನ್ನುವುದು ಬಿಟ್ಟು ಬೇರೇನನ್ನೂ ತಿನ್ನಲಾಗುತ್ತಿಲ್ಲ. ಮಲಬಾರಿಗಳಿಗೆ ನಮ್ಮ ತೆಂಗಿನ ಕಾಯಿಗಳನ್ನು ಮಾರಿದ ಸಮಯ ಬಿಟ್ಟು, ಉಳಿದಂತೆ ಪೇಟೆಯಲ್ಲಿ ಸಾಮಾನು ಕೊಳ್ಳಲು ನಮ್ಮಲ್ಲಿ ಹಣ ಇರುವುದಿಲ್ಲ. ನೀನು ಮೀನು ಹಿಡಿಯಲು ಹೋದಾಗ ಮಾತ್ರ ನಾವು ಮೀನು ತಿನ್ನಬಹುದು. ಅಮ್ಮ ಯಾವುದೇ ಔಷಧವಿಲ್ಲದೆ ಗುಣಮುಖಳಾಗುವುದಾದರೂ ಹೇಗೆ?''

ಹರಿ ಈಗ ತನ್ನ ಬೆನ್ನನ್ನು ಬಗ್ಗಿಸಿದ. ತನಗೆಲ್ಲಾ ಗೊತ್ತಿದ್ದು, ತಾನು ಸದಾ ಚಿಂತಿಸುತ್ತಿರುವ ಈ ಎಲ್ಲಾ ವಿಷಯಗಳ ಬಗ್ಗೆ ಲೀಲ ಏನನ್ನೇ ಹೇಳುವುದಾಗಲಿ, ಅಳುವುದಾಗಲಿ ಅವನಿಗೆ ಹಿಡಿಸಲಿಲ್ಲ. ತಾನು ಮಾಡುವುದಾದರೂ ಏನು? ಜಮೀನಿನಲ್ಲಿ ಕೆಲಸ ಮಾಡುತ್ತಾನೆ, ಸಮಯವಿದ್ದಾಗ ಬಲೆಯನ್ನು ಕಡಲ ತೀರಕ್ಕೆ ಒಯ್ದು ಮೀನುಗಳನ್ನು ಹಿಡಿಯುತ್ತಾನೆ. ಇದಕ್ಕಿಂತ ಹೆಚ್ಚಾಗಿ ಇನ್ನೇನು ತಾನೆ ಮಾಡುವುದು ತನಗೆ ಸಾಧ್ಯ? ನಿಜ, ಇಷ್ಟೇ ಸಾಲದೆಂಬುದು ಅವನಿಗೂ ಗೊತ್ತು. ಆದರೆ ಇಷ್ಟು ಮಾತ್ರ ಅವನು ಮಾಡಬಲ್ಲ.

''ನಾನೇನು ಮಾಡಲಿ?'' ಹರಿ ಗೊಣಗಿದ, ''ನನ್ನಿಂದಾಗುವಷ್ಟು ನಾನು ಮಾಡುತ್ತಿದ್ದೇನೆ.''

''ನನಗೂ ಗೊತ್ತು'' ಎಂದು ಹೇಳಿದ ಲೀಲಳ ಕಣ್ಣಿಂದ ನೀರಿಳಿಯಲಾರಂಭಿಸಿತು. ''ಆದರೆ ನಾವೀಗ ಇನ್ನೂ ಏನಾದರೂ ಹೆಚ್ಚಿಗೆ ಮಾಡಬೇಕೆಂದು ನಿನಗನಿಸುವುದಿಲ್ಲವೆ, ಹರಿ?''

ಹರಿ ರೊಟ್ಟಿ ಅಗಿಯುವುದನ್ನು ನಿಲ್ಲಿಸಿದ. ಉಳಿದ ರೊಟ್ಟಿಗಳನ್ನು ಬದಿಗ ಸರಿಸಿದ. ''ಏನಾದರೊಂದು ಆಗುತ್ತದೆ'' ಹರಿ ಹೇಳಿದ, ''ಥಾಲ್‌ನಲ್ಲಿ ಕಾರ್ಖಾನೆಯೊಂದನ್ನು ನಿರ್ಮಿಸಲಾಗುವುದೆಂದು ಹಳ್ಳಿಯ ಹುಡುಗರು ಹೇಳುತ್ತಿದ್ದಾರೆ. ಅಲ್ಲಿ ಪ್ರತಿಯೊಬ್ಬರಿಗೂ ಕೆಲಸ ಸಿಗುವುದಂತೆ. ಬಹುಶಃ ನನಗೂ ಸಿಗಬಹುದು.''

''ಯಾವಾಗ?'' ಲೀಲ ಕಾತುರದಿಂದ ಕೇಳಿದಳು.

''ನನಗೆ ಗೊತ್ತಿಲ್ಲ. ಈಗಂತೂ ಅಲ್ಲ. ಇನ್ನೂ ಹೆಚ್ಚು ಸಮಯವೇ ಹಿಡಿಯಬಹುದು. ಈ ಮಧ್ಯೆ ನಾನೂ ಬೇರಾವುದಾದರೂ ಕೆಲಸಕ್ಕೆ ಪ್ರಯತ್ನಿಸುತ್ತೇನೆ.''

''ಮುಂದಿನ ಸಲ ಡಿಸಿಲ್ವಾ ಮುಂಬೈನಿಂದ ಬಂದಾಗ ನನ್ನನ್ನೂ ತಮ್ಮೊಡನೆ ಕರೆದುಕೊಂಡು ಹೋಗಬಹುದೇ ಮತ್ತು ನನಗೊಂದು ಕೆಲಸ ಕೊಡಬಹುದೇ ಎಂದು ಕೇಳುತ್ತೇನೆ.'' ಈ ಯೋಚನೆ ಅವನಿಗೆ ಆಗಾಗ ಬರುತ್ತಿತ್ತು. ಆದರೆ ಹಿಂದೆ ಯಾವಾಗಲೂ ಈ ಬಗ್ಗೆ ಮಾತನಾಡಿರಲಿಲ್ಲ.

''ಏನು ಮುಂಬೈನಲ್ಲೇ?'' ಅವಳು ಕೇಳಿದಳು, ''ಅಂದರೆ ನೀನು ನಮ್ಮನ್ನು ಬಿಟ್ಟು ಹೋಗುವಿಯಾ, ಹರಿ ?''

''ಹೌದು, ನಾನು ಇಲ್ಲೇ ಇರುವುದಾದರೆ ಮೀನು ದೋಣಿಯಲ್ಲಿ ಕೆಲಸ ಮಾಡಬೇಕು. ನಾನು ಅದನ್ನೂ ವಿಚಾರಿಸುತ್ತೇನೆ.''

ಲೀಲ ಒಪ್ಪಿಗೆಯಿಂದ ತಲೆದೂಗಿದಳು. ಹರಿ ದೊಡ್ಡವನಾಗಿ ಬೆಳೆಯುತ್ತಿದ್ದು, ಸದ್ಯದಲ್ಲೇ ಕೆಲಸ ದೊರಕಿಸಿಕೊಂಡು ಸಂಪಾದಿಸುವಂತಾಗುತ್ತಾನೆ ಎಂಬ ವಿಷಯ ಅವಳಿಗೆ ಸಮಾಧಾನವುಂಟು ಮಾಡಿತ್ತು. ನಿಜ, ಅವನಿನ್ನೂ ಚಿಕ್ಕವನು; ತನಗಿಂತ ಒಂದು ವರ್ಷ ಚಿಕ್ಕವನು. ಪ್ರೌಢ ವ್ಯಕ್ತಿಯಂತೆ ಕೆಲಸ ಮಾಡಿ, ಹಣ ಸಂಪಾದಿಸುವನೆಂದು ಯಾರೂ ನಿರೀಕ್ಷಿಸುವುದಿಲ್ಲ. ತಮ್ಮ ಮನೆ ಮತ್ತು ಕುಟುಂಬಕ್ಕೆ ಬದಲಾವಣೆಯು ಹಠಾತ್ತನೆ ಮತ್ತು ಕ್ಷಿಪ್ರವಾಗಿ ಬರುವುದಿಲ್ಲ. ಆದರೆ ಖಂಡಿತ ಬರುತ್ತದೆ. ಇಂತಹ ಬದಲಾವಣೆ ಬರುವುದೆಂದು ಅವಳು ನಂಬಲೇಬೇಕಾಗಿದೆ.

ಲೀಲ ಎದ್ದು ನಿಂತು ಭಾರವಾದ ಕೊಡವನ್ನು ಎತ್ತಲು ಬಾಗಿದಳು. ಅವಳಿಗೆ ಸಹಾಯ ಮಾಡಲು ಹರಿಯೂ ಎದ್ದ. ಅದನ್ನೆತ್ತಿ ಅವಳು ತಲೆಯ ಮೇಲಿಟ್ಟುಕೊಂಡಳು. ಸಮತೋಲನ-ಕ್ಕಾಗಿ ಅವಳು ಕ್ಷಣಕಾಲ ನಿಂತು, ಗುಡಿಸಿಲತ್ತ ಹೆಜ್ಜೆ ಹಾಕಿದಳು. ಪಿಂಟೊ ಸಹ, ಎಂದಿನಂತೆ ವಿಧೇಯತೆಯಿಂದ ಅವಳ ಹಿಂದೆ ಹೊರಟಿತು.

* * *

ಹರಿಗೆ ಮತ್ತೆ ಕೆಲಸಮಾಡುವುದು ಸಾಧ್ಯವಾಗಲಿಲ್ಲ. ಭವಿಷ್ಯದ ಬಗ್ಗೆ ತಾನು ಲೀಲಳೊಡನೆ ಮಾತನಾಡಿದಾಗ್ಯೂ, ಈ ವಿಷಯದಲ್ಲಿ ತನಗೆ ನಿಜವಾಗಿ ಏನನ್ನಾದರೂ ಮಾಡುವುದು ಸಾಧ್ಯವೇ ಎಂದು ಅವನಿಗೇ ಶಂಕೆಯುಂಟಾಯಿತು. ಕಾಯಿಪಲ್ಲೆಯನ್ನು ಬೆಳೆಯಬೇಕಾಗಿರುವ ಒಣಗಿದ ಮತ್ತು ಕಲ್ಲು ಬಂಡೆಗಳಿಂದ ಕೂಡಿದ ಜಮೀನನ್ನು ಅವನು ನೋಡಲಾರಂಭಿಸಿದ. ಜಮೀನನ್ನು ಅಗೆದು, ಹದಗೊಳಿಸಿ ಅದರಲ್ಲಿ ತರಕಾರಿ ಮತ್ತು ಕುಂಬಳಕಾಯಿಯನ್ನು ಬೆಳೆದರೆ ತಾನೆ ಏನು? ಕಾಯಿಪಲ್ಲೆಯನ್ನು ತಿಂದು ಹಾಕಲಾಗುವುದು, ನಂತರ ಏನೂ ಇರುವುದಿಲ್ಲ. ಖಂಡಿತ ಇದು ಎಂದಿಗೂ ಸಾಕಾಗದು.

ಅವನು ಕಡಲಿನತ್ತ ನಡೆದ. ಶಾಂತ ಸಮುದ್ರ ನಡು ಮಧ್ಯಾಹ್ನದ ಸೂರ್ಯನ ಬಿಸಿಲಿನಲ್ಲಿ ಮಿನುಗುತ್ತಿತ್ತು. ದೂರದಲ್ಲಿ ಅಲೆಗಳು ಕಾಣುತ್ತಿದ್ದವು. ಭೂಮಿಯ ಅಂಚಿಗೆ ಬಂದಿದ್ದು, ಅದರಾಚೆ ಬರಲಾರವೇನೋ ಎಂಬಂತೆ, ಮೀನು ದೋಣಿಗಳ ಸಮೂಹವು ಬಾನಂಚಿನಲ್ಲಿ ಶಾಂತವಾಗಿ ನಿಂತಿತ್ತು. ದಿನದ ಈ ನಿಶ್ಚಲ ಕಾಲದಲ್ಲಿ ಅದರ ಹಾಯಿಗಳು ಜಡವಾಗಿದ್ದವು. ಅತ್ಯಂತ ಎತ್ತರದಲ್ಲಿ ಸುತ್ತುತ್ತಾ ಹಾರಾಡುತ್ತಿದ್ದ ರಣಹದ್ದುಗಳು ಮಾತ್ರ ಮಂದವಾಗಿ ಹರಡಿದ್ದ ಸಮುದ್ರವನ್ನೂ, ಭೂಮಿಯ ಮೇಲಿನ ಸಣ್ಣ ಜೀವಿಗಳನ್ನೂ ದಿಟ್ಟಿಸಿ ನೋಡುತ್ತಿ-ದ್ದವು. ಬೃಹತ್ ಆಲದ ಮರಗಳ ಮೇಲೆ ಕುಳಿತಿದ್ದ ಪಾರಿವಾಳಗಳು, ಉಪಶಮನಗೊಳಿಸಲು ಯತ್ನಿಸುತ್ತಿವೆಯೋ ಎಂಬಂತೆ ಮೆಲುಧ್ವನಿಯಲ್ಲಿ ಕೂಗುತ್ತಿದ್ದವು.

ಸರ್ವೆಮರದ ತೋಪಿನಲ್ಲಿ ಹರಿ ಕುಳಿತ. ಅಲ್ಲಿ ಸದಾ ನೆರಳು ಇರುತ್ತಿತ್ತು. ಮರಗಳ ಚೂಪಾದ ಮತ್ತು ಮೃದುವಾದ ತುದಿಗಳ ಮೂಲಕ ಗಾಳಿಯೂ ಬೀಸುತ್ತಿತ್ತು. ಇಡೀ ಕಡಲ ದಂಡೆಯಲ್ಲೇ ನೆರಳಿನಿಂದ ಕೂಡಿದ ಈ ಸ್ಥಳವು ಹಿತಕರವಾಗಿದ್ದು, ಮಧ್ಯಾಹ್ನದ ವೇಳೆ ಅಲ್ಲಿ ವಿಶ್ರಾಂತಿ ಪಡೆಯುತ್ತಿದ್ದುದು ಹರಿಯೊಬ್ಬನೇ ಅಲ್ಲ. ಅವನ ತೋಟದ ಪಕ್ಕದಲ್ಲೇ ತೆಂಗಿನ ತೋಟವನ್ನು ಹೊಂದಿದ್ದ ವೃದ್ಧನೊಬ್ಬನು ಮರದ ಕಡ್ಡಿಗಳ ಮೇಲೆ ತಲೆಯಿಟ್ಟು,

ಮಲಗಿದ್ದ. ಅವನ ಪೇಟದ ಒಂದು ಭಾಗ ಅವನ ಕಣ್ಣುಗಳನ್ನು ಮುಚ್ಚಿತ್ತು. ಮುಂಗೋಪಿಯೂ, ಕುಡುಕನೂ ಆಗಿದ್ದ ಅವನು ಎಚ್ಚರಗೊಳ್ಳದಂತೆ ಹರಿ ಜಾಗರೂಕನಾಗಿದ್ದನು.

ಹರಿ ಒಂದು ಮರಕ್ಕೆ ಒರಗಿಕೊಂಡು, ಕಣ್ಣುಗಳನ್ನು ಅರ್ಧ ಮುಚ್ಚಿಕೊಂಡಿದ್ದ. ಹಾರಾಡುತ್ತಿದ್ದ ಹದ್ದೊಂದು ಹಠಾತ್ತನೆ ಕೆಳಗಿಳಿದು ದಡದಿಂದ ಏನನ್ನೋ ಎತ್ತಿಕೊಂಡು, ಮೇಲಕ್ಕೆ ಹಾರಿತು. ಅದರ ಕೊಕ್ಕಿನಲ್ಲಿ ಸಿಕ್ಕಿಕೊಂಡು ಒದ್ದಾಡುತ್ತಿರುವುದೇನೆಂಬುದನ್ನು ನೋಡಲು ಹರಿ ಕಣ್ತೆರೆದ. ಮತ್ತೆರಡು ಹದ್ದುಗಳು ಅದನ್ನು ಅಟ್ಟಿಸಿಕೊಂಡು ಹೋದವು. ಆಗ ಆ ಬೇಟೆಯು ಕೊಕ್ಕಿನಿಂದ ಕೆಳಗೆ ಬಿತ್ತು. ಅದೊಂದು ಸತ್ತ ಹಾವಾಗಿತ್ತು.

ಅದನ್ನು ಪರೀಕ್ಷಿಸಲು ಹರಿ, ಅಲ್ಲಿಂದೆದ್ದು ಹೋಗುವಷ್ಟರಲ್ಲಿ ರಾಮು ಸೈಕಲ್‌ನಲ್ಲಿ ಅಲ್ಲಿಗೆ ಬಂದು ಮರಕ್ಕೆ ಅದನ್ನು ಒರಗಿಸಿ ನಿಲ್ಲಿಸಿದ. ಅವನ ಜೊತೆ ಇನ್ನೂ ಇಬ್ಬರು ಹುಡುಗರಿದ್ದರು. ಅವರಿಬ್ಬರು ಸಹ, ಹರಿಯಂತೆಯೇ ಶಾಲೆಯನ್ನು ಮಧ್ಯದಲ್ಲೇ ಬಿಟ್ಟಿದ್ದರು. ಆದರೆ ಕಾರಣ ಒಂದೇ ರೀತಿಯದಲ್ಲ. ಶಾಲಾ ಶುಲ್ಕ ತುಂಬ ಕಡಿಮೆಯಿದ್ದಾಗ್ಯೂ ಅದನ್ನು ಕೊಡುವಷ್ಟು ಚೈತನ್ಯ ಹರಿಗಿರಲಿಲ್ಲ. ಅಲ್ಲದೆ ಪುಸ್ತಕಗಳನ್ನು ಕೊಳ್ಳುವ ಶಕ್ತಿಯೂ ಇರಲಿಲ್ಲ. ಆದರೆ ಆ ಹುಡುಗರ ತಂದೆಯರು ಮೀನು ದೋಣಿಗಳನ್ನು ಹೊಂದಿದ್ದು, ಮೀನು ಹಿಡಿಯಲು ಹೋಗಿ ತಾವು ಹಿಡಿದ ಮೀನುಗಳನ್ನು ಲಾರಿಗಳಲ್ಲಿ ಮುಂಬೈಗೆ ಒಯ್ಯುತ್ತಿದ್ದ ವ್ಯಾಪಾರಿಗಳಿಗೆ ಮಾರುತ್ತಿದ್ದರು. ಆ ಹುಡುಗರಿಗೆ ಶಾಲಾ ಶುಲ್ಕ ಕೊಡುವುದು ಮತ್ತು ಪುಸ್ತಕಗಳನ್ನು ಕೊಳ್ಳುವುದು ಕಷ್ಟವೇನಾಗಿರಲಿಲ್ಲ. ಆ ಹುಡುಗರಿಗೆ ಶಾಲೆಯು ಬೇಸರ ಹಿಡಿಸಿದ್ದು, ಹಣ ಸಂಪಾದನೆ ಮಾಡಿ ಮಜವಾಗಿ ಕಾಲ ಕಳೆಯಲು ಅಗತ್ಯವಾದ ಒಳ್ಳೆಯ ಅವಕಾಶಕ್ಕಾಗಿ ಕಾಯುತ್ತಿದ್ದರು.

ಹರಿ, ರಾಮು, ಭೋಲ ಮತ್ತು ಮಹೇಶ್- ಈ ನಾಲ್ವರೂ ಹಿಂದೆ ಕಡಲ ದಂಡೆಯ ಮೇಲೆ ಒಟ್ಟಾಗಿ ಆಟವಾಡುತ್ತಿದ್ದರು, ತಮ್ಮ ನಾಯಿಗಳೊಡನೆ ಬೇಟೆಗೆ ಹೋಗುತ್ತಿದ್ದರು, ಕುಸ್ತಿ ಮಾಡುತ್ತಿದ್ದರು, ತೆಂಗಿನ ಮರಗಳನ್ನು ಹತ್ತುತ್ತಿದ್ದರು. ಹಳ್ಳಿಗಳಲ್ಲಿ ಆಗಾಗ್ಗೆ ಹಬ್ಬದ ದಿನ ರಾತ್ರಿ ಆಡುತ್ತಿದ್ದ ನಾಟಕಗಳನ್ನು ನೋಡುತ್ತಿದ್ದರು. ಆದರೆ ಈಗ ಅವರು ದೊಡ್ಡವರಾಗಿದ್ದುದರಿಂದ, ಸರ್ವೆ ಮರಗಳ ಕೆಳಗೆ ಕುಳಿತುಕೊಂಡೋ ಮಲಗಿಕೊಂಡೋ ಮಾತನಾಡುತ್ತಿದ್ದರು.

ಅವರು ಮಾತನಾಡುತ್ತಿದ್ದುದಾದರೂ ಏನು?

''ನಮಗೆ ನೌಕರಿ ಸಿಗುತ್ತದೆ. ಆಗ ನಮ್ಮಲ್ಲಿ ಹಣವೂ ಇರುತ್ತದೆ.''

''ನಮಗೆ ಹೇಗೆ ಕೆಲಸ ಸಿಗುತ್ತದೆ?'' ಹಠಾತ್ತನೆ ಹರಿ ಕೇಳಿದ, ''ಕಾರ್ಖಾನೆಗಳಲ್ಲಿ ಕೆಲಸಮಾಡಲು, ಅವರು ನಗರಗಳಿಂದ ಜನರನ್ನು ಕರೆತರುತ್ತಾರೆ.''

''ಇಲ್ಲ, ಅವರು ಹಾಗೆ ಕರೆ ತರುವುದು ಸಾಧ್ಯವಿಲ್ಲ'' ಇತರ ಮೂವರು ಹುಡುಗರೂ ಪ್ರತಿಭಟನೆಯ ಧ್ವನಿಯಿಂದ ಕೂಗಿದರು.

ಒಂದು ನಿಮಿಷ ಮೌನವಾವರಿಸಿತು. ನಂತರ ಅವರಲ್ಲೊಬ್ಬ ಹೇಳಿದ, ಅದು ಹೇಗೆ ಸಾಧ್ಯ? ಪಟ್ಟಣದ ಜನ ಹಳ್ಳಿಗಳಲ್ಲಿ ವಾಸಿಸಲು ಬರುವುದಿಲ್ಲ. ಅವರು ಇಲ್ಲಿ ಎಲ್ಲಿ ಇರುತ್ತಾರೆ? ಅವರಿಗೆ ಮನೆಗಳಿಲ್ಲ, ಅಂಗಡಿಗಳಿಲ್ಲ, ಸಿನೆಮಾಗಳಿಲ್ಲ. ಅವರು ಇಲ್ಲಿಗೆ ಬರಲು ಇಷ್ಟಪಡುವುದಿಲ್ಲ. ಇಲ್ಲಿ ಇರುವವರು ನಾವು- ಅವರ ಕಾರ್ಖಾನೆಗಳಲ್ಲಿ ಕೆಲಸ

ಮಾಡುತ್ತೇವೆ.''

''ಹೇಗೆಂಬುದು ನಮಗೆ ಗೊತ್ತಿಲ್ಲ'' ಹರಿ ಹೇಳಿದ.

''ಕಲಿಯಲು ನಮಗೆ ಸಾಧ್ಯವೇ ಇಲ್ಲ ಅನ್ನುವಂತೆ ಮಾತನಾಡುತ್ತೀ.''

''ಯಾರು ಬೇಕಾದರೂ ಕಲಿಯಬಹುದು.''

''ಯಾರು ಬೇಕಾದರೂ ಯಂತ್ರಗಳನ್ನು ನಿರ್ವಹಿಸಬಹುದು. ಅವರು ನಮಗೆ ತೋರಿಸಿ ಕೊಡುತ್ತಾರೆ. ನಂತರ ನಾವೇ ಅವುಗಳನ್ನು ನಿರ್ವಹಿಸಬಹುದು.''

''ಯಂತ್ರಗಳ ಬಗ್ಗೆ ನಮಗೇನೂ ಗೊತ್ತಿಲ್ಲ'' ಹರಿ ಪ್ರತಿಭಟಿಸಿದ.

''ಮೀನು ಹಿಡಿಯುವುದು ಹೇಗೆ, ತೆಂಗನ್ನು ಬೆಳೆಸುವುದು ಹೇಗೆ ಎಂಬುದು ಮಾತ್ರ ನಮಗೆ ಗೊತ್ತು.''

''ನಾವೂ ಕಲಿಯುತ್ತೇವೆ'' ಆ ಹುಡುಗರು ಮತ್ತೆ ಹೇಳಿದರು.

''ಅದು ಹೇಗೆ ಸಾಧ್ಯ? ನಾವು ವಿದ್ಯಾಭ್ಯಾಸವನ್ನು ಸಹ ಪೂರ್ಣಗೊಳಿಸಿಲ್ಲ. ನಮಗೇನೂ ತಿಳಿಯದು'' ಹರಿ ನಿರಾಶೆಯಿಂದ ಹೇಳಿದ. ಅವನ ಎಳೆಯ ಮುಖದಲ್ಲಿ ಹತಾಶೆಯ ಗೆರೆಗಳು ಕಾಣಿಸಿಕೊಂಡವು. ''ಕಲಿಯಲು ಕಾಲೇಜಿಗೆ ಹೋಗಬೇಕು, ಇಂಜಿನಿಯರಿಂಗ್ ಕಲಿಯಬೇಕು.''

''ಕಾಲೇಜೇ?'' ಆ ಹುಡುಗರು ಹೀಯಾಳಿಸುತ್ತಾ ಹೇಳಿದರು, ''ಶಾಲಾ-ಕಾಲೇಜುಗಳು ಏನನ್ನೂ ಕಲಿಸುವುದಿಲ್ಲ. ಯಂತ್ರಗಳ ಕೆಲಸವನ್ನು ಪುಸ್ತಕಗಳು ಕಲಿಸುವುದಿಲ್ಲ. ಕಾರ್ಖಾನೆಗಳಲ್ಲಿ ನಾವು ಅವನ್ನು ಕಲಿಯಬೇಕು.''

''ಅವು ಯಾವ ಕಾರ್ಖಾನೆಗಳು? ಅವು ಏನನ್ನು ತಯಾರಿಸುತ್ತವೆ?'' ಅವರುಗಳಂತೆ ಆಶಾವಾದಿಯಾಗಲು ಹಾಗೂ ಚಿಂತೆಯನ್ನೂ, ಅಂಜುಬುರುಕತನವನ್ನೂ ಬಿಡಲು ಪ್ರಯತ್ನಿಸುತ್ತಾ ಹರಿ ಕೇಳಿದ.

ಆದರೆ ಅವರಿಗೂ ಸರಿಯಾಗಿ ಉತ್ತರ ಕೊಡಲಾಗಲಿಲ್ಲ.

''ಹೂಂ...?.... ಸೈಕಲ್‌ಗಳಿರಬಹುದು.''

''ಮೋಟಾರ್-ಕಾರ್‌ಗಳೆಂದು ಯಾರೋ ಹೇಳಿದರು.''

''ನೋಡಿದ್ರಾ, ನಿಮಗೇ ಗೊತ್ತಿಲ್ಲ'' ಕೋಪದಿಂದ ಹರಿ ಹೇಳಿದ, ''ನಿಮಗೇನೂ ತಿಳಿಯದು.''

ತೆಂಗಿನ ಚಿಪ್ಪೊಂದನ್ನು ರಾಮು ಅವನ ಮೇಲೆ ಎಸೆದ. ಹರಿ ಅದನ್ನು ಹಿಡಿದು ಅವನತ್ತ ಬಿಸಾಡಿದ. ಅದು ರಾಮುವಿನ ಮೊಣಕಾಲಿಗೆ ಬಡಿಯಿತು. ಅವನು ಚೀರಾಡುತ್ತಾ ನೆಗೆದ. ಇದರಿಂದ ನಿದ್ರೆಮಾಡುತ್ತಿದ್ದ ಮುದುಕ ಎದ್ದು, ಅವರ ಮೇಲೆ ಆರ್ಭಟಿಸಲಾರಂಭಿಸಿದ. ಹರಿ ಅವರನ್ನು ಸ್ವಲ್ಪ ದೂರ ಅಟ್ಟಿಸಿಕೊಂಡು ಹೋದ. ಆದರೆ ಸೆಖೆಯಿಂದಾಗಿ ಓಡುವುದು ಕಷ್ಟವಾದ್ದರಿಂದ ನಿಂತ. ಹರಿ ಒಬ್ಬನೇ ಕಡಲ ದಂಡೆಯತ್ತ ಹೊರಟ.

* * *

ಶಾಲೆಯಿಂದ ವಾಪಸ್ ಬಂದಿದ್ದ ಬೇಲ ಮತ್ತು ಕಮಲ, ಕೈಯಲ್ಲಿ ಸಣ್ಣ ಹಿತ್ತಾಳೆ ಡಬ್ಬಿಯನ್ನೂ, ಸಣ್ಣ ಕುಡುಗೋಲನ್ನೂ ಹಿಡಿದಿದ್ದನ್ನು ಹರಿ ನೋಡಿದ್ದ. ಅವರು ಬಂಡೆಗಳ ಬಳಿ ಹೋಗಿ, ಮೃದ್ವಂಗಿಗಳನ್ನು ಕತ್ತರಿಸುತ್ತಿದ್ದರು. ರಾತ್ರಿಯ ಊಟಕ್ಕಾಗಿ ಅವನ್ನು ಸಂಗ್ರಹಿಸಿ ತರುವಂತೆ ಲೀಲ ಬಹುಶಃ ಅವರಿಗೆ ಹೇಳಿರಬಹುದು. ಹರಿ, ಅವರ ಜೊತೆ ಸೇರಲಾರ.

ತಮ್ಮ ಹರಿತವಾದ ಚೂರಿಗಳಿಂದ ಅಗೆದು ಮೃದ್ವಂಗಿಗಳನ್ನು ಸಂಗ್ರಹಿಸಲು ಅನೇಕ ಹೆಂಗಸರು ಈಗಾಗಲೇ ಅಲ್ಲಿ ಸೇರಿರಬಹುದು. ಇದು ಹೆಂಗಸರ ಕೆಲಸ. ಮನೆಗೆ ಹಿಂದಿರುಗಿ ಬಲೆಯನ್ನು ತೆಗೆದುಕೊಂಡು ಹೋಗಿ ಮೀನು ಹಿಡಿಯಲು ಹರಿ ನಿರ್ಧರಿಸಿದ.

ಶಾಲೆಯ ನೀಲಿ ಸ್ಕರ್ಟ್‌ಗಳನ್ನು ಧರಿಸಿದ್ದ ಬೇಲ ಮತ್ತು ಕಮಲ ತಮ್ಮ ಹರಿತವಾದ ಚೂರಿಯಿಂದ ಅಗೆದು, ಗಟ್ಟಿಯಾದ ಚಿಪ್ಪುಗಳನ್ನು ಹೆರೆದು ಲೋಳೆ ಲೋಳೆಯಾದ ಮೃದ್ವಂಗಿಗಳನ್ನು ತೆಗೆದು, ಲೀಲ ತಮಗೆ ಕೊಟ್ಟಿದ್ದ ಹಿತ್ತಾಳೆಯ ಡಬ್ಬಿಗೆ ತುಂಬುತ್ತಿದ್ದರು. ಅವರ ಪಕ್ಕದಲ್ಲಿ ಅವರ ಅನೇಕ ಶಾಲಾ ಸಹಪಾಠಿಗಳೂ ಇದೇ ಕಾರ್ಯದಲ್ಲಿ ನಿರತರಾಗಿದ್ದರು. ಅವರ ತಾಯಂದಿರು ಮತ್ತು ಅಜ್ಜಿಯರೂ ಸಹ ಇದೇ ಕೆಲಸದಲ್ಲಿ ನಿರತರಾಗಿದ್ದರು. ಮತ್ತೆ ಕೆಲವರು ತೆಂಗಿನ ಗರಿಗಳಿಂದ ಮಾಡಿದ ಬುಟ್ಟಿಗಳನ್ನು ಆಳವಾದ ಮರಳಿನಲ್ಲಿ ಹುದುಗಿಸುತ್ತಿದ್ದರು. ಸಮುದ್ರದ ನೀರು ಅವುಗಳ ಮೇಲೆ ಹರಿದು ಅವನ್ನು ಮೃದು ಮಾಡುತ್ತದೆ. ಹಲವಾರು ತಿಂಗಳುಗಳ ನಂತರ ಅವರು ಅವುಗಳನ್ನು ಹೊರತೆಗೆದು ಅವುಗಳಿಂದ ಹಗ್ಗವನ್ನು ಹೊಸೆಯುತ್ತಿದ್ದರು. ಈಗ ಹವಾಮಾನವು ತಂಪಾಗಿದ್ದು, ಮರಳ ದಂಡೆಯ ಮೇಲೆ ಬಿಸಿಲಲ್ಲಿ ಕುಳಿತು ಕೆಲಸ ಮಾಡಲು ಹಿತವಾಗಿರುತ್ತದೆ. ಆಳವಿಲ್ಲದ ಜಲಪ್ರದೇಶದಲ್ಲಿ ಮೀನುಗಳನ್ನು ಹಿಡಿಯಲು ಗುಂಪಾಗಿ ಕುಳಿತುಕೊಳ್ಳುವ ಹೊಳವು ಕೊಕ್ಕಿನ ಗಲ್‌ಪಕ್ಷಿಗಳು ಮತ್ತು ಉದ್ದಕಾಲಿನ ಕ್ರೌಂಚಪಕ್ಷಿಗಳಂತೆ ಆ ಹೆಂಗಸರೂ ಒಟ್ಟಾಗಿ ಕುಳಿತಿದ್ದರು. ಆದರೆ, ಪಕ್ಷಿಗಳಂತೆ ಸುಮ್ಮನೆ ಕೂಡದೆ ಕಲಕಲ ಮಾತನಾಡುತ್ತಾ ಹರಟೆ ಕೊಚ್ಚುತ್ತಿದ್ದರು.

''ಅಗೋ, ಅಲ್ಲಿ ನೋಡು, ಹೇಮ ಮತ್ತು ಅವಳ ತಾಯಿ'' ಮರಳ ದಂಡೆಯ ಮೇಲೆ ಹೋಗುತ್ತಿದ್ದ ಇಬ್ಬರು ವ್ಯಕ್ತಿಗಳತ್ತ ಕೈತೋರಿಸುತ್ತಾ ಬೇಲ ಹೇಳಿದಳು. ಕಡುಗೆಂಪು, ಕಿತ್ತಳೆ ಹಾಗೂ ಕಡುನೀಲಿ ಬಣ್ಣದ ಸೀರೆಯನ್ನು ತಾಯಿ ಉಟ್ಟಿದ್ದಳು. ಹುಡುಗಿ, ಬೆಳ್ಳಿಯ ಅಂಚುಳ್ಳ ನೇರಳೆ ಬಣ್ಣದ ಉಡುಪು ಧರಿಸಿದ್ದಳು.

ಹೊಳೆಯುತ್ತಿರುವ ಅವರ ಉಡುಪಿನತ್ತ ಅನೇಕರು ದಿಟ್ಟಿಸಿ ನೋಡಿ ಕುಚೋದ್ಯದ ಮಾತನಾಡಲಾರಂಭಿಸಿದರು.

''ಮೀನು ಕೊಳ್ಳಲು ಅವರು ಅಲಿಬಾಗ್‌ಗೆ ಹೋಗಿದ್ದರು.''

''ಸ್ವತಃ ಹಿಡಿಯುವುದಕ್ಕಿಂತ ಉತ್ತಮ ಅಲ್ಲವಾ?''

''ಅವರಿಗೇನು ಅದರ ಅಗತ್ಯವಿಲ್ಲ. ಬಿಜು ಗೊತ್ತಲ್ಲ- ಅವನು ತನ್ನ ಮೀನುಗಾರಿಕೆ ಯಾನದಿಂದ ಹಿಂದಿರುಗಿದಾಗ, ಅವನ ದೋಣಿಯಲ್ಲಿ ಟನ್‌ಗಟ್ಟಲೆ ಮೀನಿರುತ್ತವೆ. ಅವುಗಳ ಪೈಕಿ ಪ್ರಾನ್, ಪಾಮ್‌ಫ್ರೆಟ್, ಸುರ್‌ಮಾಯ್-ಹೀಗೆ ಅನೇಕ ನಮೂನೆಯ ಮೀನುಗಳಿರು-ತ್ತವೆ. ಅವರಿಗೆ ಯಾವ ಮೀನನ್ನೂ ಕೊಳ್ಳುವ ಅಗತ್ಯವಿಲ್ಲ.''

''ಅದೇನೊ ನಿಜ ಅನ್ನು, ಆದರೂ ಅವರಲ್ಲಿ ಅಪಾರ ಮೀನಿದ್ದು ಅವನ್ನು ಅವರು ಮಾರುತ್ತಾರೆ.''

''ಧುಲ್‌ನಲ್ಲಿ, ಏಕೆ, ಅಲಿಬಾಗ್‌ನಲ್ಲಿ ಸಿಗುವುದಕ್ಕಿಂತ ಎರಡಷ್ಟು ಹಣ ಅವರಿಗೆ ಮುಂಬೈನಲ್ಲಿ ಸಿಗುತ್ತದೆ.''

''ಎರಡರಷ್ಟು?.. ಹೂಂ... ಮೂರರಷ್ಟು.''

''ಆದ್ದರಿಂದಲೇ ಅವರಲ್ಲಿ ಅಷ್ಟೊಂದು ಚಿನ್ನದ ಬಳೆಗಳಿವೆ'' ಮತ್ತೊಬ್ಬಳು ಅಸೂಯೆಯಿಂದ ಹೇಳಿದಳು.

ಸ್ವಲ್ಪ ಕಾಲ ಅವರೆಲ್ಲಾ ಮೌನವಾಗಿದ್ದರು. ಬಂಡೆಯ ಕೆಳಗೆ ಮೃದ್ವಂಗಿಗಳನ್ನು ಕತ್ತರಿಸುವ ಅವರ ಚೂರಿಯ ಶಬ್ದ, ಹಾಗೆ ಕತ್ತರಿಸುವಾಗ ಅವರ ಗಾಜಿನ ಬಳೆಗಳ ಝಣಝಣ ಶಬ್ದ ಮಾತ್ರ ಕೇಳುತ್ತಿತ್ತು. ಧುಲ್‌ನ ಎಲ್ಲ ಹೆಂಗಸರಿಗೂ ಬಳೆಗಳೆಂದರೆ ತುಂಬ ಇಷ್ಟ. ಕೆಲವರು ಮಾತ್ರ ಚಿನ್ನ ಮತ್ತು ಬೆಳ್ಳಿಯ ಬಳೆಗಳನ್ನು ಹಾಕಿಕೊಂಡಿದ್ದರು. ಇತರೆಲ್ಲರೂ ಮುಂಗೈವರೆಗೆ ನೀಲಿ, ಹಸಿರು, ಬಂಗಾರದ ಬಣ್ಣ-ಹೀಗೆ ವಿವಿಧ ಬಣ್ಣದ ಬಳೆಗಳನ್ನು ಹಾಕಿಕೊಂಡಿರುತ್ತಿದ್ದರು.

ಬೇಲ ಮತ್ತು ಕಮಲರಲ್ಲಿ ಮಾತ್ರ ಅತ್ಯಲ್ಪ ಬಳೆಗಳಿದ್ದವು. ಆ ಆರೇಳು ಅಗ್ಗವಾದ ಬಳೆಗಳನ್ನು ಅವರು ದೀಪಾವಳಿಯ ಕಾಲದಲ್ಲಿ ಕೊಂಡಿದ್ದರು. ಅವು ಹೆಚ್ಚು ಕಾಲ ಬಾಳಿಕೆ ಬರುವುದಿಲ್ಲ. ಆದರೂ ಅವು ಒಡೆಯುವ ತನಕ ಆಕರ್ಷಕವಾಗಿಯೇ ಇರುತ್ತವೆ.

ಬಿಳಿ ಕೂದಲ ಅಜ್ಜಿಯರ ಪೈಕಿ ಒಬ್ಬಳಾದ ಕಾಶಿಬಾಯಿ ಹೇಳಿದಳು, ''ನಿಮಗೆ ಗೊತ್ತಾ? ಬಿಜು ಮತ್ತೊಂದು ದೋಣಿಯನ್ನು ಕಟ್ಟುತ್ತಾನಂತೆ.''

''ಏನು, ಮತ್ತೊಂದು ದೋಣಿಯೆ? ಈಗಾಗಲೇ ಅವನಲ್ಲಿ ಅಷ್ಟೊಂದಿವೆ. ಮತ್ತೊಂದು ಏಕಂತೆ?'' ಅನೇಕರು ಒಟ್ಟಿಗೆ ಕೇಳಿದರು.

''ಅದು ಇತರೆಲ್ಲವುಗಳಿಗಿಂತ ದೊಡ್ಡದೂ, ವೇಗವುಳ್ಳದ್ದೂ ಆಗಿರುತ್ತದಂತೆ. ನನ್ನ ಗಂಡ ನನಗೆ ಈ ವಿಷಯ ತಿಳಿಸಿದ. ಬಿಜುವೇ ಅವನಿಗೆ ಹೇಳಿದನಂತೆ. ಆ ದೋಣಿಗೆ ಎಂಜಿನ್‌ಗಳಿರುತ್ತವಂತೆ. ಇದರಿಂದಾಗಿ ಯಾವುದೇ ಹವಾಮಾನದಲ್ಲೂ ಅದು ಸಂಚರಿಸಬಲ್ಲುದಂತೆ. ಸೌರಾಷ್ಟ್ರ ಮತ್ತು ಗುಜರಾತ್‌ವರೆಗೂ ಹೋಗುತ್ತದಂತೆ. ಸದಾ ಹೆಚ್ಚು ಹೆಚ್ಚು ಮೀನು ಸಿಗುವ ದೂರ ದೂರದ ಸ್ಥಳಗಳಿಗೆ ಅದು ಹೋಗುತ್ತದಂತೆ. ಇಲ್ಲಿ ಹೆಚ್ಚು ಮೀನುಗಳೇ ಇರುವುದಿಲ್ಲ.''

''ಹೌದು'' ಅವರೆಲ್ಲಾ ಒಟ್ಟಿಗೆ ಹೇಳಿದರು.

''ಆದರೂ ನಮ್ಮ ಜನ ಇಲ್ಲೇ ಬಲೆ ಹರಡಿ ಸ್ವಲ್ಪ ಮೀನು ಹಿಡಿಯುತ್ತಾರೆ.''

''ತುಂಬಾ ಕಡಿಮೆ.''

ಬೇಲ ಮತ್ತು ಕಮಲ ಮೌನವಾಗಿದ್ದರು. ಅವರಿಬ್ಬರೂ ಯೋಚಿಸುತ್ತಿದ್ದರು. ''ಕಡೆ ಪಕ್ಷ ನಿಮ್ಮ ಜನ ಸ್ವಲ್ಪವಾದರೂ ತರುತ್ತಾರೆ. ಆದರೆ, ನಮ್ಮಪ್ಪ ಮೀನು ಹಿಡಿಯಲು ಹೋಗುವುದೇ ಇಲ್ಲ. ಹರಿ ಒಂದು ಸಣ್ಣ ಬಲೆಯಲ್ಲಿ ಮೀನು ಹಿಡಿಯಬೇಕು. ಅವನಿಗಂತೂ ಏನೂ ಸಿಗುವುದೇ ಇಲ್ಲ.'' ಈ ವಿಷಯವನ್ನು ಅವರು ಜೋರಾಗಿ ಹೇಳಲಿಲ್ಲ. ಅವರು ತೆವಳಿಕೊಂಡು ಬಂಡೆಗಳ ಮೇಲೆ ಹೋದರು. ಮೃದ್ವಂಗಿಗಳ ಮೇಲಿನ ಚಿಪ್ಪನ್ನು ತೆಗೆದರು. ಲೋಳೆಯ ಮೃದ್ವಂಗಿಗಳನ್ನು ಬುಟ್ಟಿಗೆ ತುಂಬಿದರು.

ಶಾಂತವಾಗಿದ್ದ ಆ ಮಧ್ಯಾಹ್ನದಲ್ಲಿ ಅವರೆಲ್ಲಾ ಒಂದು ರೀತಿಯಲ್ಲಿ ಪಿಸುಗುಟ್ಟಿದ, ಇಲ್ಲವೆ ನಿಟ್ಟುಸಿರು ಬಿಟ್ಟ ಶಬ್ದವನ್ನು ಕೇಳಿದರು. ದೀರ್ಘವಾದ ಈ ನಿಟ್ಟುಸಿರ ಶಬ್ದ ಕಡಲಿನಿಂದಲೇ ಬರುತ್ತಿತ್ತು. ಅದು ಕ್ರಮೇಣವಾಗಿ ದೀರ್ಘವಾದ ಮರ್ಮರ ಮತ್ತು ಕಲಕಿದ ಅಲೆಯಾಗಿ ಮಾರ್ಪಟ್ಟಿತು. ಈ ಅಲೆ ಜಡ ಸಮುದ್ರದ ಮೇಲೆ ಉದ್ದಕ್ಕೂ ಬೆಳ್ಳನೆಯ

ರೇಖೆಯಾಗಿ ದಡದತ್ತ ಬರಲಾರಂಭಿಸಿತು. ಅದು ಬಂಡೆಗಳಿಗೆ ಬಡಿದು, ಚಿಮ್ಮಿ ತುಂತುರು-ತುಂತುರಾಗಿ ಬೀಳಲಾರಂಭಿಸಿತು. ಹೀಗೇ, ದೊಡ್ಡ ಅಲೆಗಳೆದ್ದು ತೀರದತ್ತ ರಭಸದಿಂದ ಬರಲಾರಂಭಿಸಿದುವು. ಜೊತೆಗೆ ಸ್ವಚ್ಛವಾದ, ತಂಪಾದ ಮತ್ತು ಆಹ್ಲಾದಕರವಾದ ಸಂಜೆಯ ಗಾಳಿಯೂ ಬೀಸಲಾರಂಭಿಸಿತು. ಈಗ ಅಲೆಗಳೂ, ಗಾಳಿಯೂ ಒಟ್ಟಿಗೆ ಅಪ್ಪಳಿಸಲಾ-ರಂಭಿಸಿದವು. ಹೆಂಗಸರು ತಮ್ಮ ಕೆಲಸಗಳನ್ನು ನಿಲ್ಲಿಸಿ ಎದ್ದು ನಿಂತು, ''ಇನ್ನು ಮನೆಗೆ ಹೋಗೋಣ, ಹೊತ್ತಾಯ್ತು. ರಾತ್ರಿ ಅಡುಗೆ ಮಾಡಬೇಕು'' ಎಂದು ಹೇಳಿದರು. ಅವರು ತಮ್ಮ ಚೂರಿಗಳನ್ನೂ, ಭರಣಿಗಳನ್ನೂ ತೆಗೆದುಕೊಂಡು ಇಬ್ಬರು ಮೂವರಂತೆ ಮರಳ ದಂಡೆಯ ಮೇಲೆ ನಡೆಯಲಾರಂಭಿಸಿದರು. ಉಜ್ವಲವಾದ ಹಸಿರು ಮತ್ತು ಕಿತ್ತಳೆ ಬಣ್ಣದ ಸೀರೆಗಳನ್ನುಟ್ಟ ಹೆಂಗಸರಲ್ಲಿ ಕೆಲವರು, ನೀಲಿ ಮತ್ತು ಬಿಳಿ ಶಾಲಾ ಸಮವಸ್ತ್ರ ಧರಿಸಿದ್ದ ಬಾಲಕಿಯರ ಜೊತೆ ಹರಟುತ್ತಾ, ನಗುತ್ತಾ ಹೋಗುತ್ತಿದ್ದರು. ಮತ್ತೆ ಕೆಲವರು ಮೌನವಾಗಿ ತಡೆತಡೆದು ನಡೆಯುತ್ತಿದ್ದರು.

***

ಹರಿ ಕಡಲ ದಂಡೆಗೆ ತನ್ನ ಬಲೆಯನ್ನು ತಂದಾಗ ಅವರು ಹಿಂತಿರುಗುತ್ತಿದ್ದುದನ್ನು ನೋಡಿದ್ದ. ಅವರು ತನ್ನನ್ನು ನೋಡಬಾರದೆಂಬುದು ಅವನ ಇಚ್ಛೆ. ಹಳ್ಳಿಯಲ್ಲಿ ದೋಣಿಯಿಲ್ಲದ ಹಾಗೂ ಮೀನು ದೋಣಿಯಲ್ಲಿ ಕೆಲಸವಿಲ್ಲದ ಹುಡುಗನೆಂದರೆ ಅವನೊಬ್ಬನೇ. ಕಡಲ ತೀರದಲ್ಲಿ ತನ್ನ ಬಲೆಗೆ ಹೆಚ್ಚು ಮೀನುಗಳು ಸಿಗುವುದಿಲ್ಲವೆಂಬುದೂ ಅವನಿಗೆ ಗೊತ್ತು.

ಆದರೂ ಅವನಿಗೆ ಈ ಕೆಲಸದಲ್ಲಿ ಒಂದು ರೀತಿಯ ಸಂತೋಷ. ತೀರದಲೆಯಲ್ಲಿ ಅವನು ತನ್ನ ಬಲೆ ಹಾಕಿ, ಅಲೆಗಳು ಅದರ ಮೂಲಕ ಹಾದು ಹೋಗಲು ಅವಕಾಶ ನೀಡಿ, ಅದನ್ನು ದಡಕ್ಕೆ ಎಳೆದ. ಅತ್ಯಂತ ಚಿಕ್ಕದಾದ ಬಂಗಾರದ ಮತ್ತು ಬೆಳ್ಳಿಯ ಬಣ್ಣದ ಮೀನಿನ ಮರಿಗಳು ಮಾತ್ರ ಬಲೆಗೆ ಸಿಕ್ಕಿದವು. ಅವು ಉಸಿರು ಬಿಡುತ್ತಾ ಜಿಗಿಯುತ್ತಾ, ಸಾಯುವ ಮುನ್ನ ಗಾಳಿ ಸೇವಿಸಲು ಯತ್ನಿಸುತ್ತಿದ್ದವು. ಮೂರು-ನಾಲ್ಕು ಏಡಿಗಳೂ ಸಿಕ್ಕಿದ್ದವು. ಆದರೆ ಅವೂ ಸಹ ತೀರ ಚಿಕ್ಕವಾಗಿದ್ದು, ಅವುಗಳಿಂದ ಮಾಂಸವೇನೂ ಸಿಗುವಂತಿರಲಿಲ್ಲ. ಅವು ತಮ್ಮ ಬೆನ್ನ ಮೇಲೆ ಮಲಗಿ, ತಮ್ಮ ಪಾರದರ್ಶಕ ಕಾಲುಗಳನ್ನು ಗಾಳಿಯಲ್ಲಿ ಝಾಡಿಸುತ್ತಿದ್ದುದನ್ನು ಅವನು ನೋಡಿದ. ದೊಡ್ಡ ಕಪ್ಪುಕಾಗೆಯೊಂದು ತನಗೇನಾದರೂ ಸಿಕ್ಕುವುದೇ ಎಂದು ಕುಪ್ಪಳಿಸುತ್ತಾ



ಬಂದಿತು. ಏಡಿಗಳು ನೀರಿನೊಳಗೆ ಜಿಗಿದು, ಸುರಕ್ಷಿತವಾಗಿ ಪಾರಾಗುತ್ತವೆಯೇ ಎಂಬುದನ್ನು ಕಾಣಲು ಹರಿ, ಅವನ್ನು ಅವುಗಳ ಕಾಲ ಮೇಲೆ ನಿಲ್ಲಿಸಿದ. ಆದರೆ ಕಾಗೆ ತನ್ನ ಕೊಕ್ಕಿನಿಂದ ಅವನ್ನು ಅವುಗಳ ಬೆನ್ನಿನ ಕಡೆಗೇ ತಿರುಗಿಸಿತು. ಕೊನೆಗೆ ಹರಿ ಅವನ್ನು ಕಾಗೆಯ ಪಾಲಿಗೇ ಬಿಟ್ಟು ಖಾಲಿ ಬಲೆಯೊಡನೆ ಹೊರಟ.

ಮೀನು ದೋಣಿಗಳ ಸಮೂಹ ಬರುತ್ತಿತ್ತು. ಮೊದಲ ದೋಣಿ, ಕೂಗಳತೆಗೆ ಸಿಗುವಷ್ಟು ದೂರ ಆಗಲೇ ದಡದ ಸಮೀಪ ಬಂದಿತ್ತು. ಆ ವೇಳೆಗೆ ಒಬ್ಬ ಮೀನುಗಾರ ಜೋರಾಗಿ ಕೂಗಿದ. ಕೂಡಲೇ ಅನೇಕ ಹೆಂಗಸರು, ಹಳ್ಳಿಯಿಂದ ಕಡಲ ದಂಡೆಗೆ ಬಂದರು. ಅವರೆಲ್ಲಾ ಬುಟ್ಟಿಗಳನ್ನು ಹಿಡಿದಿದ್ದರು. ಕೆಲವರಂತೂ ದೋಣಿಗಳು ದಡದವರೆಗೆ ಬರುವುದಕ್ಕೂ ಕಾಯದೆ ತಮ್ಮ ಸೀರೆಗಳನ್ನು ಸೊಂಟಕ್ಕೆ ಕಟ್ಟಿ ನೀರನ್ನು ಹಾಯುತ್ತಾ ದೋಣಿಗಳತ್ತ ಹೊರಟರು. ಮೀನುಗಾರರು ಮೀನಿನಿಂದ ತುಂಬಿದ್ದ ಭಾರವಾದ ಬುಟ್ಟಿಗಳನ್ನು ಕೆಳಗಿಳಿಸಿದರು. ಹೆಂಗಸರು ಆ ಬುಟ್ಟಿಗಳನ್ನು ತಲೆಯ ಮೇಲಿಟ್ಟುಕೊಂಡು ದಡಕ್ಕೆ ವಾಪಸ್ ಬಂದರು. ಇಬ್ಬರು-ಮೂವರು ಮೀನುಗಾರರು ಅವರನ್ನು ಹಿಂಬಾಲಿಸಿದರು. ಎತ್ತರದ ಅಲೆಗಳು ಇರುವವರೆಗೆ ದೋಣಿಗಳು ಬಾಚು ಪ್ರದೇಶದತ್ತ ಬರುವುದು ಸಾಧ್ಯವಿರಲಿಲ್ಲ.

ಇದುವರೆಗೆ ಮೌನವೂ ಶಾಂತವೂ ಆಗಿದ್ದ ಕಡಲ ದಂಡೆಯಲ್ಲಿ ಈಗ ಗಟ್ಟಿಯಾದ ಮಾತುಗಳೂ, ಕೂಗಾಟಗಳೂ ಕೇಳಿಬರಲಾರಂಭಿಸಿದವು. ಬೆಸ್ತರು ಮೀನಿನ ಬುಟ್ಟಿಗಳನ್ನು ಹರಾಜು ಹಾಕಲಾರಂಭಿಸಿದರು. ಹೆಂಗಸರು ಬುಟ್ಟಿಗಳನ್ನೆತ್ತಿ ಮರಳ ಮೇಲೆ ಮೀನುಗಳನ್ನು ಸುರಿದರು. ಗುಡ್ಡೆಗುಡ್ಡೆಯಾಗಿ ಬಿದ್ದಿದ್ದ ಮೀನುಗಳಲ್ಲಿ, ಇನ್ನೂ ಜೀವಂತವಾಗಿದ್ದು ಜಿಗಿದಾಡು-ತ್ತಿದ್ದ ಪ್ರಾನ್‌ಗಳೂ, ಹಾವಿನಂತೆಉದ್ದವಾಗಿದ್ದ 'ಬಾಂಬೆಡಕ್'ಗಳೂ, ನೀರಿನಲ್ಲೇ ಬಿಟ್ಟು ಇನ್ನೂ ಬೆಳೆಯಲು ಅವಕಾಶ ಕೊಡಬೇಕಾಗಿದ್ದ ಚಪ್ಪಟೆಯಾಕಾರದ ಹೊಳಪಿನ ಸುರ್‌ಮಾಯ್‌ಗಳೂ ಮತ್ತು ಕಪ್ಪುಬಣ್ಣದ ದೊಡ್ಡ ಏಡಿಗಳೂ ಇದ್ದವು. ಮೀನಿನ ಬುಟ್ಟಿಗಳನ್ನು ಕೊಳ್ಳಲು ಕಾತುರರಾ-ಗಿದ್ದ ತಮಗೆ ಅಡ್ಡಲಾಗಿದ್ದವರನ್ನು ಪರಸ್ಪರ ತಳ್ಳುತ್ತಾ, ಕೂಗಾಡುತ್ತಾ ಸೆಣಸಾಡುತ್ತಿದ್ದರು.

ಮುಂಬೈನಲ್ಲಿ ಪ್ರತಿಯೊಂದಕ್ಕೆ ಹತ್ತು ರೂಪಾಯಿ ಬೆಲೆ ಸಿಗುತ್ತಿದ್ದ ಕೆಲವು ದೊಡ್ಡ ಪಾಮ್ ಫ್ರೆಟ್‌ಗಳನ್ನೂ, ಕಡುಗೆಂಪಿನ ತಾಜಾ ಪ್ರಾನ್‌ಗಳನ್ನೂ ಹೊಂದಿದ್ದ ಮೀನಿನ ಬುಟ್ಟಿಗೆ ಒಬ್ಬ ಹೆಂಗಸು ''ಐವತ್ತು ರೂಪಾಯಿ'' ಎಂದು ಕೂಗಿದಳು. ''ಅರವತ್ತು'' ಮತ್ತೊಬ್ಬಳು ಕೂಗಿದಳು. ಕಡುಗೆಂಪು ಬಣ್ಣದ ಸೀರೆಯುಟ್ಟಿದ್ದ ದಪ್ಪನೆಯ ಹೆಂಗಸು ''ಎಪ್ಪತ್ತು'' ಎಂದು ಕೂಗಿದಳು. ಇತರರು ಹಿಂಜರಿದಾಗ ಅವಳು ಸೊಂಟದಿಂದ ಬಟ್ಟೆಯ ಚೀಲವೊಂದನ್ನು ಎಳೆದು, ಕೊಳೆಯಾದ ನೋಟುಗಳ ಕಂತೆಯೊಂದನ್ನು ತೆಗೆದು, ಸಂತೋಷದಿಂದ ಹಲ್ಲು ಕಿರಿಯುತ್ತಿದ್ದ ಮೀನುಗಾರರಿಗೆ ದುಡ್ಡನ್ನು ಎಣಿಸಿ ಕೊಟ್ಟಳು. ತನ್ನ ಬುಟ್ಟಿಯನ್ನು ಎತ್ತಲು ಅವಳು ಬಗ್ಗಿದಾಗ ಇತರರು ಗೊಣಗುತ್ತಾ ಮೀನಿನ ಸಣ್ಣ ಬುಟ್ಟಿಗಳ ಸುತ್ತ ಸೇರಿದರು.

ಆ ಹೆಂಗಸಿನ ಕೂಗಿಗೆ ಓಗೊಟ್ಟು ಕುದುರೆಗಾಡಿಯೊಂದು ಪಟಪಟ ಸದ್ದು ಮಾಡುತ್ತಾ ದಂಡೆಯತ್ತ ಬಂದಿತ್ತು. ಕಂದು ಬಣ್ಣದ ಕುದುರೆಯ ಕಾಲುಗಳು ವೇಗವಾಗಿ ಓಡುತ್ತಿದ್ದವು. ಗಾಡಿಯ ದೊಡ್ಡ ಚಕ್ರಗಳು ಒದ್ದೆಯಾದ ಮತ್ತು ನುಣುಪಾದ ಮರಳ ಮೇಲೆ ತಿರುಗುತ್ತಿದ್ದವು. ಚಾಲಕನು ಚಾವಟಿಯನ್ನು ಗಾಳಿಯಲ್ಲಿ ಬೀಸಿ ಸದ್ದು ಮಾಡುತ್ತಿದ್ದನು. ಬಾಚು ಪ್ರದೇಶದ ಮೂಲಕ ಬಂದ ಗಾಡಿಯು ಹೆಂಗಸರು ಮತ್ತು ಅವರ ಬುಟ್ಟಿಗಳಿದ್ದ ಸ್ಥಳದಲ್ಲಿ ನಿಂತಿತು. ಮತ್ತೆ

ಚೌಕಾಶಿ ಪ್ರಾರಂಭವಾಯಿತು.

''ಹೆದ್ದಾರಿಯ ಬಸ್ ನಿಲ್ದಾಣದವರೆಗೆ ಎರಡು ರೂಪಾಯಿ'' ಪ್ರಾನ್‌ಗಳ ದೊಡ್ಡ ಬುಟ್ಟಿ-ಯನ್ನು ಹೊಂದಿದ್ದ ಹೆಂಗಸು ಹೇಳಿದಳು.

''ಮೂರು ರೂಪಾಯಿ.''

''ಐದು.''



ಸೊಂಟದ ದಟ್ಟಿಯಲ್ಲಿ ಸಾಕಷ್ಟು ಹಣ ಹೊಂದಿದ್ದ ದಪ್ಪನೆ ಹೆಂಗಸು ಮತ್ತೆ ಗೆದ್ದಳು. ''ಆರು'' ಎಂದು ಅವಳು ಕೂಗಿ ಟಾಂಗಾ ಚಾಲಕನ ಉತ್ತರಕ್ಕೆ ಕಾಯದೆ ಬುಟ್ಟಿಯೊಡನೆ ಗಾಡಿ ಏರಿದಳು. ಗಾಡಿ ಕೀರಲು ಶಬ್ದ ಮಾಡಿತು. ಕುದುರೆ ತತ್ತರಿಸಿತು. ಟಾಂಗಾ ಚಾಲಕನು, ತನ್ನ ಟೋಪಿಯನ್ನು ಓರೆಯಾಗಿಟ್ಟುಕೊಂಡು ಚಾವಟಿಯನ್ನು ಝಳಪಿಸುತ್ತಾ ಮರಳ ತೀರದ ಮೂಲಕ ಹೆದ್ದಾರಿಗೆ ಒಯ್ಯುವ ಹಾದಿಯಲ್ಲಿ ಗಾಡಿಯನ್ನು ಓಡಿಸಿದ. ಆ ಹೆದ್ದಾರಿಯಲ್ಲಿ ಹಳ್ಳಿಗಳಿಂದ ಮೀನು ಸಂಗ್ರಹಿಸಲು ಬರುವ ಲಾರಿ ಚಾಲಕನಿಗೆ ಅವನ್ನು ಮಾರಲಾಗುವುದು, ಇಲ್ಲವೆ ಆ ಹೆಂಗಸು ಬಸ್ ಹಿಡಿದು ಅಲಿಬಾಗ್ ಪೇಟೆಗೆ ಹೋಗಿ ತಾನೇ ಮಾರಾಟ

ಮಾಡುತ್ತಾಳೆ. ಇತರ ಹೆಂಗಸರು ಉಳಿದ ಮೀನುಗಳಿಗಾಗಿ ಜಗಳ ಪ್ರಾರಂಭಿಸಿದರು. ನೋಡುವಂತಹದೇನೂ ಹೆಚ್ಚಿಗೆ ಇರಲಿಲ್ಲವಾದ್ದರಿಂದ ಹರಿ ಆ ಸ್ಥಳವನ್ನು ಬಿಟ್ಟ.

ಆ ಮೀನುಗಳ ಪೈಕಿ ಒಂದನ್ನು ತನ್ನ ಕುಟುಂಬಕ್ಕಾಗಿ ಕೊಳ್ಳಲು ಸಾಧ್ಯವಾಗಿದ್ದರೆ ಎಷ್ಟು ಚೆನ್ನಾಗಿರುತ್ತಿತ್ತು ಎಂದು ಹರಿಗೆ ಅನಿಸಿತು. ಅದಕ್ಕೂ ಉತ್ತಮವೆಂದರೆ, ತಾನೇ ಅಂತಹ ಒಂದು ಮೀನು ಹಿಡಿದಿದ್ದರೆ ಎಷ್ಟು ಚೆನ್ನ ಎಂದು ಭಾವಿಸಿದ. ಆದರೆ ಅವನ ಬಲೆ ಖಾಲಿಯಿತ್ತು.ಉಜ್ವಲವಾದ ಧೂಮ್ರವರ್ಣದ ಸಂಜೆಯ ಬೆಳಕಿನಲ್ಲಿ ಹರಿ ಸಿಳ್ಳೆ ಹಾಕುತ್ತಾ, ತನ್ನ ಬಲೆಯನ್ನೆಳೆದುಕೊಂಡು ಹೊರಟ.

ಅಂದು ಬೆಳಿಗ್ಗೆ ಲೀಲ ಹೂಗಳನ್ನು ಅರ್ಪಿಸಿದ್ದ ಬಂಡೆಯ ಸುತ್ತ ಈಗ ಅಲೆಗಳು ಬಡಿಯುತ್ತಿದ್ದವು. ಇನ್ನೇನು ವಿಭೂತಿ ಮತ್ತು ಕುಂಕುಮ ಸಹ ಅಳಿಸಿ ಹೋಗುತ್ತವೆ. ಅಲ್ಲದೆ ಅವುಗಳಿಗೆ ಅಂಟಿಕೊಂಡಿರುವ ಹೂಗಳೂ ಕೊಚ್ಚಿಕೊಂಡು ಹೋಗುತ್ತವೆ. ಮಾರನೆಯ ಬೆಳಗ್ಗೆ, ಎಂದಿನಂತೆ ಹೆಂಗಸರು ಬಂದು ಮತ್ತಷ್ಟು ವಿಭೂತಿ, ಕುಂಕುಮ ಮತ್ತು ಹೂಗಳನ್ನು ಅರ್ಪಿಸುತ್ತಾರೆ.

***

ತಮ್ಮ ಗುಡಿಸಲಿಗೆ ಸಮೀಪದ ಹಾದಿಯ ಹುಲ್ಲು ಪ್ರದೇಶದಲ್ಲಿ ಬೇಲ ಮತ್ತು ಕಮಲ ಜಿಗಿಯುತ್ತಾ ಆಟವಾಡುತ್ತಿದ್ದರು. ಅವರು ಕುಂಟಾಟವಾಡುತ್ತಿದ್ದರು. ಕಲ್ಲುಹರಳುಗಳಿಂದ ಗುರುತು ಮಾಡಿದ್ದ ಸಣ್ಣ ಚೌಕಾಕಾರದ ಮನೆಯಲ್ಲಿ ಓಡುತ್ತಿದ್ದ ಕಮಲಳನ್ನು ಕುಂಟುತ್ತಾ ಹಿಡಿಯಲು ಬೇಲ ಪ್ರಯತ್ನಿಸುತ್ತಿದ್ದಳು. ಬೇಲ ಕುಂಟುತ್ತಾ ಮುನ್ನುಗ್ಗಿ ತನ್ನ ಸೋದರಿಯ ಲಂಗ ಹಿಡಿಯಲು ಯತ್ನಿಸಿದಳು. ಆದರೆ ಕಮಲ ಪಕ್ಕಕ್ಕೆ ಸರಿದಿದ್ದರಿಂದ ಬೇಲ ತನ್ನ ಮಂಡಿಗಳ ಮೇಲೆ ಬಿದ್ದಳು.

''ಅಳಬೇಡ'' ದಂಡೆಯನ್ನು ಹತ್ತುತ್ತಾ ಹರಿ ಹೇಳಿದ, ''ನಿನಗೇನು ಗಾಯವಾಗಿಲ್ಲ.''

''ನಾನೇನು ಅಳುವುದಿಲ್ಲ'' ಬೇಲ ಏಳುತ್ತಾ ಮಂಡಿಗಳಿಗೆ ಅಂಟಿದ್ದ ಮಣ್ಣನ್ನು ಕೊಡವಿಕೊಂಡಳು.

''ನೋಡು, ನಿನ್ನ ಸ್ಕರ್ಟ್ ಎಷ್ಟು ಮಣ್ಣಾಗಿದೆ''ಹರಿ ಹೇಳಿದ.

''ಲೀಲ ಅದನ್ನು ಒಗೆಯುತ್ತಾಳೆ.''

''ಹೂಂ-ಲೀಲಳೇ ಎಲ್ಲಾ ಕೆಲಸವನ್ನೂ ಮಾಡಬೇಕು.''

ಮಾತನ್ನು ಬದಲಿಸಲು ಬೇಲ ಹೇಳಿದಳು, ''ನೀನು ಯಾವುದಾದರೂ ಮೀನು ಹಿಡಿದೆಯೊ?''

ಅವನ ಬಲೆ ಖಾಲಿಯಿದ್ದುದು ಅವರಿಗೆ ಚೆನ್ನಾಗಿ ಕಾಣುತ್ತಿತ್ತು. ''ನೀವು ಮೃದ್ವಂಗಿಗಳನ್ನು ಮನೆಗೆ ತೆಗೆದುಕೊಂಡು ಹೋದಿರಿ, ಅಲ್ಲವಾ?''

ತುಂಬ ಕತ್ತಲಾಗುವ ಮುನ್ನ ಅವರನ್ನು ಕರೆಯಲು ಬಂದಿತೇನೊ ಎಂಬಂತೆ ಪಿಂಟೊ ಅಲ್ಲಿಗೆ ಓಡಿಬಂದಿತು. ತೆಂಗಿನ ಮರಗಳ ನೆರಳು ಇಡೀ ದಂಡೆಯ ಮೇಲೆ ಬಿದ್ದಿತ್ತು. ಆದರೆ ಪಶ್ಚಿಮ ದಿಗಂತದ ತುದಿಯಲ್ಲಿ ಸೂರ್ಯ ಮರೆಯಾಗಿದ್ದ. ಸಂಜೆಯ ನಕ್ಷತ್ರ, ಆಕಾಶದಲ್ಲಾ-

ಗಲೇ ಕಾಣಿಸಿಕೊಂಡಿತ್ತು. ಕಡು ನೀಲಿ ಆಕಾಶದಲ್ಲಿ ತೇಲುತ್ತಿರುವಂತೆ ಕಾಣುತ್ತಿದ್ದ ಹಾಲು ಕೆನೆಯ ಬಣ್ಣದ ಚಂದ್ರನಿಗೆ ಹೋಲಿಸಿದಲ್ಲಿ ಗಂಭೀರವಾಗಿ ಪ್ರಜ್ವಲಿಸುತ್ತಿದ್ದ ಆ ಶುಕ್ರಗ್ರಹ ಹೆಚ್ಚು ಪ್ರಕಾಶಮಾನವಾಗಿತ್ತು. ಕತ್ತಲೆಯು ಗಾಢವಾಗುತ್ತಿದ್ದಂತೆ ಚಂದ್ರ ಮತ್ತು ನಕ್ಷತ್ರಗಳು ಹೆಚ್ಚು ಬೆಳಗಲಾರಂಭಿಸಿದವು.

"ಪಿಂಟೊ ! ಪಿಂಟೊ !" ಕಮಲ ಹಾದಿಯಲ್ಲಿ ಓಡುತ್ತಾ ಅದರತ್ತ ಹೋದಳು.

ಸಣ್ಣ ಮರಿಯಾಗಿದ್ದಾಗ ಒಬ್ಬ ವ್ಯಕ್ತಿಯಿಂದ ತೆಗೆದುಕೊಂಡಿದ್ದ ಅದಕ್ಕೆ ಅವನ ಹೆಸರನ್ನೇ ಇಟ್ಟಿದ್ದರು. ಆ ವ್ಯಕ್ತಿ ಯಾವುದೋ ವ್ಯವಹಾರಕ್ಕಾಗಿ ಹಳ್ಳಿಗೆ ಬಂದಿದ್ದ. ಆದರೆ ಅವನ ವ್ಯವಹಾರ ಏನೆಂಬುದು ಯಾರಿಗೂ ಸರಿಯಾಗಿ ಗೊತ್ತಿರಲಿಲ್ಲ. ಪಡಿತರ ಅಂಗಡಿಯ ಹಿಂಭಾಗದ ಒಂದು ಗುಡಿಸಿಲಿನಲ್ಲಿ ಒಂದು ನಾಯಿಯೊಡನೆ ಅವನು ವಾಸಿಸುತ್ತಿದ್ದ. ತಾನೇ ಅಡಿಗೆ ಮಾಡಿಕೊಳ್ಳುತ್ತಿದ್ದ. ಜನರೊಡನೆ ಮಾತನಾಡುತ್ತಾ ಹಳ್ಳಿಯಲ್ಲಿ ಓಡಾಡಿಕೊಂಡಿದ್ದ. ಹೆಂಡದಂಗಡಿಯಲ್ಲಿ, ಅವರ ಅಪ್ಪನೂ ಸೇರಿದಂತೆ, ಕೆಲವರು ಅವನಿಗೆ ಸ್ನೇಹಿತರಾಗಿದ್ದರು. ಗಣಿಗಳಿಂದ ತೆಗೆದ ಕಬ್ಬಿಣದ ಅದಿರನ್ನು ನದಿಯ ಮೂಲಕ ಸಮುದ್ರದ ಹಡಗುಗಳಿಗೆ ಒಯ್ಯುವ ದೋಣಿಗಳಲ್ಲಿ ಕೆಲಸಮಾಡಲು ಗೋವಾಕ್ಕೆ ಹೋಗುತ್ತೀಯಾ? ಎಂದು ಅವರಪ್ಪನನ್ನು ಒಮ್ಮೆ ಅವನು ಕೇಳಿದ್ದ. ಗೋವಾದಲ್ಲಿ ಹೆಂಡವು ತುಂಬ ರುಚಿಕರವಾಗಿರುವುದೆಂದು ಕೇಳಿದ್ದ ಅಪ್ಪ, ಅಲ್ಲಿಗೆ ಹೋಗಲು ಒಪ್ಪಿ, ಬಸ್ ಟಿಕೆಟ್‌ಗಾಗಿ ಐವತ್ತು ರೂಪಾಯಿಗಳನ್ನೂ ಆ ವ್ಯಕ್ತಿಗೆ ಕೊಟ್ಟಿದ್ದ. ಗ್ರಾಮದ ಇತರ ಕೆಲವು ಉದ್ಯೋಗರಹಿತ ಜನರೊಡನೆ ಗೋವಾಕ್ಕೆ ಹೋಗಬೇಕಾದ ಹಿಂದಿನ ದಿನ ಪಿಂಟೊ ಎಂಬ ಆ ವ್ಯಕ್ತಿ ಕಣ್ಮರೆಯಾದ. ಅವರಪ್ಪನಿಗೆ ನಂಬುವುದೇ ಕಷ್ಟವಾಯಿತು. ಇಡೀ ದಿನ ದಿಗ್ಭ್ರಾಂತನಾಗಿ ಪಡಖಾನೆಯಲ್ಲಿ ಕುಳಿತಿದ್ದ. ಶಾಲೆಯಿಂದ ಹಿಂದಿರುಗುತ್ತಿದ್ದ ಕಮಲ, ನಿರ್ಜನವಾಗಿದ್ದ ಗುಡಿಸಿಲಿನಲ್ಲಿ ನಾಯಿ ಮತ್ತು ಅದರ ಮರಿಗಳ ಅಳುವನ್ನು ಕೇಳಿ, ಅವುಗಳ ಪೈಕಿ ಅತ್ಯಂತ ಚಿಕ್ಕದೂ, ದುರ್ಬಲವೂ ಆಗಿದ್ದ ಮರಿಯನ್ನು ಮನೆಗೆ ತಂದಳು. ತಂದೆ ತೆತ್ತ ಐವತ್ತು ರೂಪಾಯಿಗಳಿಗೆ ದೊರೆತ ಪ್ರತಿಫಲವೆಂದರೆ ಆ ನಾಯಿಮರಿ ! ಆ ವ್ಯಕ್ತಿ ಇನ್ನೂ ಹಲವರಿಗೆ ಮೋಸಮಾಡಿದ್ದನೆಂಬುದು ಮುಂದೆ ಅವರಿಗೆ ಗೊತ್ತಾಯಿತು.

ಆದರೆ ಈ ಮೋಸಕ್ಕೆ ನಾಯಿಯಾಗಲೀ, ಅದರ ಮರಿಗಳಾಗಲೀ ಕಾರಣವೆಂದು ಯಾರೂ ದೂರುವಂತಿರಲಿಲ್ಲ. ಚಿಕ್ಕ ಗಾತ್ರದ ಮತ್ತು ಬಿಳಿ ಹಾಗೂ ಬೂದು ಬಣ್ಣದ ಕೂದಲುಳ್ಳ ಪಿಂಟೊ, ಸಿಂಹದಂತೆ ತುಂಬ ಧೈರ್ಯಶಾಲಿಯಾಗಿತ್ತು. ತನ್ನನ್ನು ಪಾರು ಮಾಡಿದ ಕಮಲಳಲ್ಲಿ ಅದಕ್ಕೆ ಅತಿ ಪ್ರೀತಿ. ಇಡೀ ದಿನ ಮನೆಯಲ್ಲೇ ಇದ್ದು, ತನ್ನನ್ನು ಕೈ ಬಿಡದಿದ್ದ ಲೀಲಳಿಗೆ ತುಂಬಾ ವಿಧೇಯವಾಗಿತ್ತು. ಹರಿ ಮಾತ್ರ ಅದನ್ನು ಎಂದೂ ಮುಟ್ಟಿರಲಿಲ್ಲ. ಅಲ್ಲದೆ ಅದನ್ನು ಸ್ವಲ್ಪ ಕೆಟ್ಟದಾಗಿಯೇ ನೋಡುತ್ತಿದ್ದ. ಪಿಂಟೊವನ್ನು ನೋಡಿದಾಗಲೆಲ್ಲಾ ಅವನಿಗೆ ತನ್ನ ಅಪ್ಪನ ತಿಳಿಗೇಡಿತನದ ನೆನಪಾಗುತ್ತಿತ್ತು. ನಿಜ, ಹಳ್ಳಿಯಲ್ಲಿ ಇತರ ಕೆಲವರೂ ಮೋಸ ಹೋಗಿದ್ದರು. ಹಿಂದೆಯೂ ಸಹ ಇಂತಹ ಹಲವಾರು ಸಂಗತಿಗಳು ಸಂಭವಿಸಿದ್ದವು. ನಗರದ ಬುದ್ಧಿವಂತ ಮೋಸಗಾರರು ಹಳ್ಳಿಗಳಿಗೆ ಬಂದು, ಅಜ್ಞಾನಿಗಳಾದ ಹಳ್ಳಿಗರನ್ನು ಮೋಸಗೊಳಿಸಿದ್ದರು. ಈ ವಿಷಯವನ್ನು ಕುರಿತು ಯೋಚಿಸಿದಾಗಲೆಲ್ಲಾ ಹರಿಗೆ ತುಂಬ ಕೋಪ ಬರುತ್ತಿತ್ತು. ಹರಿಯೇನೂ ಬುದ್ಧಿವಂತನಲ್ಲ, ಆದರೆ ಎಂದಿಗೂ ಮೋಸ ಹೋಗುವುದಿಲ್ಲ.

ಹರಿ, ನಾಯಿಯನ್ನೂ ಇಬ್ಬರು ತಂಗಿಯರನ್ನೂ ಹಿಂಬಾಲಿಸಿದ. ತಮ್ಮ ಗುಡಿಸಿಲಿಗೆ ಹೊಂದಿಕೊಂಡಂತಿದ್ದ 'ಮೋನ್ ರಿಪೋಸ್' ಬಂಗಲೆಯ ಆವರಣದ ಬಿಳಿ ಗೋಡೆಯನ್ನು ದಾಟಿದ. ಗುಡಿಸಿಲಿನಲ್ಲಿ ಹಣತೆಯನ್ನು ಹಚ್ಚಲಾಗಿತ್ತು ಮತ್ತು ಲೀಲ ಅಡಿಗೆ ಮಾಡುತ್ತಿದ್ದಳು.

ಹುಡುಗಿಯರು ಸಂಗ್ರಹಿಸಿ ತಂದಿದ್ದ ಕೆಲವು ಮೃದ್ವಂಗಿಗಳೂ ಮತ್ತು ಮೆಣಸಿನ ಕಾಯಿಯೂ ಬಿಸಿ ಸಾರಿನ ಮೇಲೆ ತೇಲುತ್ತಿದ್ದವು ಹಾಗೂ ಹಳ್ಳಿಯ ಅಂಗಡಿಯಿಂದ ತಂದಿದ್ದ ದಪ್ಪ ಅಕ್ಕಿಯಿಂದ ಅನ್ನ ಮಾಡಲಾಗಿತ್ತು. ಇದೇ ಅವರ ರಾತ್ರಿಯೂಟವಾಗಿತ್ತು.

ಲೀಲ ಒಂದು ತಟ್ಟೆಯಲ್ಲಿ ಅವನ್ನು ಹಾಕಿಕೊಂಡು ತನ್ನ ತಾಯಿಗಾಗಿ ಒಯ್ದಳು. ನಂತರ ತನ್ನ ತಂಗಿಯರು ಮತ್ತು ತಮ್ಮನೊಡನೆ ಅಡುಗೆ ಮನೆಯ ನೆಲದ ಮೇಲೆ ಕುಳಿತು ಊಟ ಮಾಡಲಾರಂಭಿಸಿದಳು. ಮಿಕ್ಕಿದ್ದನ್ನು ತಿನ್ನಲು ಪಿಂಟೊ ಮೌನವಾಗಿ ಕಾಯುತ್ತಿತ್ತು.

''ಅಪ್ಪನೆಲ್ಲಿ?'' ಹರಿ ಮೆತ್ತಗೆ ಕೇಳಿದ, ''ಹೊರಗೆ ಹೋಗಿದ್ದಾನಾ?''

ಲೀಲ ಹೌದೆನ್ನುವಂತೆ ತಲೆಯಾಡಿಸಿದಳು. ಅಪ್ಪ ಮನೆಯಲ್ಲಿಲ್ಲದಿರುವುದು ಅವರಿಗೆ ಸ್ವಲ್ಪ ನೆಮ್ಮದಿಯನ್ನೇ ತಂದಿತ್ತು. ಆದರೆ ಅವನು ಪಡಖಾನೆಗೆ ಹೋಗಿ, ಹಳ್ಳಿಯ ಇತರ ಕುಡುಕರೊಡನೆ ಇಡೀ ರಾತ್ರಿ ಕುಡಿಯುವುದು ಅವರಿಗೆ ಜಿಗುಪ್ಸೆಯುಂಟುಮಾಡಿತ್ತು.

***

ನಡುರಾತ್ರಿಯ ನಂತರ, ಲೀಲ ಮತ್ತು ಹರಿಗೆ, ಗಂಡಸರು ಮನೆಗೆ ಹಿಂದಿರುಗುತ್ತಿರುವ ಸದ್ದು ಕೇಳಿಸಿತು. ಪ್ರತಿ ರಾತ್ರಿ ತಮ್ಮಪ್ಪನ ಜೊತೆ ಸೇರಿ ಕುಡಿಯುತ್ತಿದ್ದ ನೆರೆಯ ತೋಟದ ಮೂವರು ಸೋದರರೂ ಇದ್ದರು. ಚಂದ್ರನಾಗಲೇ ಮುಳುಗಿದ್ದು ಗಾಢವಾದ ಕತ್ತಲೆ ಆವರಿಸಿತ್ತು. ಉಜ್ವಲವಾದ ನಕ್ಷತ್ರಗಳು ಬೆಳಗುತ್ತಿದ್ದವು. ಆದರೆ ಅವುಗಳ ಬೆಳಕು, ತೆಂಗಿನ ಮರಗಳ ದಟ್ಟವಾದ ಗರಿಗಳನ್ನು ತೂರಿಕೊಂಡು ಕಡಲ ದಂಡೆಯ ಮೇಲೆ ಬೀಳುವುದು ಸಾಧ್ಯವಿರಲಿಲ್ಲ. ಹಳ್ಳಿಯಿಂದ ಹೊರಟಾಗ ಈ ಜನ ಒಂದು ಲಾಂದ್ರವನ್ನು ಹಿಡಿದಿದ್ದರು. ಆದರೆ ವಾಪಸ್ ಬರುವಾಗ ಎಡವಿ ಒಬ್ಬರ ಮೇಲೊಬ್ಬರು ಬಿದ್ದು ಅದು ಒಡೆದು ಹೋಗಿತ್ತು. ಕಲ್ಲುಗಳ ಮೇಲೆ ಬಿದ್ದು, ಚೂರು ಚೂರಾದಾಗ ಅವರೆಲ್ಲಾ ಗಟ್ಟಿಯಾಗಿ ನಕ್ಕುಬಿಟ್ಟಿದ್ದರು. ಹೊಸ ಲಾಂದ್ರದ ಬೆಲೆ ಮತ್ತು ಎಣ್ಣೆಯ ಬಗ್ಗೆ ಚಿಂತಿಸುವುದು, ಅವರ ಹೆಂಡತಿಯರಿಗೆ ಸೇರಿದ ವಿಷಯವಾಗಿತ್ತು. ಈಗ ಅವರು ಕತ್ತಲಲ್ಲೇ ತಮ್ಮ ಮನೆಗಳಿಗೆ ದಾರಿಯನ್ನು ಹುಡುಕುತ್ತಾ, ಧೈರ್ಯ ಪಡೆಯಲು ಒಬ್ಬರನ್ನೊಬ್ಬರು ಕೂಗುತ್ತಾ, ಹಾಡುತ್ತಾ ಹೊರಟಿದ್ದರು.

ಅವರು ಮಾಡುತ್ತಿದ್ದ ಈ ಗಲಾಟೆಗಾಗಿ ಥುಲ್‌ನ ಎಲ್ಲ ಬೀದಿ ನಾಯಿಗಳೂ ಎದ್ದು, ಪ್ರತಿಭಟನೆಯಿಂದ ಊಳಿಡುತ್ತಿದ್ದವು.

ಜನರ ಪೈಕಿ ತಮ್ಮ ಅಪ್ಪನೂ ಸೇರಿದ್ದಾನೆಂಬುದನ್ನು ಅರಿತಿದ್ದ ಲೀಲ ಮತ್ತು ಹರಿ, ಅವರ ಗಲಾಟೆಯನ್ನು ಕೇಳಲಾಗದೆ, ತಮ್ಮ ತಲೆದಿಂಬುಗಳನ್ನು ಕಿವಿಗಳಿಗೆ ಒತ್ತಿ ಹಿಡಿದಿದ್ದರು. ಆ ಅಬ್ಬರಕ್ಕೆ ಬೆದರಿ, ಅಸಹ್ಯಪಡುತ್ತಿದ್ದ ಲೀಲ ಅಳಲಾರಂಭಿಸಿದಳು. ಹರಿ ಅಳಲಿಲ್ಲ, ಆದರೆ ತನ್ನ ತುಟಿಗಳನ್ನು ಕಚ್ಚಿಕೊಂಡ. ಹರಿ ಯೋಚಿಸಿದ, ''ಅಪ್ಪನಿಗೆ ವಿಷಪೂರಿತ ಹಾವು ಕಚ್ಚಬಹುದು. ಕತ್ತಲಲ್ಲಿ ಅವುಗಳ ಪೈಕಿ ಒಂದನ್ನು ಅವನು ತುಳಿಯಬಹುದು. ಆಗ ಅದು ಅವನಿಗೆ ಕಚ್ಚಬಹುದು. ಅಂತಹ ಹಾವುಗಳು ಬೇಕಾದಷ್ಟಿವೆ, ಅಲ್ಲದೆ ಕತ್ತಲು ಬೇರೆ ಇದೆ.

ಅಪ್ಪ ಸಾಯಬಹುದು.'' ಹೆದರಿಕೆಯಿಂದ ಅವನು ಈ ಮಾತನ್ನು ಜೋರಾಗಿ ಹೇಳಲಿಲ್ಲ-ವಾದರೂ ಹೀಗೆ ಆಗಲೆಂಬುದು ಅವನ ಆಶಯವಾಗಿತ್ತು.

ಸ್ವಲ್ಪ ಸಮಯದ ನಂತರ ಮುಂದಿನ ಬಾಗಿಲನ್ನು ಬಲವಾಗಿ ಬಡಿದ ಸದ್ದು ಕೇಳಿಸಿತು. ಇಡೀ ಮನೆಯೇ ಕರ್ಕಶ ಶಬ್ದ ಮಾಡುವಂತೆ ಅಪ್ಪ ಬಾಗಿಲನ್ನು ಹಾರೊಡೆದ. ಗುಡಿಸಿಲ ಗೋಡೆಗಳು ಅಲ್ಲಾಡುವಂತೆ ಛಾವಣಿಗೆ ಹಾಕಿದ್ದ ತೆಂಗಿನ ಗರಿಗಳು ಸರಸರ ಸದ್ದು ಮಾಡಿದವು. ಅಪ್ಪ ಮುಗ್ಗರಿಸುತ್ತಾ ತಾಯಿಯ ಕೋಣೆಯೊಳಗೆ ಹೋದ. ತಾಯಿ ಪ್ರತಿಭಟನೆಯೊಡನೆ ಏನನ್ನೋ ಹೇಳಲು ಯತ್ನಿಸಿದಳು. ಆದರೆ ಅವನು ಅವಳನ್ನೂ ಗದರಿಸಿ, ಒಂದು ಕುಪ್ಪೆಯಂತೆ ಕೆಳಗೆ ಕುಸಿದು, ಮುದುಡಿಕೊಂಡು ಮಲಗಿ ಗೊರಕೆ ಹೊಡೆಯಲಾರಂಭಿಸಿದ. ಮತ್ತೆ ಮೌನ ಆವರಿಸಿತು. ಆದರೆ ಆ ಮೌನ ಶಾಂತವೂ ಹಿತಕರವೂ ಆಗಿರಲಿಲ್ಲ. ಅದು ಭಯಂಕರ, ಉದ್ರಿಕ್ತ ಮತ್ತು ಘೋರವಾಗಿತ್ತು.

# 2

ಲೀಲ ಇಂದು ಧುಲ್‌ನ ಪೇಟೆಗೆ ಹೋಗಬೇಕಾಗಿದೆ. ಅವಳು ಅಕ್ಕಿಯನ್ನೂ ಬಹುಶಃ ಸ್ವಲ್ಪ ಸಕ್ಕರೆ ಮತ್ತು ಚಹಾವನ್ನೂ ಕೊಳ್ಳಬೇಕಾಗಿದೆ. ಹರಿ ಆರು ಗೊನೆ ತೆಂಗಿನ ಕಾಯಿಗಳನ್ನು ಇಳಿಸಿ, ಮುಂಬೈನಿಂದ ಲಾರಿಯಲ್ಲಿ ಬಂದಿದ್ದ ಮಲಬಾರಿಗಳಿಗೆ ಅವನ್ನು ಮಾರಿದ್ದಾನೆ. ಇದರಿಂದ ಖರ್ಚಿಗಾಗಿ ಸ್ವಲ್ಪ ಹಣ ಅವಳಲ್ಲಿದೆ. ಬೇಲ ಮತ್ತು ಕಮಲ ಶಾಲೆಗೆ ಹೊರಟ ಮೇಲೆ ಕೊಠಡಿಯ ಮೂಲೆಯಲ್ಲಿದ್ದ ತನ್ನ ಮತ್ತು ತಂಗಿಯರ ಹಸಿರು ತಗಡಿನ ಟ್ರಂಕಿನಿಂದ ತನ್ನಲ್ಲಿದ್ದ ಅತ್ಯುತ್ತಮ ಸೀರೆ ತೆಗೆದು ಉಟ್ಟುಕೊಂಡಳು. ನಸುಗೆಂಪಿನ ಆ ಸೀರೆ ಮೇಲೆ ಹಳದಿ ಹೂಗಳ ಚಿತ್ರಾಲಂಕಾರವಿದ್ದು, ಅಂಚು ಕಡುನೀಲಿ ಬಣ್ಣದ್ದಾಗಿತ್ತು. ಅದೊಂದು ಅಗ್ಗದ ಹತ್ತಿ ಸೀರೆ. ಅಪರೂಪಕ್ಕೆ ಅವಳು ಅದನ್ನು ಉಡುತ್ತಿದ್ದುದರಿಂದ ಅದು ಹೊಸದಾಗಿಯೇ ಕಾಣುತ್ತಿತ್ತು. ಅದನ್ನು ಉಟ್ಟಾಗ  ಅವಳು ಇನ್ನೂ ಚಿಕ್ಕವಳಾಗಿ, ಆಕರ್ಷಕಳಾಗಿ ಕಾಣುತ್ತಿದ್ದಳು. ಪ್ರತಿದಿನ ಅವಳು ಉಡುತ್ತಿದ್ದ ಸೀರೆಗಳು ಕಡು ಹಸಿರು, ಇಲ್ಲವೆ ಕಡುಗೆಂಪು ಬಣ್ಣದವು. ಬೇಗ ಹರಿಯುವಂತಹ ಒರಟು ಬಟ್ಟೆಯ ಆ ಸೀರೆಗಳ ಮೇಲೆ ಯಾವ ಚಿತ್ರಾಲಂಕಾರವೂ ಇರಲಿಲ್ಲ. ಲೀಲಳಿಗೆ ಆ ಸೀರೆಯನ್ನು ಉಟ್ಟಾಗ ತಾನು ಚಿಕ್ಕವಳೆಂಬ ಭಾವನೆ ಮಾತ್ರವಲ್ಲದೆ, ಸಂತೋಷವೂ ಆಗುತ್ತಿತ್ತು. ಅಡಿಗೆ ಮನೆಯ ಬಾಗಿಲ ಮೊಳೆಗೆ ನೇತುಹಾಕಿದ್ದ ಚೀಲವನ್ನು ತೆಗೆದುಕೊಂಡು ತಾಯಿಗೆ ವಿದಾಯ ಹೇಳಿದಳು. ಬಹುಶಃ ಮಲಗಿ ನಿದ್ರಿಸುತ್ತಿದ್ದುದರಿಂದ ಅವಳಿಂದ ಯಾವ ಉತ್ತರವೂ ಬರಲಿಲ್ಲ. ಸ್ವಲ್ಪ ಸೆಖೆಯಿದ್ದರೂ ಬೆಳಗಿನ ಬಿಸಿಲಿನಲ್ಲಿ ಸೊಗಸಾಗಿದ್ದ ಕಡಲ ದಂಡೆಯಲ್ಲಿ ಅವಳು ನಡೆದು ಹೊರಟಳು.

ಬಿಸಿಲಿನ ಝಳದಿಂದ ಪಾರಾಗಲು ದೊಡ್ಡ ಕಪ್ಪು ಛತ್ರಿಗಳನ್ನು ಹಿಡಿದಿದ್ದ ಇತರ ಕೆಲವು ಹೆಂಗಸರೂ ಪೇಟೆಗೆ ಹೊರಟಿದ್ದರು. ಇಡೀ ಸಮುದ್ರವೇ ಪ್ರತಿಫಲಿತ ಬೆಳಕಿನಿಂದ ಹೊಳೆಯುತ್ತಿತ್ತು. ಕನ್ನಡಿಯೊಂದು ಚೂರು ಚೂರಾಗಿ ಒಡೆದು ಪ್ರಕಾಶಿಸುತ್ತಿದೆಯೇನೊ ಎಂಬಂತೆ ಕಾಣುತ್ತಿತ್ತು. ಆ ಉಜ್ವಲವಾದ ಬೆಳಕಿನಲ್ಲಿ ಕಲ್ಲುಬಂಡೆಗಳ ಎರಡು ಚಿಕ್ಕ ದ್ವೀಪಗಳಾದ ಉಂಧೇರಿ ಮತ್ತು ಕುಂಧೇರಿ ಮಾತ್ರ ಉಬ್ಬು ಬೊಟ್ಟುಗಳಂತೆ ಕಾಣುತ್ತಿದ್ದವು. ಆ ದ್ವೀಪಗಳ ಪೈಕಿ ಒಂದರಲ್ಲಿ ಬಹಳ ಹಿಂದೆ ಒಂದು ಕೋಟೆಯನ್ನು ಕಟ್ಟಲಾಗಿತ್ತಂತೆ. ಆದರೆ ಈಗ ಅಲ್ಲಿ ಹಲ್ಲಿಗಳನ್ನು ಬಿಟ್ಟು ಮತ್ತಾವ ಜೀವಿಗಳೂ ವಾಸಿಸುತ್ತಿರಲಿಲ್ಲ. ಜೋರಾಗಿ ಬೀಸುತ್ತಿದ್ದ ಗಾಳಿಯಲ್ಲಿ ಸಣ್ಣ ಹಡಗುಗಳು ಮತ್ತು ತೆಪ್ಪಗಳು, ಹಕ್ಕಿಗಳಂತೆ ವೇಗವಾಗಿ ಹೋಗುತ್ತಿದ್ದವು. ಅವು ದೂರದ ಗುಜರಾತ್ ಮತ್ತು ಸೌರಾಷ್ಟ್ರದ ಕರಾವಳಿಗಳಿಗೆ ಸರಕುಗಳನ್ನು ಒಯ್ಯುತ್ತಿದ್ದವು.

ಕಡಲ ದಂಡೆಯಲ್ಲಿ ಭಾರಿ ಕೋಲಾಹಲವುಂಟಾಗಿತ್ತು. ಲಾರಿಯೊಂದು ಅಲ್ಲಿಗೆ ಬಂದು ಮರಮುಟ್ಟುಗಳನ್ನು ಇಳಿಸಿತ್ತು. ಅದರ ಚಕ್ರಗಳು ಈಗ ಮರಳಿನಲ್ಲಿ ಹುದುಗಿ ಹೋಗಿದ್ದವು. ಚಾಲಕನು ಜೋರಾಗಿ ಬೈಯ್ಯುತ್ತಿದ್ದನು. ಶಾಲೆಗೆ ಹೋಗದೆ ಇದ್ದ ಹಳ್ಳಿಯ ಕೆಲವು ಹುಡುಗರು ಸಹಾಯಕ್ಕಾಗಿ ಬಂದಿದ್ದರು. ಅವರು ಚಕ್ರಗಳ ಕೆಳಗೆ ಮರಳ ಮೇಲೆ ತೆಂಗಿನ ಗರಿಗಳನ್ನು ಹಾಕಿ, ಅವುಗಳ ಮೇಲೆ ಲಾರಿಯನ್ನು ತಳ್ಳಲು ಪ್ರಯತ್ನಿಸುತ್ತಿದ್ದರು. ಲೀಲ ಅತ್ತ ಹೋಗುತ್ತಿದ್ದಾಗ, ಚಕ್ರಗಳು ಗಿರ್ರನೆ ತಿರುಗಿ ಮರಳನ್ನು ಚಿಮ್ಮಿಸಿದವು. ಲಾರಿಯು ಜೋರಾಗಿ ಶಬ್ದ ಮಾಡಿ ಮುನ್ನುಗ್ಗಿ, ತನ್ನ ಮಾರ್ಗದಲ್ಲಿ ಹೊರಟಿತು.

''ಮುಂದಿನ ಸಲ ನಿಮ್ಮ ಮರಮುಟ್ಟನ್ನು ಎತ್ತಿನ ಗಾಡಿಯಲ್ಲಿ ಕಳಿಸಿ'' ಎಂದು ಒಬ್ಬ ಹುಡುಗ ಲಾರಿ ಚಾಲಕನಿಗೆ ಕೂಗಿ ಹೇಳಿದಾಗ, ಅಲ್ಲಿ ದೊಡ್ಡ ನಗೆಯ ಅಲೆಯೆದ್ದಿತು.

''ಏನು, ನಾನು ಎತ್ತಿನ ಗಾಡಿ ಹೊಡೆಯಬೇಕೆ?'' ಎಂದು ಲಾರಿ ಚಾಲಕ ಕಿಟಕಿಯ ಹೊರಗೆ ತಲೆಹಾಕಿ ಹೇಳಿದ.

''ಎತ್ತುಗಳು ನಿನ್ನ ಗಾಡಿಯಂತೆ ಮರಳಲ್ಲಿ ಸಿಕ್ಕಿಕೊಳ್ಳುವುದಿಲ್ಲ'' ಎಂದು ಜನ ಕೂಗಿದರು. ಆದರೆ, ಆ ವೇಳೆಗೆ ಅವನು ಹೊರಟು ಹೋಗಿದ್ದ.

ಲೀಲ, ಹೆಚ್ಚು ಮಾತು ಕೇಳಲು ಅಲ್ಲಿ ನಿಲ್ಲದೆ ತ್ವರಿತವಾಗಿ ಹೊರಟಳು. ಬಿಸಿ ಮರಳಿನಲ್ಲಿ ಅವಳ ಅಂಗಾಲುಗಳು ಸುಡಲಾರಂಭಿಸಿದವು. ಗ್ರಾಮದ ಸುತ್ತಮುತ್ತ ಒಣಗಿದ ನೆಲದ ಮೇಲೆ ನೆರಳು ಹಾಸಿದ್ದ ದೊಡ್ಡ ಆಲದ ಮರಗಳು ಹಾಗೂ ನುಗ್ಗೆ ಮರಗಳ ಕೆಳಗೆ ಅವಳು ಬಂದಳು. ಅಲ್ಲಿ ಸ್ವಲ್ಪ ತಂಪಾಗಿತ್ತು. ಪೇಟೆಗೆ ತಲುಪಿಸುವ ಹಳ್ಳಿಯ ರಸ್ತೆಯ ಅಕ್ಕಪಕ್ಕದಲ್ಲಿ ಮನೆಗಳಿದ್ದವು. ಅವುಗಳ ಪೈಕಿ ಕೆಲವನ್ನು ಇಟ್ಟಿಗೆಗಳಲ್ಲಿ ಕಟ್ಟಿದ್ದು, ಅವುಗಳಿಗೆ ಸುಣ್ಣ ಬಳಿಯಲಾಗಿತ್ತು. ಆ ಮನೆಗಳ ವರಾಂಡದ ಗೋಡೆಗಳ ಮೇಲೆ ಬಣ್ಣಬಣ್ಣದ ಹೂಗಳನ್ನು ಬಿಡಿಸಲಾಗಿತ್ತು. ಇತರ ಕೆಲವು ಮನೆಗಳನ್ನು ಮಣ್ಣಿನಲ್ಲಿ ಕಟ್ಟಲಾಗಿದ್ದು ಅವುಗಳ ಛಾವಣಿಗೆ ತೆಂಗಿನ ಚಾಪೆಗಳನ್ನು ಹಾಕಲಾಗಿತ್ತು. ಆದರೆ, ಮನೆ ದೊಡ್ಡದಿರಲಿ, ಚಿಕ್ಕದಿರಲಿ, ಶ್ರೀಮಂತರದ್ದಾಗಿರಲಿ, ಬಡವರದ್ದಾಗಿರಲಿ, ಮುಂಬಾಗಿಲಿನಲ್ಲಿ ಕುಂಡದಲ್ಲಿ ಪವಿತ್ರ ತುಳಸಿ ಗಿಡವನ್ನು ಬೆಳೆಸಲಾಗಿತ್ತು. ಚಿಕ್ಕ ಮಕ್ಕಳು ಮತ್ತು ಬೀದಿ ನಾಯಿಗಳು ದೂಳಿನಲ್ಲಿ ಆಟವಾಡುತ್ತಿದ್ದರು. ಹೆಂಗಸರು ಅಕ್ಕಿಯನ್ನು ಆರಿಸುತ್ತಲೋ, ಕೊಳೆಯ ನೀರನ್ನು ಬೀದಿಗೆ ಚೆಲ್ಲುತ್ತಲೋ ಇದ್ದರು.

ಆ ಹಾದಿಯ ಕೊನೆಯಲ್ಲೇ ಗುಡಿ. ಅದು ತೀರ ಹಳೆಯದೂ ಅಲ್ಲ, ಆಕರ್ಷಕವೂ ಅಲ್ಲ. ಅದು ಇಟ್ಟಿಗೆಯ ನಾಲ್ಕು ಸ್ತಂಭಗಳನ್ನು ಹೊಂದಿತ್ತು. ಅದರ ಛಾವಣಿಗೆ ಹೆಂಚು ಹೊದಿಸಲಾಗಿತ್ತು. ಗೋಡೆಗಳಿಲ್ಲದ ಒಂದು ಅಂಗಣ. ಒಂದು ಚಿಕ್ಕ ಕಮಾನು ಗೂಡು. ಅದರೊಳಗೆ ದೇವರು, ಅಷ್ಟೆ. ಹಲವು ಯುವಕರು ಅಲ್ಲಿ ಮೆಟ್ಟಿಲುಗಳ ಮೇಲೆ ಕುಳಿತು, ನಗಾರಿಗಳನ್ನು ಬಡಿಯುತ್ತಾ ಹಾಡುತ್ತಿದ್ದರು.

ಲೀಲ ಅವರತ್ತ ನೋಡದೆ ಹೊರಟಳು. ರಸ್ತೆಯಾಚೆ ಇಟ್ಟಿಗೆ ಮನೆಯೊಂದರಿಂದ ಯುವತಿಯೊಬ್ಬಳು ಅವಳನ್ನು ಕರೆದಳು, ''ನೋಡು, ಲೀಲ ಕಲಾವಿದರು ಬಂದಿದ್ದಾರೆ. ಅವರು ಇಂದು ರಾತ್ರಿ ಒಂದು ನಾಟಕ ಆಡುತ್ತಾರೆ.''

ಲೀಲ ನಗುತ್ತಾ ಗೆಳತಿ ಮೀನಾಳ ಬಳಿಗೆ ಹೋದಳು. ''ಯಾವ ನಾಟಕ? ನಿನಗೆ

ಗೊತ್ತಾ?'' ಎಂದು ಕೇಳಿದಳು.

''ಗೊತ್ತಿಲ್ಲ. ಆದರೆ ಸಾಮಾನ್ಯವಾಗಿ ಯಾವಾಗಲೂ ಆಡುವ ನಾಟಕವೇ ಇರಬೇಕು.'' ಮೀನ ಹೇಳಿದಳು. ಗುಡಿಯ ಸಮೀಪದಲ್ಲೇ ಇದ್ದ ಮೀನ ಅಲ್ಲಿ ಆಡುತ್ತಿದ್ದ ಎಲ್ಲ ನಾಟಕಗಳನ್ನೂ ನೋಡಿದ್ದಳು. ''ನಾಟಕ, ರಾಧಾ-ಕೃಷ್ಣ, ಇಲ್ಲವೆ ರಾಮ-ಸೀತ ಅಥವಾ ನಳ-ದಮಯಂತಿ ಇರಬಹುದು. ಯಾವಾಗಲು ಈ ನಾಟಕಗಳನ್ನೇ ಆಡುತ್ತಾರೆ, ಗೊತ್ತಾ?''

ಲೀಲ ಕೆಲವು ನಾಟಕಗಳನ್ನು ಮಾತ್ರ ನೋಡಿದ್ದಳು. ''ನೀನೂ ಹೋಗಿ ನೋಡುತ್ತೀಯಾ?'' ಲೀಲ ಸ್ವಲ್ಪ ಅಸೂಯೆಯಿಂದಲೇ ಕೇಳಿದಳು.

''ನಾನು ನಮ್ಮ ವರಾಂಡದಲ್ಲೇ ಕುಳಿತು ನೋಡುತ್ತೇನೆ.''

''ಇಲ್ಲಿರುವ ನೀನೇ ಪುಣ್ಯವಂತೆ.''

''ನೀನೂ ಬಂದು, ನನ್ನ ಜೊತೆಯಲ್ಲೇ ಕುಳಿತು ನೋಡು.''

''ರಾತ್ರಿಯ ವೇಳೆ ನನಗೆ ಬರಲಾಗುವುದಿಲ್ಲ.''

''ಏಕೆ, ಹರಿ ನಿನ್ನನ್ನು ಕರೆದುಕೊಂಡು ಬರುತ್ತಾನೆ.''

''ಚಿಕ್ಕ ಹುಡುಗಿಯರನ್ನು ಮನೆಯಲ್ಲೇ ಬಿಟ್ಟು, ಹರಿ ಮತ್ತು ನಾನು ಒಟ್ಟಿಗೆ ಬರಲಾಗುವುದಿಲ್ಲ.''

''ಅವರಿಗೇನಾಗುತ್ತೆ? ನಿಮ್ಮ ಅಮ್ಮ ಮತ್ತು ಅಪ್ಪ ಇರುತ್ತಾರೆ.''

ಆದರೆ ಲೀಲ ಯಾವ ವಿವರಣೆ ನೀಡದೆ ತಲೆಯಾಡಿಸಿದಳು ''ನಾನು ಸ್ವಲ್ಪ ಅಕ್ಕಿ ಮತ್ತು ಸಕ್ಕರೆಯನ್ನು ಕೊಳ್ಳಲು ಹೋಗಬೇಕು. ನೀನೂ ಬರುತ್ತೀಯಾ?''

ಮೀನಳಿಗೆ ಮಾಡಲು ಏನೂ ಕೆಲಸವಿರಲಿಲ್ಲ. ಅವಳ ತಂದೆ-ತಾಯಿ ಅವಳಿಗೆ ಗಂಡು ಹುಡುಕುತ್ತಿದ್ದರು. ಇವಳೂ ಲೀಲಳ ಜೊತೆ ಹೊರಟಳು. ಇಬ್ಬರೂ ಅಂಗಡಿಗಳ ರಸ್ತೆಯುದ್ದಕ್ಕೂ ನಡೆದರು. ರಸ್ತೆಯ ಎರಡು ಪಕ್ಕಗಳಲ್ಲೂ ಹೆಂಗಸರು, ಮಾರಾಟ ಮಾಡಬೇಕಾದ ತಮ್ಮ ಪದಾರ್ಥಗಳನ್ನಿಟ್ಟುಕೊಂಡು ಕುಳಿತಿದ್ದರು. ತಮ್ಮ ಮುಂದೆ ಹರಡಿದ್ದ ಬಾಳೆ ಎಲೆಯ ಮೇಲೆ ಅವರು ಕೆನ್ನೀಲಿ ಬಣ್ಣದ ಕೆಲವು ಬದನೆಕಾಯಿಗಳು, ಬಸಳೆ ಸೊಪ್ಪಿನ ಕಂತೆ, ಐದಾರು ಬಾಳೆಕಾಯಿಗಳು ಮತ್ತು ಒಂದೆರಡು ತೆಂಗಿನಕಾಯಿಗಳನ್ನೂ, ಬೇಲಿಗಳು ಮತ್ತು ಪೊದೆಗಳಲ್ಲಿ ಕಿತ್ತ ಕಡುಗೆಂಪು, ಬಿಳಿ ಮತ್ತು ಹಳದಿ ಹೂಗಳನ್ನು ಇಟ್ಟುಕೊಂಡಿದ್ದರು. ತಲೆಗೆ ಮುಡಿಯಲು ಹೂಗಳನ್ನು ಕಟ್ಟುವ ಸಲುವಾಗಿ ಮೀನ ಕೆಲವು ಹೂಗಳನ್ನು ಕೊಂಡಳು. ಸ್ವಲ್ಪ ಹೆಚ್ಚು ಹಣ ಕೊಟ್ಟರೆ ಪೋಣಿಸಿದ ಹೂವು ಸಿಗುತ್ತಿತ್ತು.

ಇಂತಹ ಪದಾರ್ಥಗಳಿಗಾಗಿ ಲೀಲ ಹಣ ಖರ್ಚು ಮಾಡಲಾರಳು. ಪೇಟೆ ಚೌಕದಲ್ಲಿದ್ದ ಎರಡು ದಿನಸಿ ಅಂಗಡಿಗಳ ಪೈಕಿ ಒಂದಕ್ಕೆ ಅವಳು ಹೋದಳು. ಅಲ್ಲಿ ಅಕ್ಕಿ, ಮೊಟ್ಟೆಗಳು, ಆಲೂಗಡ್ಡೆ, ಸಕ್ಕರೆ, ಎಣ್ಣೆ, ಚಹಾ-ಮುಂತಾದುವು ದೊರೆಯುತ್ತಿದ್ದವು. ಅಕ್ಕಿಯ ಎಲ್ಲ ನಮೂನೆಗಳನ್ನೂ ಲೀಲ ಜಾಗರೂಕತೆಯಿಂದ ಪರೀಕ್ಷಿಸಿ, ಅತ್ಯಂತ ಅಗ್ಗದ ಬೆಲೆಗೆ ಉತ್ತಮ ಅಕ್ಕಿಯನ್ನು ಕೊಂಡಳು. ಅನೇಕರು ಸಾಮಾನುಗಳಿಗಾಗಿ ಕಾಯುತ್ತಾ ಹರಟೆ ಕೊಚ್ಚುತ್ತಿದ್ದರು. ಕಡಲ ದಂಡೆಗೆ ಬಂದ ಮರಮುಟ್ಟು ಏತಕ್ಕಾಗೆಂಬುದು ಅವರ ಮಾತುಗಳಿಂದ ಲೀಲ ಮತ್ತು ಮೀನರಿಗೆ ಗೊತ್ತಾಯಿತು.

''ನಿನಗೆ ಗೊತ್ತಾ? ಅಲಿಬಾಗ್‌ನಿಂದ ಬಿಜುವಿನ ಮರಮುಟ್ಟು ಬಂದಿವೆ.''

''ಓ, ಅವು ಬಿಜುವಿನ ಮರಮುಟ್ಟುಗಳೇನು, ಆ ದೋಣಿಗಾಗಿಯೆ?''

''ಡೀಸಲ್ ಎಂಜಿನ್? ಅದೂ ಸಹ ಬಂದಿದೆಯೆ?'' ಮತ್ತೊಬ್ಬರು ಪ್ರಶ್ನಿದರು.

''ಅವೂ ಸಹ ಬರುತ್ತವೆ. ಬಿಜು ನಮಗೆ ಉಡಾಫೆ ಹೊಡೆಯುತ್ತಿಲ್ಲ, ಅವನು ಎರಡು ಡೀಸಲ್ ಎಂಜಿನ್‌ಗಳನ್ನೂ ಕೊಳ್ಳಬಲ್ಲ.''

''ನೋಡೋಣ.''

ಲೀಲ ಮತ್ತು ಮೀನ ವಾಪಸ್ ಹೊರಟರು. ಲೀಲಳ ಚೀಲ ತುಂಬಿತ್ತು ಮತ್ತು ಭಾರವಾಗಿತ್ತು.

''ಬಿಜು ಕಳ್ಳಸಾಗಾಣಿಕೆಯಿಂದ ಆ ಎಲ್ಲ ಹಣವನ್ನೂ ಗಳಿಸಿದ್ದಾನೆಂದು ನಮ್ಮಪ್ಪ ಹೇಳಿದರು.''

''ಏನು, ಕಳ್ಳಸಾಗಾಣಿಕೆಯೆ?'' ಲೀಲ ಅಚ್ಚರಿಯಿಂದ ಕೇಳಿದಳು. ಈ ಮಾತನ್ನು ಅವಳು ಹಿಂದೆಯೂ ಕೇಳಿದ್ದಳು, ''ಅದನ್ನು ನೀನು ನಂಬುತ್ತೀಯಾ?''

''ಖಂಡಿತ, ನಾನು ನಂಬುತ್ತೇನೆ. ಇಲ್ಲದಿದ್ದರೆ ಅವನ ಮನೆಯಲ್ಲಿ ಟೆಲಿವಿಷನ್ ಸೆಟ್ ತಾನೆ ಹೇಗಿರುತ್ತಿತ್ತು?''

''ಆದರೆ ಅದು ಕೆಲಸ ಮಾಡುವುದಿಲ್ಲವಂತೆ. ನಾವು ಮುಂಬೈ ಟಿ.ವಿ. ಕೇಂದ್ರದಿಂದ ತುಂಬ ದೂರವಿರುವುದರಿಂದ ಅದು ಕೆಲಸ ಮಾಡುವುದಿಲ್ಲವೆಂದು ಹರಿ ಹೇಳಿದ.''

''ಬಹುಶಃ ಅವರು ಸಾಕಷ್ಟು ಹಣಗಳಿಸಿದ ಮೇಲೆ ಮುಂಬೈಗೆ ಹೋಗಬಹುದು.''

ಲೀಲ ಮತ್ತು ಮೀನ ಎರಡು ಮೈಲಿ ದೂರವಿದ್ದ ಜಿಲ್ಲಾ ಮುಖ್ಯ ಸ್ಥಳವಾದ ಅಲಿಬಾಗ್‌ನ ಆಚೆ ಎಂದೂ ಹೋಗಿರಲಿಲ್ಲ. ಆದರೆ ಹೆಚ್ಚು ಸಾಹಸೀ ಜನರು ಹೆದ್ದಾರಿ ಬಸ್ ಹಿಡಿದೋ, ಇಲ್ಲವೆ ರೇವಾ ದೋಣಿಯಲ್ಲಿ ಕುಳಿತೋ ಸಮುದ್ರದಲ್ಲಿ ಸಂಚರಿಸಿ ಆ ಬೃಹತ್ ನಗರಕ್ಕೆ ಹೋಗುತ್ತಾರೆಂದು ಅವರು ಕೇಳಿದ್ದರು. ಚಿಕ್ಕವರಿದ್ದಾಗ ಅವರು ''ಮುಂಬೈಗೆ ಹೋಗೋಣ'' ಎಂಬ ಆಟವಾಡುತ್ತಿದ್ದರು. ಆದರೆ ಈಗ ಇಂತಹ ಆಟವಾಡುವುದೂ ಅವರಿಂದ ಸಾಧ್ಯವಿರಲಿಲ್ಲ.

''ನಾಟಕ ನೋಡಲು ರಾತ್ರಿ ಬಾ'' ಮೀನ ಅವಳನ್ನು ಕರೆದಳು.

''ಸಾಧ್ಯವಾದಲ್ಲಿ ಬರುತ್ತೇನೆ'' ಲೀಲ ಉತ್ತರಿಸಿದಳು. ತನಗೆ ಹೋಗಲಾಗದೆಂಬುದು ಅವಳಿಗೆ ಗೊತ್ತಿತ್ತು.

***

ಈಗ ಬಿಜುವಿನ ದೋಣಿಯ ನಿರ್ಮಾಣ ಪ್ರಾರಂಭವಾಗಿದೆ. ಹಳ್ಳಿಯ ಮಕ್ಕಳು ಗುಂಪುಗುಂಪಾಗಿ ಅಲ್ಲಿಗೆ ಬಂದು ಅದನ್ನು ನೋಡುತ್ತಿರುತ್ತಾರೆ. ಹರಿಯೂ ಆಗಾಗ ಅವರೊಡನೆ ಸೇರುತ್ತಾನೆ. ತನ್ನ ದೋಣಿಯ ನಿರ್ಮಾಣಕ್ಕಾಗಿ ಬಿಜು ಅಲಿಬಾಗ್‌ನಿಂದ ಕೆಲಸಗಾರರನ್ನು ಕರೆಸಿದ್ದಾನೆ. ಥುಲ್‌ನ ಗ್ರಾಮಸ್ಥರು ತಮ್ಮ ಜೀವನವಿಡೀ ದೋಣಿಯ ನಿರ್ಮಾಣದಲ್ಲೇ ನಿರತರಾಗಿದ್ದಾಗ್ಯೂ ಅವರಿಗೆ ಅವರಲ್ಲಿ ವಿಶ್ವಾಸವಿಲ್ಲ. ಆದ್ದರಿಂದ ಅಲಿಬಾಗ್‌ನವರ ಕೆಲಸವನ್ನು ನೋಡಲು ಅಲ್ಲಿಗೆ ಬಂದ ಜನ ಅವರನ್ನು ಗೇಲಿ ಮಾಡುತ್ತಿದ್ದರು. ಕೆಲವು ಸಲ ಇದರಿಂದಾಗಿ ಬಿಜುವಿಗೆ ತುಂಬ ಕೋಪ ಬಂದು ಅವರ ಮೇಲೆ ರೇಗಾಡುತ್ತಿದ್ದ. ಒಟ್ಟಿನಲ್ಲಿ ಅಲ್ಲಿ ಯಾವಾಗಲೂ ಗದ್ದಲವಿರುತ್ತಿತ್ತು.

ಕೆಲಸದ ಪ್ರಗತಿಯನ್ನು ನೋಡಲು ಬಿಜು ಓಲಾಡುತ್ತಾ ಅಲ್ಲಿಗೆ ಬರುತ್ತಿದ್ದ. ಸಣ್ಣ ಹುಡುಗನೊಬ್ಬ ಅವನ ಮನೆಯಿಂದ ಮಡಚುವ ಕುರ್ಚಿಯೊಂದನ್ನು ತಂದು ಮರಳ ಮೇಲೆ ಇಡುತ್ತಿದ್ದ. ಬಿಜು ಅತ್ಯಂತ ಎಚ್ಚರಿಕೆಯಿಂದ ಬಗ್ಗಿ ತನ್ನ ಪಂಚೆಯನ್ನು ಬಿಗಿದೆಳೆದು ಅತ್ಯಂತ ಕಷ್ಟಪಟ್ಟು ಆ ಕುರ್ಚಿಯ ಮೇಲೆ ಕೂಡುತ್ತಿದ್ದ. ಅವನೂ ಮರಳ ಮೇಲೆ ಕುಳಿತರೆ ಹೆಚ್ಚು ಹಿತಕರವಾಗಿರುತ್ತಿತ್ತು. ಆದರೆ ಅತ್ಯಂತ ದೊಡ್ಡ ದೋಣಿಯ ಮಾಲೀಕನಾದ ತಾನು ಕುರ್ಚಿಯ ಮೇಲೆ ಕೂಡುವುದು ತನಗೆ ಗೌರವ ಎಂದು ಭಾವಿಸಿದ್ದ.

ಕೆಲವು ಸಲ ಅವನ ಹೆಂಡತಿಯೂ ಓಲಾಡುತ್ತಾ ಮನೆಯಿಂದ ಬಂದು, ಅಲ್ಲಿ ನಡೆಯುತ್ತಿದ್ದ ಕೆಲಸವನ್ನು ನೋಡುತ್ತಿದ್ದಳು. ಆದರೆ ಅವಳಿಗೆ ಕುಳಿತುಕೊಳ್ಳಲು ಮಡಚುವ ಕುರ್ಚಿಯಿರಲಿಲ್ಲವಾದ್ದರಿಂದ ಕಾಲು ನೋಯುವವರೆಗೂ ನೋಡುತ್ತಾ ನಿಂತಿದ್ದು, ಮನೆಗೆ ಹಿಂದಿರುಗುತ್ತಿದ್ದಳು. ಅವರ ಎರಡಂತಸ್ತಿನ ದೊಡ್ಡ ಇಟ್ಟಿಗೆ ಮನೆಯು, ಬೃಹತ್ ತೆಂಗು ಮತ್ತು ಅಡಕೆ ತೋಟದ ಮಧ್ಯೆ ಇದ್ದುದರಿಂದ, ಒತ್ತಾಗಿ ಬೆಳೆದ ಎಲೆಗಳ ಮೂಲಕ, ಬಿಸಿಲು ಮನೆಯ ಮೇಲೆ ಬೀಳುವುದು ಸಾಧ್ಯವೇ ಇರಲಿಲ್ಲ. ಆ ಆವರಣದಲ್ಲಿ ಅವರ ಸಂಪತ್ತಿನ ಲಕ್ಷಣ ಎಲ್ಲೆಲ್ಲೂ ಕಾಣುತ್ತಿತ್ತು. ಹಲವಾರು ಆಳವಾದ ಬಾವಿಗಳು, ಅನೇಕ ಎತ್ತಿನ ಗಾಡಿಗಳು, ಎತ್ತುಗಳು, ಕೋಳಿಗಳು ಬಾತುಗಳ ಸಮೂಹ, ಅಲ್ಲದೆ, ಪಾರಿವಾಳದ ಗೂಡು, ಸೌದೆಗಳ ರಾಶಿ ಮತ್ತು ಪ್ರಖ್ಯಾತ ಟೆಲಿವಿಷನ್ ಸೆಟ್ ಇತ್ಯಾದಿ. ಅವರ ಮನೆಯ ನೀಲಿ ಛಾವಣಿಯಿಂದ ಹೊರ ಬಂದಿದ್ದ ಏರಿಯಲ್, ಧುಲ್‌ನಲ್ಲೇ ಏಕೈಕವಾಗಿತ್ತು. 'ಆನಂದ ಭವನ್' ಎಂಬ ಅವರ ಮನೆಯ ಹೆಸರನ್ನು ತಗಡಿನ ಫಲಕವೊಂದರ ಮೇಲೆ ಕಡುಗೆಂಪು ಅಕ್ಷರದಲ್ಲಿ ದೊಡ್ಡದಾಗಿ ಬರೆಯಲಾಗಿತ್ತು. ಮನೆಯ ಹೆಸರು ಆನಂದಭವನವಾಗಿದ್ದರೂ ಒತ್ತಾಗಿ ಬೆಳೆದ ಮರಗಳು, ಬೆಳಕಿನ ಅಭಾವ, ಅಂಗಳದಲ್ಲಿನ ಕೊಳಕು–ಇವುಗಳಿಂದಾಗಿ ಅದರಲ್ಲಿ ಆನಂದಕ್ಕಿಂತ ಮಿಗಿಲಾಗಿ ವಿಷಾದವು ಕವಿದಿತ್ತು. ಬಿಜುವಿನ ಹೆಂಡತಿ ಸಂತೋಷದ ಯಾವ ಚಿಹ್ನೆಯನ್ನೂ ತೋರಿಸದೆ ನಿಧಾನವಾಗಿ ಮನೆಗೆ ಹಿಂದಿರುಗುತ್ತಿದ್ದಳು. ಹಳ್ಳಿಯ ಜನ ತಮ್ಮ ಬಗ್ಗೆ ಏನು ಮಾತನಾಡಿಕೊಳ್ಳುತ್ತಿದ್ದಾರೆಂಬುದು ಅವಳಿಗೆ ಗೊತ್ತಿತ್ತು. ಅದು ಅವಳಿಗೆ ಇಷ್ಟವಾಗುತ್ತಿರಲಿಲ್ಲ.

ಇಡೀ ಹಳ್ಳಿಯ ಜನರೇ ಒಂದಲ್ಲ ಒಂದು ಸಮಯ ದೋಣಿಯ ನಿರ್ಮಾಣವನ್ನು ನೋಡಲು ನಿಲ್ಲುತ್ತಿದ್ದರು. ಮತ್ತಾರೂ ಇಷ್ಟು ದೊಡ್ಡ ದೋಣಿಯನ್ನು ಹೊಂದಿರಲಿಲ್ಲ ಮತ್ತು ಅಂತಹ ದೋಣಿಯಲ್ಲಿ ಕೆಲಸವನ್ನೂ ಮಾಡಿರಲಿಲ್ಲ. ಬಹುಶಃ ಅವರಿಗೆಲ್ಲಾ ಅಸೂಯೆಯುಂಟಾಗಿರಬೇಕು. ಆದ್ದರಿಂದಲೇ ಯಾರೂ ದೋಣಿಯ ಬಗ್ಗೆ ಒಂದೇ ಒಂದು ಒಳ್ಳೆಯ ಮಾತನ್ನೂ ಆಡುತ್ತಿರಲಿಲ್ಲ. ಅಲ್ಲದೆ ಅಷ್ಟು ದೊಡ್ಡದೂ, ಅಂದವಿಲ್ಲದ್ದೂ ಆಗಿದ್ದು, ಅಲಿಬಾಗ್‌ನ ಕೆಲಸಗಾರರಿಂದ ನಿರ್ಮಿಸಲ್ಪಡುತ್ತಿದ್ದ ಈ ದೋಣಿ, ಸಮುದ್ರದಲ್ಲಿ ಸಮರ್ಪಕವಾಗಿ ಕೆಲಸ ಮಾಡುವ ಬಗ್ಗೆಯೇ ಅವರಿಗೆ ಶಂಕೆಯುಂಟಾಗಿತ್ತು. ಆದರೂ, ಬಿಜು ಅಪ್ರಾಮಾಣಿಕನೂ, ಬಹುಶಃ ಕಳ್ಳಸಾಗಾಣಿಕೆದಾರನೂ ಆಗಿದ್ದಾನೆಂಬುದು ಪ್ರತಿಯೊಬ್ಬರಿಗೂ ಗೊತ್ತಿದ್ದಾಗ್ಯೂ, ಧುಲ್‌ನ ಒಬ್ಬ ವ್ಯಕ್ತಿ ಇಂತಹ ದೋಣಿಯನ್ನು ಕಟ್ಟಿಸುವ ಸಾಮರ್ಥ್ಯ ಹೊಂದಿರುವುದು ಅವರಿಗೆ ಸ್ವಲ್ಪ ಹೆಮ್ಮೆಯನ್ನೂ ಉಂಟುಮಾಡಿತ್ತು.

ಮಕ್ಕಳು ತಮ್ಮ ಬಾಯಿಗಳಿಗೆ ಅಡ್ಡಲಾಗಿ ಕೈಹಿಡಿದುಕೊಂಡು, "ಕಳ್ಳಸಾಗಾಣಿಕೆದಾರ,

ಕಳ್ಳಸಾಗಾಣಿಕೆದಾರ, ಕಳ್ಳಸಾಗಾಣಿಕೆದಾರ'' ಎಂದು ಪಿಸುಗುಟ್ಟುತ್ತಾ ಕಿಲಕಿಲ ನಗುತ್ತಿದ್ದರು. ಬಿಜು ಆರ್ಭಟಿಸಿದಾಗ ಅವರು ಅಲ್ಲಿಂದ ಓಡಿ ಹೋಗುತ್ತಿದ್ದರು.

''ಬಿಜು, ಜೈಲಿಗೆ ಹೋಗುತ್ತಾನೆ! ಬಿಜು ಜೈಲಿಗೆ ಹೋಗುತ್ತಾನೆ''ಎಂದು ಅವರು ಕೂಗುತ್ತಾ ಓಡುತ್ತಿದ್ದರೆ, ಬಿಜು ಅವರನ್ನು ಅಟ್ಟಿಸಿಕೊಂಡು ಹೋಗಿ, ಅವರಿಗೆ ಏಟು ಕೊಡಲಾರದಷ್ಟು ಧಡೂತಿಯೂ, ವೃದ್ಧನೂ ಆಗಿದ್ದ.

***

''ಹರಿ, ನಮ್ಮ ಹಳ್ಳಿಯಲ್ಲಿ ಕಳ್ಳಸಾಗಾಣಿಕೆದಾರರಿದ್ದಾರೆಂದು ನಿನಗನಿಸುವುದಾ?''

ನಿದ್ರೆ ಬಾರದೆ ಹಾಸಿಗೆಯ ಮೇಲೆ ಮಲಗಿದ್ದಾಗ, ಒಂದು ರಾತ್ರಿ ಬೇಲ ಮತ್ತು ಕಮಲ ಕೇಳಿದರು.

''ಖಂಡಿತ ಇದ್ದಾರೆ.''

''ಕಳ್ಳತನದಲ್ಲಿ ಅವರು ಏನನ್ನು ಸಾಗಿಸುತ್ತಾರೆ?''

''ಬೆಳ್ಳಿ ಮತ್ತು ಚಿನ್ನ.''

''ಓ.... ಇ...ಲ್ಲ!''

''ಖಂಡಿತ, ಹೀಗಾಗೇ ಅವರು ಶ್ರೀಮಂತರಾಗುವುದು.''

''ಬೆಳ್ಳಿ, ಚಿನ್ನ ಅವರಿಗೆ ಎಲ್ಲಿಂದ ಬರುತ್ತದೆ. ಸಮುದ್ರದಲ್ಲಿ ಅದು ಸಿಗುತ್ತದಾ?''

''ಅಯ್ಯೋ ಪೆದ್ದುಗಳೇ, ಚಿನ್ನ ಮತ್ತು ಬೆಳ್ಳಿಯ ಗಣಿಗಳಿರುವ ವಿದೇಶಗಳಿಂದ ಅವನ್ನು ತರುವರು. ಅವು ಇಲ್ಲಿಗಿಂತ ಅಲ್ಲಿ ಅಗ್ಗವಾಗಿರುತ್ತವೆ. ಆಫ್ರಿಕಾ ಮತ್ತು ಅರೇಬಿಯಾದಿಂದ ಹಡಗುಗಳಲ್ಲಿ ಅವನ್ನು ಸಾಗಿಸುವರು. ಸಮುದ್ರದಲ್ಲಿ ಅವನ್ನು ಸಂಧಿಸಲು ಹೋಗುವ ಮೀನು ದೋಣಿಗಳಲ್ಲಿ ಅವನ್ನು ಇಳಿಸಿ ಕಳ್ಳಸಾಗಾಣಿಕೆದಾರರ ದೋಣಿಗಳಿಗೆ ವರ್ಗಾಯಿಸಿ, ದಡಕ್ಕೆ ತಂದು ಇಲ್ಲಿ ದುಬಾರಿ ಬೆಲೆಯಲ್ಲಿ ಮಾರುವರು.''



''ನೀನು ಯಾವಾಗಲೂ ಅದನ್ನು ನೋಡಿಲ್ಲವಾ?''

''ಇಲ್ಲ, ನಾನು ನೋಡಿಲ್ಲ. ಚಿನ್ನ, ಬೆಳ್ಳಿಯ ಆಭರಣಗಳಿಗೆ ಮಾರುಹೋಗುತ್ತೀರಿ ಮತ್ತು ಕೊಳ್ಳುತ್ತೀರಿ. ಇದರಿಂದ ಕಳ್ಳಸಾಗಾಣಿಕೆದಾರರು ಅಪಾರ ಹಣ ಮಾಡಿಕೊಳ್ಳುತ್ತಾರೆ. ಬಿಜು ಸಹ ಇದೇ ರೀತಿ ಹಣ ಮಾಡುತ್ತಿರಬಹುದು.''

''ಧುಲ್‌ನಲ್ಲೇ ಅತ್ಯಂತ ದೊಡ್ಡದಾದ ದೋಣಿಯನ್ನು ಅವನು ನಿರ್ಮಿಸುತ್ತಾನೆಂದು ಹೇಳುತ್ತಾರೆ.''

''ಅಲ್ಲದೆ, ಅತ್ಯುತ್ತಮವೂ ಆಗಿರುತ್ತದೆ. ಅದರಲ್ಲಿ ನನಗೊಂದು ಕೆಲಸ ಸಿಗುವಂತಾಗಲೆಂಬುದೇ ನನ್ನ ಆಸೆ.''

''ಹೌದಾ? ಬಿಜು ದೋಣಿಯಲ್ಲಾ?''

''ಹೌದು, ಏಕಾಗಬಾರದು.''

''ಓ, ಬಿಜುವಿಗಾಗಿ ಕೆಲಸ ಮಾಡಬೇಡ. ಹರಿ, ಅವನು ಕಳ್ಳಸಾಗಾಣಿಕೆದಾರ ಎಂದು ಈಗ ತಾನೆ ಹೇಳಿದೆ. ಅವನು ನಿನ್ನನ್ನೂ ಸಹ ಕಳ್ಳಸಾಗಾಣಿಕೆದಾರನನ್ನಾಗಿ ಮಾಡಬಹುದು.''

''ಆಗ ನಾನೂ ಸಹ ಅವನಂತೆ ಶ್ರೀಮಂತನಾಗಬಹುದು'' ಹರಿ ಗಹಗಹಿಸುತ್ತಾ ಹೇಳಿದ.

''ಆಗ ನಿಮಗೆ ಚಿನ್ನದ ಸರಗಳನ್ನೂ, ಬೆಳ್ಳಿಯ ಕಾಲುಂಗುರಗಳನ್ನೂ ಮಾಡಿಸಬಹುದು.''

''ಓ, ಬೇಡ, ಬೇಡ'' ಇಬ್ಬರೂ ಹೆದರಿಕೆಯಿಂದ ಕೂಗಿದರು, ''ಪೋಲಿಸರು ನಿನ್ನನ್ನು ಹಿಡಿದು ಜೈಲಿಗೆ ಹಾಕುತ್ತಾರೆ.''

''ಅವರು ನನ್ನನ್ನು ಮುಂಬೈಗೆ ಕರೆದುಕೊಂಡು ಹೋಗಬಹುದು, ಈ ರೀತಿಯಾದರೂ ನಾನು ಮುಂಬೈಗೆ ಹೋಗಬಹುದು.''

ಅವನ ಧ್ವನಿಯ ಗಡುಸುತನದಿಂದ ಬೆದರಿದ ಅವರು ಮೆತ್ತಗೆ ಕೇಳಿದರು, ''ನಿನಗೆ ಮುಂಬೈಗೆ ಹೋಗಲು ಇಷ್ಟವೇ?''

''ಖಂಡಿತ. ನಿಮಗಿಷ್ಟವಿಲ್ಲವಾ?''

ಒಂದೇ ಹಾಸಿಗೆಯ ಮೇಲೆ ಮಲಗಿದ್ದ ಅವರು ಪಿಸುಪಿಸು ಮಾತನಾಡುತ್ತಾ ಬೇಗ ನಿದ್ರೆ ಹೋದರು. ಹರಿ ಎಚ್ಚರವಾಗೇ ಇದ್ದ. ಅವರು ದೀರ್ಘವಾಗಿ ಉಸಿರಾಡುತ್ತಿದ್ದುದನ್ನು ಕೇಳಿದ. ಹೊರಗೆ ಕಡಲ ಮೊರೆತ ಕೇಳಿಬರುತ್ತಿತ್ತು. ಸಮುದ್ರದ ಮೇಲಿನ ದೋಣಿಗಳು ತಮಗಿಷ್ಟ ಬಂದ ರೀತಿಯಲ್ಲಿ ಮುಂಬೈಗೆ, ಆಫ್ರಿಕಾಕ್ಕೆ, ಅರೇಬಿಯಾಕ್ಕೆ ಹೋಗುವುದನ್ನು ಕುರಿತು ಆಲೋಚಿಸುತ್ತಿದ್ದ. ಇಂತಹ ಒಂದು ದೋಣಿಯಲ್ಲಿ ತಾನೂ ಕುಳಿತು ಪ್ರಯಾಣಿಸಬಹುದಾದರೆ, ಕೇವಲ ಮುಂಬೈಗಾದರೂ ಹೋಗುವಂತಾದರೆ ಎಷ್ಟು ಚೆನ್ನ ಎಂದು ಭಾವಿಸಿದ.

ಮುಂಬೈ ! ಆಕಾಶದಲ್ಲಿ ಬೆಳಗುತ್ತಿದ್ದ ನಕ್ಷತ್ರಗಳನ್ನು ಹರಿ ಕಿಟಕಿಯ ಮೂಲಕ ದಿಟ್ಟಿಸಿ ನೋಡಿದ. ಮುಂಬೈ ನಗರದ ದೀಪಗಳು ಇಷ್ಟು ಅಥವಾ ಇನ್ನೂ ಹೆಚ್ಚು ಪ್ರಕಾಶಮಾನವಾಗಿರಬಹುದೇ ಎಂದು ಯೋಚಿಸಿದ. ಅದೊಂದು ಶ್ರೀಮಂತ ನಗರ. ತಾನು ಅಲ್ಲಿಗೆ ಹೋಗುವುದು ಸಾಧ್ಯವಾದರೆ ತಾನೂ ಹಣವನ್ನು ಗಳಿಸಬಹುದು. ಮನೆಗೆ ಸಂಪತ್ತು ತರಬಹುದು, ತನ್ನ ಸೋದರಿಯರನ್ನು ಬೆರಗುಗೊಳಿಸಲು ಚಿನ್ನ ಮತ್ತು ಬೆಳ್ಳಿಯ ಆಭರಣಗಳನ್ನು ಮಾಡಿಸಬಹುದು.

ಇಲ್ಲ ! ಕಣ್ಣು ಮುಚ್ಚಿಕೊಳ್ಳುತ್ತಾ ತನಗೆ ತಾನೇ ಹೇಳಿಕೊಂಡ. ಇದೊಂದು ಅವಿವೇಕದ ಕನಸು. ಇಂತಹ ಕನಸುಗಳಿಗೆ ತಾನು ಬಲಿಯಾಗಬಾರದು. ಕಾರ್ಯಶೀಲನಾಗಬೇಕು ಮತ್ತು

ಸರಿಯಾದ ಯೋಜನೆಯನ್ನು ಕುರಿತು ಆಲೋಚಿಸಬೇಕು. ಇವೇನು ಅಷ್ಟು ಸುಲಭವಲ್ಲ. ಅವನ ತೀವ್ರ ಚಿಂತೆಯು ಅವನನ್ನು ಆಯಾಸಗೊಳಿಸಿತು. ಅವನು ಆ ಚಿಂತೆಯನ್ನು ತೊರೆದು ನಿದ್ರೆ ಹೋದ.

***

ಕಡಲ ತೀರದಲ್ಲಿ ಮೀನು ಹಿಡಿಯುವ ಸಲುವಾಗಿ ಬಲೆ ಹಾಕುವ ಬದಲು, ತನ್ನ ಒಣ ಜಮೀನನ್ನು ಅಗೆಯುವ ಬದಲು ಹರಿ, ಹಳ್ಳಿಯ ಇತರ ಬಾಲಕರಂತೆಯೇ, ಹೆಚ್ಚು ಸಮಯ ದೋಣಿಯ ನಿರ್ಮಾಣವನ್ನು ನೋಡುತ್ತಾ ನಿಂತಿರುತ್ತಿದ್ದ. ಅಲ್ಲಿ ಒರಟಾದ ಹಲಗೆಗಳನ್ನು ಹತ್ತರಿಹೊಡೆದು ನಯ ಮಾಡಲಾಗುತ್ತಿತ್ತು. ಸೂರ್ಯನ ಬೆಳಕಿನಲ್ಲಿ ಹಲಗೆಗಳು ಚಿನ್ನದಂತೆ ಹೊಳೆಯುತ್ತಿದ್ದವು. ಅವೆಲ್ಲಾ ಉತ್ತಮ ದರ್ಜೆಯ ಮರಮುಟ್ಟುಗಳು. ತಾವು ಬಳಸುತ್ತಿದ್ದಂತಹ ತೆಂಗಿನ ಮರದ ಕಾಂಡವಲ್ಲ. ಸೊಗಸಾದ ಮರ. ಹಳ್ಳಿಯಲ್ಲಿ ಪ್ರತಿ ಮರದ ವಸ್ತುಗಳಿಂದಲೂ ಬರುತ್ತಿದ್ದ ಮೀನಿನ ಮತ್ತು ಕಡಲ ವಾಸನೆ ಆ ಮರದಿಂದ ಬರುತ್ತಿರಲಿಲ್ಲ. ಚೆನ್ನಾಗಿ ಒಣಗಿದ, ಬಾಳಿಕೆ ಬರುವ ಅಮೂಲ್ಯವಾದ ಆ ಮರಮುಟ್ಟುಗಳನ್ನು ದೂರದ ಸ್ಥಳಗಳಿಂದ ತರಲಾಗಿತ್ತು. ಅದರ ವಾಸನೆಯೇ ಹರಿಯನ್ನು ಪುಳಕಗೊಳಿಸುತ್ತಿತ್ತು.

ಬಿಜು ಸಹ, ತನ್ನ ಮಡಚು-ಕುರ್ಚಿಯಲ್ಲಿ ಕಷ್ಟದಿಂದಲೇ ಕುಳಿತು ನೋಡುತ್ತಿದ್ದ. ಯಾರಾದರೂ ಅವನಿಗೆ ಕೇಳಿಸುವಷ್ಟು ಸಮೀಪ ಬಂದಲ್ಲಿ ಬಡಾಯಿ ಕೊಚ್ಚುತ್ತಿದ್ದ. ''ಅದರಲ್ಲಿ ಒಂದು ಡೀಸಲ್ ಎಂಜಿನ್ ಮತ್ತು ರೆಫ್ರಿಜರೇಟರ್ ಇರುತ್ತದೆ, ಒಂದು ಡೀಪ್-ಫ್ರೀಜರ್ ಇರುತ್ತದೆ'' ನಿಧಾನವಾಗಿ ಈ ಪದಗಳನ್ನು ಹೇಳುತ್ತಿದ್ದ. ಬಳಕೆಯಲ್ಲಿಲ್ಲದ ಈ ಪದಗಳಿಂದ ಇತರರಿಗಿಂತ ಅವನೇ ಹೆಚ್ಚು ಪ್ರಭಾವಿತನಾಗುತ್ತಿದ್ದ. ನಂತರ ''ದೋಣಿಯು ಆರು ದಿನಗಳ ಕಾಲ ಯಾನ ಮಾಡುತ್ತದೆ. ಹಿಡಿದ ಮೀನುಗಳನ್ನು ಡೀಪ್-ಫ್ರೀಜರ್‌ಗಳಲ್ಲಿ ಇಡಲಾಗುವುದು. ಆಗ ಅವು ಕೆಡುವುದಿಲ್ಲ. ಮುಂಬೈಗೆ ತೆಗೆದುಕೊಂಡು ಹೋದಾಗ ಅವು ಇನ್ನೂ ತಾಜಾ ಇರುತ್ತವೆ.''

''ಶೀತಳಗೊಳಿಸಿದ್ದೇ ವಿನಹ ತಾಜಾವಲ್ಲ'' ಹರಿ ಮೆತ್ತಗೆ ಹೇಳಿದ. ಆದರೆ ಬಿಜುವಿಗೆ ಕೇಳಿಸಲಿಲ್ಲ.

''ಅದಕ್ಕೆಷ್ಟು ವೆಚ್ಚವಾಗುತ್ತದೆ, ಬಿಜು?'' ಬೆರಗುಗೊಂಡ ಹಳ್ಳಿಯವನೊಬ್ಬ ಕೇಳಿದ. ಅವನಲ್ಲಿ ಎರಡು ಆಡುಗಳು ಮತ್ತು ಒಂದು ಅಡಿಗೆ ಪಾತ್ರೆ ಬಿಟ್ಟು ಮತ್ತೇನೂ ಇರಲಿಲ್ಲ. ಬಿಜು ಹೇಳುತ್ತಿದ್ದ ಸಂಪತ್ತಿನ ಮೌಲ್ಯದ ಒಂದು ಅಂಶವೂ ಸಹ ಅವನಿಗೆ ಅರ್ಥವಾಗುವಂತಿರಲಿಲ್ಲ.

''ಹೂಂ! ಎರಡು-ಎರಡೂವರೆ ಲಕ್ಷವಾಗಬಹುದು.'' ಏನು ಮಹಾ ಅನ್ನುವಂತೆ ಬಿಜು ಹೇಳುತ್ತಿದ್ದಾಗ್ಯೂ ಈ ವೆಚ್ಚದ ಬಗ್ಗೆ ಬಿಜುವಿನ ಕಣ್ಣುಗಳು ಭೀತಿಯಿಂದ ಕೂಡಿದ್ದವು.

''ಏನು, ಅಷ್ಟೊಂದಾ!''

''ಪರವಾಗಿಲ್ಲ. ಒಮ್ಮೆ ಅದು ಸಮುದ್ರದಲ್ಲಿ ಸಂಚರಿಸಲಾರಂಭಿಸಿದ ಮೇಲೆ, ದಿನಕ್ಕೆ ಕಡೆಯ ಪಕ್ಷ ಐವತ್ತು ಸಾವಿರ ರೂಪಾಯಿಗಳನ್ನು ಗಳಿಸಿಕೊಡುತ್ತದೆ'' ಬಿಜು ಹೆಮ್ಮೆಯಿಂದ ಹೇಳಿದ.

ಹರಿ ತನ್ನ ಕಾಲ ಹೆಬ್ಬೆರಳಿನಿಂದ ಮರಳ ಮೇಲೆ ಚಿತ್ರಗಳನ್ನು ಬಿಡಿಸುತ್ತಾ ಆ ಮಾತನ್ನು

ಕೇಳುತ್ತಿದ್ದ. ಅವನು ಹಲವಾರು ವರ್ಷ ಶಾಲೆಗೆ ಹೋಗಿದ್ದಾಗ್ಯೂ, ಆ ಮುಗ್ಧ ಆಡಿನ ಮನುಷ್ಯನಂತೆಯೇ ಬಿಜುವಿನ ಹಣದ ಲೆಕ್ಕಾಚಾರವನ್ನು ಸರಿಯಾಗಿ ಅರಿಯಲು ಆಗಿರಲಿಲ್ಲ. ಅವನಿಗೆ ಬಿಜುವಿನ ಮಾತಿನಲ್ಲಿ ಪೂರ್ಣ ನಂಬಿಕೆ ಹುಟ್ಟಿದಾಗ್ಯೂ ಭವಿಷ್ಯದ ಬಗ್ಗೆ ಅವನು ಮೂಡಿಸಿದ ಚಿತ್ರ ಹರಿಯನ್ನು ಬೆರಗುಗೊಳಿಸಿತ್ತು. ಕಡಲಲ್ಲಿ ಅಪಾಯ, ಕೇಡು ಹೆಚ್ಚು. ಸಮುದ್ರದಲ್ಲಿ ಎಷ್ಟೊಂದು ಜನ ಸತ್ತಿದ್ದಾರೆಂಬುದೂ, ಮಳೆಗಾಲದಲ್ಲಿ ಎಷ್ಟೊಂದು ಮಂದಿ ಮುಳುಗಿದ್ದಾರೆಂಬುದೂ ಹಾಗೂ ಎಷ್ಟೊಂದು ದೋಣಿಗಳು ನಾಶವಾಗಿ ವಾಪಸ್ ಬಂದಿಲ್ಲವೆಂಬುದೂ ಹರಿಗೆ ಗೊತ್ತು. ಆದರೂ ಸಮುದ್ರದಲ್ಲಿ ಯಾನ ಮಾಡುವುದು, ದೂರಕ್ಕೆ, ಹಿಂದಿರುಗಲಾಗದಷ್ಟು ದೂರಕ್ಕೆ ಹೋಗುವುದು, ಹಿಂದಿರುಗಿದರೂ ಅಪಾರ ಸಂಪತ್ತಿನೊಡನೆ



ಬರುವುದು ಹರಿಗೆ ಹೆಚ್ಚು ಆಕರ್ಷಣೆಯುಂಟುಮಾಡಿತ್ತು.

ಸೈಕಲ್ ಮೇಲೆ ಬಂದ ರಾಮು ಕೂಗಿದ, ''ಏ, ಹರಿ, ನನ್ನ ಜೊತೆ ಬಾ.'' ಹರಿ ಅವನೊಡನೆ ಹೊರಟ. ದಟ್ಟವಾದ ಮತ್ತು ಬಿಸಿಯಾದ ಮರಳಿನ ಮೇಲೆ ಕಷ್ಟಪಟ್ಟು ನಡೆದ. ಬಿಜುವಿಗೆ ಬೆಂಬಲ ಕೊಡಬೇಕೋ, ಇಲ್ಲವೆ ಬಿಜುವನ್ನು ನಂಬದವರ ಜೊತೆ ಸೇರಬೇಕೋ ಎಂಬ ವಿಷಯ ಅವರಿಗೆ ಗೊಂದಲವುಂಟು ಮಾಡಿತ್ತು.

ರಾಮುವಂತೂ ಬಿಜುವಿನ ಮಾತನ್ನು ಎಂದಿಗೂ ನಂಬುತ್ತಿರಲಿಲ್ಲ. ''ಡೀಪ್-ಫ್ರೀಜರ್ ಇದ್ದಾಗ್ಯೂ ಅದೊಂದು ಕೇವಲ ಮೀನು ಹಿಡಿಯುವ ದೋಣಿ.ಮಳೆಗಾಲ ಹೇಗಿರುತ್ತ-ದೆಂಬುದು ನಿನಗೇ ಗೊತ್ತಲ್ಲ. ಒಂದು ಸಲ ಬಿರುಗಾಳಿ ಬೀಸಿದಲ್ಲಿ, ಇತರೆಲ್ಲಾ ದೋಣಿಗಳಂತೆ ಅವೂ ಸಹ ಬೆಂಕಿಪೊಟ್ಟಣದ ಹಾಗೆ ನಾಶವಾಗಿ ಹೋಗುತ್ತವೆ. ಅದು ಮಳೆಗಾಲದಲ್ಲಿ ಯಾನ ಮಾಡುವಷ್ಟು ಶಕ್ತಿಯುತವಾಗಿಲ್ಲ. ಆದ್ದರಿಂದ ಏನು ಪ್ರಯೋಜನ? ಅದೆಲ್ಲಾ ಬರೀ ಬುರುಡೆ.''

''ಆದರೂ ಮೀನು ಸಿಗುವ ಕಾಲದಲ್ಲಿ ಅವನು ಬೇಕಾದಷ್ಟು ಹಣ ಮಾಡಿಕೊಳ್ಳುತ್ತಾನೆ'' ಹರಿ ಹೇಳಿದ.

''ಮೀನುಗಾರಿಕೆ ಕಾಲ ಮುಗಿದ ಮೇಲೆ ಅವನೇನು ಮಾಡುತ್ತಾನೆ? ಇತರ ಎಲ್ಲ ಮುದುಕರಂತೆ ಕಡಲ ದಂಡೆಯಲ್ಲಿ ಕುಳಿತು ಬಲೆಗಳನ್ನು ದುರಸ್ತಿಪಡಿಸುತ್ತಾನಾ? ದಿನಗೂಲಿ ಸಂಪಾದಿಸಲು ಒಂದು ಒಳ್ಳೆಯ ಕೆಲಸ ಇರುವುದು ಉತ್ತಮ. ಅಲ್ಲದೆ ಇಂತಹ ಕೆಲಸದಿಂದ ಇತರ ಹಲವಾರು ಪ್ರಯೋಜನಗಳೂ ಇರುತ್ತವೆ. ಕ್ಯಾಂಟಿನ್‌ನಲ್ಲಿ ಬಿಟ್ಟಿ ಊಟ, ಅಸ್ವಸ್ಥನಾದಾಗ ವೈದ್ಯರಿಂದ ತಪಾಸಣೆ, ಸಂಬಳ ಸಹಿತ ರಜಾದಿನಗಳು- ಹೂಂ, ಸುಖಜೀವನ ಅಂದರೆ ಅದು'' ರಾಮು ತನ್ನ ಸೈಕಲ್‌ನ ಗಂಟೆಯನ್ನು ಜೋರಾಗಿ ಮತ್ತು ಉತ್ಸಾಹದಿಂದ ಬಾರಿಸಿದ.

''ಥುಲ್‌ನಲ್ಲಿ ನಿನಗೆ ಅಂತಹ ಕೆಲಸ ಸಿಗುವುದೆಂದು ಭಾವಿಸುತ್ತೀಯ?''ಹರಿ ಸಂಶಯದಿಂದ ಕೇಳಿದ. ಬಿಜುವಿನ ದೋಣಿಯ ಹೆಗ್ಗಳಿಕೆಯ ಬಗ್ಗೆ ಅವನಿಗುಂಟಾಗಿದ್ದ ಸಂಶಯಕ್ಕಿಂತ, ರಾಮುವಿನ ಮಾತಿನಲ್ಲಿ ಇನ್ನೂ ಹೆಚ್ಚು ಸಂಶಯ ಉಂಟಾಗಿತ್ತು.

''ಖಂಡಿತ. ಕಾರ್ಖಾನೆ ಪ್ರಾರಂಭವಾಗಲಿ. ಕೆಲಸಕ್ಕಾಗಿ ನಿಲ್ಲುವವರ ಸಾಲಿನಲ್ಲಿ ರಾಮು ಮೊದಲಿಗನಾಗಿರುತ್ತಾನೆ.''

ರಾಮು ಗಟ್ಟಿಯಾಗಿ ಹೇಳುತ್ತಾ, ಸೈಕಲ್‌ನ ಗಂಟೆಯನ್ನು ಮತ್ತೆ ಜೋರಾಗಿ ಬಾರಿಸಿದ. ಎಮ್ಮೆಯ ಬೆನ್ನ ಮೇಲೆ ಕುಳಿತು ಅದರ ಕಿವಿಗಳನ್ನು ಹೆಕ್ಕುತ್ತಿದ್ದ ಎರಡು ಬಿಳಿಯ ಹೇರಾನ್ ಪಕ್ಷಿಗಳು ಹೆದರಿ, ಹಾರಿ ತೆಂಗಿನ ಮರವೊಂದರಲ್ಲಿ ಆಶ್ರಯ ಪಡೆದವು.

''ನಾನೂ ಪ್ರಯತ್ನಿಸಬೇಕು'' ಹರಿ ಹೇಳಿದ, ''ನಾನೂ ಹಾಗೇ ಮಾಡುತ್ತೇನೆ.''

ತನ್ನ ಮುಂದೆ ಎರಡು-ಮೂರು ಸಾಧ್ಯತೆಗಳಿರುವುದನ್ನು ಹರಿ ಗುರುತಿಸಿದ. ಈಗ ತಾನು ಮಾಡುತ್ತಿರುವುದು ಮೀನು ಹಿಡಿಯುವುದು ಮತ್ತು ತೆಂಗಿನ ಕಾಯಿಗಳನ್ನು ಮಾರುವುದು. ಮುಂದೆ ಕಾರ್ಖಾನೆಯಲ್ಲಿ ಕೆಲಸವನ್ನೋ ಇಲ್ಲವೆ ಬಿಜುವಿನಲ್ಲಿರುವಂತಹ ದೊಡ್ಡ ದೋಣಿಯಲ್ಲಿ ಕೆಲಸ ಮಾಡುವುದನ್ನೋ ಆರಿಸಬಹುದು ಅಥವಾ ಯಾರಾದರೂ ಸಹಾಯ ಮಾಡಿದಲ್ಲಿ ಮುಂಬೈಗೆ ಹೋಗಿ ಕೆಲಸ ಮಾಡುವುದು. ತನ್ನ ಮುಂದೆ ಅನೇಕ

ಅವಕಾಶಗಳಿರುವುದನ್ನು ನೆನೆದು ಅವನು ಭಾವೋದ್ರೇಕಗೊಂಡರೂ ಸ್ವಲ್ಪ ಭಯವೂ ಆಗುತ್ತಿತ್ತು. ಥುಲ್‌ನ ಜನ ಇಂತಹ ಆಯ್ಕೆಗಳ ಬಗ್ಗೆ ಎಂದೂ ಯೋಚಿಸಿದವರಲ್ಲ. ಈ ಕಡಲ ತೀರದಲ್ಲಿ ಮೀನು ಹಿಡಿಯುವುದು ಮತ್ತು ಬೇಸಾಯ ಮಾಡುವುದು ಬಿಟ್ಟು ಮತ್ತಾವ ಉದ್ಯೋಗವೂ ಅವರ ಮನಸ್ಸಿಗೆ ಬರುತ್ತಿರಲಿಲ್ಲ. ಆದರೆ ಈಗ ಇಂತಹ ದುಡಿಮೆ ಎಂದಿಗೂ ಸಾಲದು. ತನ್ನ ಆಯ್ಕೆ ಬೇರೆ ರೀತಿಯದಾಗಬಹುದು. ಬಿಜುವಿನಂತೆ, ಗ್ರಾಮದಲ್ಲಿ ಹಿಂದೆ ಯಾರೂ ಮಾಡಿರದಂಥ ಉದ್ಯೋಗ ತನ್ನದಾಗಬೇಕು ಎಂದು ಹರಿ ಯೋಚಿಸಿದ. ಹೇಗೆ? ತನಗಾರು ಸಹಾಯ ಮಾಡುತ್ತಾರೆ? ಹರಿ ಚಿಂತಿಸಿ ಮೌನವಾಗಿ ನಡೆದ.

***

ಹರಿ ಹೀಗೆಯೇ ಚಿಂತಿಸುತ್ತಾ ಹೋಗುತ್ತಿದ್ದಾಗ ಸಾಮಾನುಗಳನ್ನು ಹೇರಿದ್ದ ಕಾರೊಂದು ತೆಂಗಿನ ಮರಗಳ ನಡುವಣ ಚಿಕ್ಕ ಹಾದಿಯಲ್ಲಿ ದೂಳೆಬ್ಬಿಸಿಕೊಂಡು ನುಗ್ಗಿ ಬರುತ್ತಾ, ವರ್ಷವಿಡೀ ಖಾಲಿಯಾಗೇ ಇರುತ್ತಿದ್ದ ಬಿಳಿಯ ಬಂಗಲೆ 'ಮೊನ್ ರಿಪೋಸ್'ನ ಮುಂದೆ ನಿಂತಾಗ ಅವನ ಯೋಚನಾಲಹರಿ ಕಡಿದು ಹೋಯಿತು . ಆ ಕಾರು ಮಿ. ಡಿಸಿಲ್ವಾ ಅವರದು. ರಜಾದಿನಗಳನ್ನು ಇಲ್ಲಿ ಕಳೆಯಲು ಅವರ ಕುಟುಂಬ ಮುಂಬೈನಿಂದ ಬರುತ್ತಿತ್ತು ಮತ್ತು ಕೆಲವು ದಿನ ಆ ಬಂಗಲೆಗೆ ಜೀವಕಳೆಯನ್ನು ತರುತ್ತಿತ್ತು. ಥುಲ್‌ನ ಕಡಲ ದಂಡೆಯ ಮೇಲೆ ವಿಶ್ರಾಂತಿ ಗೃಹಗಳನ್ನು ರಚಿಸಿದ ಮುಂಬೈನ ಮೊದಲಿಗರಲ್ಲಿ ಒಬ್ಬರಾದ ವಕೀಲ್‌ರಿಂದ, ಒಂದು ವರ್ಷದ ಹಿಂದೆ ಡಿಸಿಲ್ವಾ 'ಮೊನ್ ರಿಪೋಸ್' ಅನ್ನು ಕೊಂಡಿದ್ದರು. ವಕೀಲ್ ಅವರು ವೃದ್ಧರೂ, ರೋಗಪೀಡಿತರೂ ಆಗಿದ್ದು ಆಗಾಗ್ಗೆ ಬರಲು ಆಗದೆ, ಬಂಗ್ಲೆಯು ಹಲವಾರು ವರ್ಷ ಕಾಲ ಖಾಲಿಯಾಗೇ ಇದ್ದದ್ದರಿಂದ ಡಿಸಿಲ್ವಾರಿಗೆ ಅದನ್ನು ಮಾರಾಟ ಮಾಡಿದ್ದರು. ಉತ್ಸಾಹಿಗಳೂ, ಚಿಕ್ಕವಯಸ್ಸಿನವರೂ ಆಗಿದ್ದ ಡಿಸಿಲ್ವಾ ಕಡಲ ದಂಡೆಯ ಮೇಲೆ ಜೀವನವನ್ನು ಹರ್ಷದಾಯಕವಾಗಿ ಕಳೆಯುತ್ತಿದ್ದರು. ಅವರು ಅಲ್ಲಿಗೆ ಬಂದಾಗೆಲ್ಲಾ ಚಿಕ್ಕ ಗುಡಿಸಿಲಿನಲ್ಲಿನ ಕುಟುಂಬದ ಜೀವನ ವೈಖರಿಯೂ ಬದಲಾಗುತ್ತಿತ್ತು. ಬಂಗಲೆಯಲ್ಲಿ ಕೋಲಾಹಲವೂ, ಎಲ್ಲ ರೀತಿಯ ಉತ್ಸಾಹ ಮತ್ತು ನಿರೀಕ್ಷೆಗಳೂ ಉಂಟಾಗುತ್ತಿದ್ದವು. ಕೆಲಸಗಳಾಗಬೇಕು, ಹೀಗಾಗಿ ಉದ್ಯೋಗಗಳೂ ಅಂತೆಯೇ ವೇತನವೂ ಸಿಗುತ್ತಿತ್ತು.

ಹರಿ, ಬೇಲ ಮತ್ತು ಕಮಲ ತಮ್ಮ ಮನೆಯ ಬಾಗಿಲ ಮುಂದೆ ಮರದ ಕೆಳಗೆ ನಿಂತಿದ್ದರು. ತುಂಬ ಕುತೂಹಲಿಗಳಾಗಿದ್ದು, ಭಾವೋದ್ರೇಕಗೊಂಡಂತೆ ತೋರುತ್ತಿದ್ದರು. ಅಪರೂಪದ ಕಾರು ಮತ್ತು ಅಪರಿಚಿತರನ್ನು ನೋಡಿ ಗಂಟಲು ಕಟ್ಟಿಹೋಗುವ ರೀತಿಯಲ್ಲಿ ಒಂದೇ ಸಮನೆ ಬೊಗುಳುತ್ತಿದ್ದ ಪಿಂಟೊವನ್ನು ಹಿಡಿಯಲು ಯತ್ನಿಸುತ್ತಿದ್ದರು. ಬಂಗಲೆಯನ್ನು ಗುಡಿಸಿಲಿನಿಂದ ಬೇರ್ಪಡಿಸುತ್ತಿದ್ದ ಜೌಗಿನ ಕೊರಕಲಲ್ಲೂ ಭಾರಿ ಗಲಿಬಿಲಿಯುಂಟಾಗಿತ್ತು. ಕ್ರೌಂಚ ಪಕ್ಷಿಗಳು, ಹೇರಾನ್, ಮೀನ್ಗುಳ್ಳಿ- ಮುಂತಾದವು ಆಶ್ರಯ ಪಡೆಯಲು ದಟ್ಟವಾದ ಪೈನ್, ಸರ್ವೆ ಮತ್ತು 'ಭಿಂಡಿ' ಮರಗಳತ್ತ ಹಾರಿ ಹೋಗುತ್ತಿದ್ದವು.

''ಅವರು ಇಲ್ಲೇ ಖಾಯಂ ಆಗಿ ಇರುತ್ತಾರೆಂದು ನಿನಗನಿಸುತ್ತದಾ?'' ಬೇಲ ಕೇಳಿದಳು.

''ಹೂಂ! ಮುಂಬೈಯಲ್ಲಿ ಮನೆ ಇಟ್ಟುಕೊಂಡು ಇಲ್ಲಿ ಯಾರು ತಾನೆ ಇರುತ್ತಾರೆ'' ಹರಿ ಹೇಳಿದ.

''ಆದರೆ ಅವರು ಎಷ್ಟೊಂದು ಸಾಮಾನು ತಂದಿದ್ದಾರೆ, ನೋಡು. ಕೆಲವು ದಿನಗಳಿಗಾಗಿ



ಇಷ್ಟೊಂದು ಸಾಮಾನು ಬೇಕಾ?'' ಬೇಲ ಕೇಳಿದಳು. ನಿಜ ಅನೇಕ ಪೆಟ್ಟಿಗೆಗಳು, ಚೀಲಗಳು ಮತ್ತು ಬುಟ್ಟಿಗಳನ್ನು ಕಾರ್‌ನಿಂದ ಮತ್ತು ಹಿಂಭಾಗದಲ್ಲಿ ಸಾಮಾನಿಡುವ ಸ್ಥಳದಿಂದ ಹಾಗೂ ಸರಕುಸಾಗಣೆ ಸ್ಥಳದಿಂದ ತೆಗೆದಿರಿಸಲಾಗುತ್ತಿತ್ತು. ಅಷ್ಟೊಂದು ಸಾಮಾನು ನೋಡಿದ ಯಾರೇ ಆದರೂ, ಶಾಶ್ವತವಾಗಿ ಅವರು ಅಲ್ಲೇ ಇರುತ್ತಾರೇನೋ ಎಂದು ಭಾವಿಸಬಹುದಾಗಿತ್ತು.

ಅವರುಗಳು ಕಷ್ಟಪಟ್ಟು ತಾವೇ ಸಾಮಾನುಗಳನ್ನು ಒಳಗೆ ಸಾಗಿಸುತ್ತಿದ್ದುದನ್ನು ನೋಡಿದ ಹರಿ, ಅವರಿಗೆ ಸಹಾಯ ಮಾಡಲು ಅಲ್ಲಿಗೆ ಹೋದ. ಎಲ್ಲ ಸಾಮಾನುಗಳನ್ನೂ ಅವರ ವರಾಂಡದೊಳಗೆ ಒಯ್ದರು. ಹರಿ ವಾಪಸ್ ಗುಡಿಸಿಲಿಗೆ ಬಂದ. ಆದರೆ ಅಷ್ಟರಲ್ಲೇ ಅವನನ್ನು ಕರೆಯಲು ಆ ಮನೆಯಿಂದ ಒಬ್ಬ ಹುಡುಗ ಓಡಿ ಬಂದ.

ಹರಿ ವರಾಂಡದ ಮೆಟ್ಟಿಲುಗಳ ಹತ್ತಿರ ಹೋದಾಗ ಶ್ರೀಮತಿ ಡಿಸಿಲ್ವಾ ಅಲ್ಲಿ ನಿಂತಿದ್ದಳು. ಧುಲ್‌ನ ಹೆಂಗಸರು ಹಾಕಿಕೊಳ್ಳದಂತಹ ವಿದೇಶಿ ರೀತಿಯ ಉಡುಪನ್ನು ಆಕೆ ಹಾಕಿಕೊಂಡಿದ್ದಳು. ಹರಿ ತಲೆ ತಗ್ಗಿಸಿ ಆಕೆಯ ಮುಂದೆ ನಿಂತ. ಒಂದು ಬುಟ್ಟಿಯನ್ನೂ ಸ್ವಲ್ಪ ಹಣವನ್ನೂ ಆಕೆ ಹರಿಗೆ ಕೊಟ್ಟು, ಪೇಟೆಯಿಂದ ಸ್ವಲ್ಪ ಮೀನನ್ನು ಕೊಂಡು ತರುವಂತೆ ಹೇಳಿದಳು. ''ತುಂಬಾ ತಾಜಾ ಇರಬೇಕು'' ಎಂದು ಪದೇ ಪದೇ ಎಚ್ಚರಿಸಿದಳು. ''ಅಲ್ಲದೆ ಬೆಳಿಗ್ಗೆ ನಮಗೆ ಹಾಲು ಮತ್ತು ಮೊಟ್ಟೆಗಳು ಬೇಕು. ಅವು ತುಂಬಾ.... ತುಂಬಾ ತಾಜಾ ಇರಬೇಕು. ತಂದು ಕೊಡುತ್ತೀಯಾ?'' ಎಂದು ಕೇಳಿದಳು. ಹಿಂದಿನ ವರ್ಷ ವಾರಾಂತ್ಯದ ವಿಶ್ರಾಂತಿಗಾಗಿ ಅವರು ಬಂದಾಗಲೆಲ್ಲಾ ಹರಿ ಇಂತಹ ಸಣ್ಣ ಪುಟ್ಟ ಕೆಲಸಗಳಿಗಾಗಿ ಓಡಾಡಿದ್ದ. ಆದರೆ ಆಕೆ ಮರೆತಿರಬಹುದು. ನಗರದ ಜನತೆಗೆ ಜ್ಞಾಪಕ ಶಕ್ತಿ ತುಂಬ ಕಡಿಮೆಯಿರಬಹುದು ಎಂದು ಹರಿ ಭಾವಿಸಿದ. ಅಥವಾ ಪ್ರತಿ ದಿನ ರಸ್ತೆಗಳಲ್ಲಿ ನೂರಾರು ಮುಖಗಳನ್ನು ನೋಡು-ವುದರಿಂದ ಒಂದು ಮುಖಕ್ಕೂ, ಇನ್ನೊಂದು ಮುಖಕ್ಕೂ ಇರುವ ವ್ಯತ್ಯಾಸ ಅವರಿಗೆ ತಿಳಿಯದಿರಬಹುದು ಎಂದು ಭಾವಿಸಿದ. ಅಂತೂ ಒಪ್ಪಿಗೆಯ ಸೂಚಕವಾಗಿ ಹರಿ ತಲೆದೂಗಿ ಆಕೆಯಿಂದ ಬುಟ್ಟಿಯನ್ನೂ ಹಣವನ್ನೂ ತೆಗೆದುಕೊಂಡು ಹೊರಟ.

ಮುಂದಿನ ಕೆಲವು ದಿನ ಹರಿಗೆ ಬಿಡುವಿಲ್ಲದಷ್ಟು ಕೆಲಸವಿರುತ್ತಿತ್ತು. ಮೀನು ದೋಣಿಗಳು ಬಂದಾಗಲೆಲ್ಲಾ ಅವನು ಕಡಲ ದಂಡೆಗೆ ಹೋಗಿ ಹಾಲು ಮತ್ತು ಮೊಟ್ಟೆಗಳನ್ನು ತರುತ್ತಿದ್ದ.

ಸಂಜೆಯ ವೇಳೆ ಅವರುಗಳು ಹೊರಾಂಗಣದಲ್ಲಿ ಮುಂಬೈನಿಂದ ತಂದಿದ್ದ ಲೋಹದ ಕುರ್ಚಿಗಳನ್ನು ತೆಂಗಿನ ಮರಗಳ ಕೆಳಗೆ ಹಾಕಿಕೊಂಡು ಕುಳಿತು ಮಾದಕ ಪಾನೀಯಗಳನ್ನು ಕುಡಿಯಲು ಅಪೇಕ್ಷಿಸಿದಾಗ, ಹರಿ ಅವರಿಗೆ ಸೋಡಾ ಬಾಟಲಿಗಳನ್ನು ತಂದು ಕೊಡುತ್ತಿದ್ದ.

ಅವರು ತಮ್ಮೊಡನೆ ಸೇವಕರನ್ನೂ ಕರೆತಂದಿದ್ದರು. ಅವರ ಊಟ ತಿಂಡಿಗಳನ್ನು ತಯಾರಿಸಲು ಒಬ್ಬ ಅಡಿಗೆಯವನು ಬಂದಿದ್ದ. ಆಯಾವೊಬ್ಬಳು ಅವರ ಬಟ್ಟೆಗಳನ್ನು ಒಗೆಯುತ್ತಿದ್ದಳು ಮತ್ತು ಮಕ್ಕಳನ್ನು ಕಡಲ ದಂಡೆಗೆ ಒಯ್ಯುತ್ತಿದ್ದಳು. ಮಕ್ಕಳಿಗಾಗಿ ಟವೆಲ್‌ಗಳನ್ನೂ, ಬಕೆಟ್‌ಗಳನ್ನೂ, ಸನಿಕೆಗಳನ್ನೂ ತೆಗೆದುಕೊಂಡು ಹೋಗುತ್ತಿದ್ದಳು. ಮಕ್ಕಳು ಕಡಲಲ್ಲಿ ಆಟವಾಡುತ್ತಾ ಒಬ್ಬರ ಮೇಲೊಬ್ಬರು ನೀರು ಚಿಮ್ಮಿಸುತ್ತಾ, ಅಲೆಗಳು ತಮ್ಮ ಮೇಲೆ ಬಂದಾಗ ಕಿರುಚಾಡುತ್ತಾ ಹರ್ಷದಿಂದ ಚೀರಾಡುತ್ತಿದ್ದುದನ್ನು ನೋಡುವುದೇ ಒಂದು ಮನಮೋಹಕ ದೃಶ್ಯವಾಗಿತ್ತು. ಹರಿಯೂ, ಅವನ ಸೋದರಿಯರೂ ಪೊದೆಗಳ ಹಿಂದೆಯೋ, ಮರಗಳ ಹಿಂದೆಯೋ ಮರೆಯಾಗಿ ನಿಂತು ಆ ಮಕ್ಕಳ ಆಟವನ್ನು ನೋಡುತ್ತಿದ್ದರು. ಆದರೆ ತಮ್ಮ ಕೆಲಸಗಳ ಸಲುವಾಗಿ ಕಡಲ ದಂಡೆಯಿಂದ ಅತ್ತ ಇತ್ತ ಓಡಾಡುತ್ತಿದ್ದರು. ದೋಣಿಗಳನ್ನು ತೆಗೆಯಲು ಇಲ್ಲವೆ ಮೀನು ಹಿಡಿಯಲು ಥುಲ್‌ನ ಜನ ಕಡಲ ದಂಡೆಗೆ ಹೋಗುತ್ತಿದ್ದರೇ ವಿನಹ ಮೀನುಗಳಂತೆ ಅಥವಾ ಕಪ್ಪೆಗಳಂತೆ ಹೀಗೆ ಈಜಾಡಲು ಅಥವಾ ನೀರೆರಚಾಡುವುದಕ್ಕಲ್ಲ. ಮುಂಬೈನ ಈ ಜನರಿಗೆ ತಲೆ ಸರಿಯಿಲ್ಲವೆಂದೇ ಅವರು ಭಾವಿಸಿದ್ದರು.

ಆ ಮಕ್ಕಳಿಗೆ ಆಟವಾಡುವುದು ಇಲ್ಲವೆ ಮಲಗಿ ವಿಶ್ರಾಂತಿ ತೆಗೆದುಕೊಳ್ಳುವುದು ಬಿಟ್ಟು ಬೇರಾವ ಕೆಲಸವಿಲ್ಲದಿದ್ದಾಗ್ಯೂ ಅವರ ಸುತ್ತಮುತ್ತಲಿದ್ದವರಿಗೆ ಬಿಡುವಿಲ್ಲದಷ್ಟು ಕೆಲಸವಿರುತ್ತಿತ್ತು. ಅಡಿಗೆಯವರು ಮತ್ತು ಆಯಾಗೆ ಎಲ್ಲ ಕೆಲಸವನ್ನೂ ಮಾಡಲಾಗು-ತ್ತಿರಲಿಲ್ಲ. ಹರಿ ಅವರಿಗೆ ನೆರವು ನೀಡುತ್ತಿದ್ದ (ಹಿಂದೆ ಅವನ ಅಪ್ಪ ಅವರಿಗಾಗಿ ಕೆಲಸ ಮಾಡುತ್ತಿದ್ದ). ಹರಿ ಮೀನು ಕೊಂಡು ತಂದಾಗ, ಅವನ್ನು ಶುದ್ಧಗೊಳಿಸಿ ಕತ್ತರಿಸುವ ಕೆಲಸವನ್ನೋ ಇಲ್ಲವೆ ತರಕಾರಿಯನ್ನು ಹೆಚ್ಚಿ ಹೋಳು ಮಾಡುವ ಕೆಲಸವನ್ನೋ ಅಡಿಗೆಯವನು ಹರಿಗೆ ಹಚ್ಚುತ್ತಿದ್ದ. ಬಹುಕಾಲದಿಂದ ಖಾಲಿ ಬಿದ್ದಿದ್ದ ಬಂಗಲೆಯಲ್ಲಿ ಕಸ ಮತ್ತು ಮರಳನ್ನು ಗುಡಿಸಿ, ಜೇಡರ ಬಲೆಗಳನ್ನು ಕಿತ್ತು ಹಾಕುವಂತೆ ಆಯಾ ಹರಿಗೆ ಹೇಳುತ್ತಿದ್ದಳು. ಆಗ ಹರಿ ಸಹಾಯಕ್ಕಾಗಿ ಲೀಲಳನ್ನು ಕರೆಯುತ್ತಿದ್ದ. ಲೀಲ ತನ್ನ ಸೀರೆಯ ನೆರಿಗೆಯನ್ನು ಸೊಂಟಕ್ಕೆ ಸಿಕ್ಕಿಸಿಕೊಂಡು ಕಸಬರಿಗೆಯನ್ನು ಹಿಡಿದು ಬರುತ್ತಿದ್ದಳು. ಅವಳು ತೊಟ್ಟಿದ್ದ ಗಾಜಿನ ಬಳೆಗಳಿಂದ ಮತ್ತು ಮುದುಡಿದ ಹೂವಿನಿಂದ ಆಕರ್ಷಿಸಲ್ಪಟ್ಟ ಮಕ್ಕಳು ಅವಳ ಹಿಂದೆ ಮುಂದೆ ಓಡಾಡುತ್ತಿದ್ದರು. ಅವಳು ಗುಡಿಸುವುದನ್ನು ನಿಲ್ಲಿಸಿ ಅವರತ್ತ ನೋಡಿ ನಕ್ಕರೆ ಅವರು ಅವಳ ಹತ್ತಿರಕ್ಕೆ ಬರುತ್ತಿದ್ದರು. ದಿನಕ್ಕೆರಡು ಸಲ ಬದಲಿಸಲು ಆ ಮಕ್ಕಳಲ್ಲಿ ಅನೇಕ ಉಡುಪುಗಳಿದ್ದುವು. ತಲೆಗೆ ಮುಡಿಯಲು ಹೂಗಳನ್ನು ತರುವುದಾಗಿ ಅವಳು ಅವರಿಗೆ ಆಶ್ವಾಸನೆ ನೀಡುತ್ತಿದ್ದಳು ಮತ್ತು ಆ ಮಕ್ಕಳು ಅವಳ ಗುಡಿಸಿಲವರೆಗೆ ಬರುತ್ತಿದ್ದರು.

''ಕಮಲ, ಬೇಲ ಬನ್ನಿ. ಅವರಿಗಾಗಿ ಕೆಲವು ಹೂ ಗೊಂಚಲುಗಳನ್ನು ಕಟ್ಟಿ'' ಎಂದು ಲೀಲ ತಂಗಿಯರನ್ನು ಕರೆಯುತ್ತಿದ್ದಳು. ಬಂಗಲೆಯ ಮಕ್ಕಳು ಬರುತ್ತಿರುವುದನ್ನು ನೋಡುತ್ತಾ ನಾಚಿಕೆಯಿಂದ ಮೊಗಸಾಲೆಯ ಕಂಬಗಳ ಹಿಂದೆ ಅವಿತುಕೊಂಡಿರುತ್ತಿದ್ದ ತಂಗಿಯರು, ಅಕ್ಕನ

ಕರೆಗೆ ಓಗೊಟ್ಟು ನಗುತ್ತಾ ಹೊರಗೆ ಬಂದು ಜಾಜಿ,ಮಲ್ಲಿಗೆ ಹೂಗಳನ್ನು ಆರಿಸಲು ಹೋಗುತ್ತಿದ್ದರು.

ಮಕ್ಕಳು ಆ ಹೂಮಾಲೆಗಳನ್ನು ತಾಯಿಗೆ ತೋರಿಸುವ ಸಲುವಾಗಿ ಮನೆಗೆ ಒಯ್ಯುತ್ತಿದ್ದರು.

ಮಾರನೆ ದಿನ ಕಸ ಗುಡಿಸಲು ಲೀಲ ಬಂಗಲೆಗೆ ಹೋದಾಗ ಗಿಡದಲ್ಲಿ ಬಿಟ್ಟಿದ್ದ ಚೆಂಡು ಹೂಗಳನ್ನೂ, ಬಣ್ಣವನ್ನು ಬದಲಿಸುವ ದಾಸವಾಳದ ಹೂಗಳನ್ನೂ ಮಕ್ಕಳಿಗೆ ತೋರಿಸುವ ಸಲುವಾಗಿ ಒಯ್ಯುವಳು. ಅಚ್ಚ ಬಿಳಿಯಾಗಿದ್ದ ದಾಸವಾಳದ ಹೂಗಳು, ಮಧ್ಯಾಹ್ನದ ವೇಳೆಗೆ ನಸುಗೆಂಪಾಗುವುದಾಗಿಯೂ, ಸಂಜೆಯ ವೇಳೆಗೆ ಗುಲಾಬಿ ಬಣ್ಣವಾಗುವುದಾಗಿಯೂ, ರಾತ್ರಿ ಕಡುಗೆಂಪಾಗುವುದಾಗಿಯೂ ಅವರಿಗೆ ತಿಳಿಸುವಳು. ಮೇಜಿನ ಮೇಲೆ ನೀರಿನ ಕರಂಡದಲ್ಲಿ ಇಟ್ಟಿದ್ದ ಹೂಗಳ ಬಳಿ ಆ ಮಕ್ಕಳು ಹೋಗಿ, ''ಓ, ಜಾದೂ, ಜಾದೂ ಹೂಗಳು'' ಎಂದು ಉದ್ಗಾರ ತೆಗೆದಾಗ ನಗುವಳು. ಇದು ಅವಳಿಗೆ ಪ್ರತಿ ದಿನದ ಸಾಮಾನ್ಯ ದೃಶ್ಯವಾಗಿತ್ತು. ಮಕ್ಕಳು ಸತತವಾಗಿ ಸಿಹಿಯನ್ನು ಆಸ್ವಾದಿಸುವಂತೆ, ಅದು ಅವಳಿಗೆ ಪ್ರತಿ ದಿನ ಕಿಟಿಕಿಯಿಂದ ಹೊರಗೆ ಕಾಣುವ ಸಾಮಾನ್ಯ ದೃಶ್ಯ. ಆದರೆ ಆ ಸಿಹಿಯು ಅವಳಿಗೆ ಅಪರೂಪವೂ, ಅಮೋಘವೂ ಆಗಿರುತ್ತಿತ್ತು.

ಒಂದು ಸಂಜೆ ಅವರು ವರಾಂಡದಲ್ಲಿ ಕುಳಿತಿದ್ದರು. ಕಡಲಿನಿಂದ ಗಾಳಿ ಬಲವಾಗಿ ಬೀಸುತ್ತಿತ್ತು. ಸ್ವಲ್ಪ ಚಳಿಯೂ ಇತ್ತು. ಅವರ ಪಕ್ಕ ಇದ್ದ ಕುಂಡದ ಮರಳಿನಲ್ಲಿ ಸರ್ವೆ ಮರದ ಪುಟ್ಟ ಕೊಂಬೆಯೊಂದನ್ನು ನೆಡಲಾಗಿತ್ತು. ಹರಿ ಅವರಿಗಾಗಿ ಸೋಡಾವನ್ನು ಒಯ್ದಾಗ, ಗಾಳಿಯಲ್ಲಿ ಹಾರಾಡುತ್ತಿದ್ದ ಬಣ್ಣ ಬಣ್ಣದ ಕಾಗದದ ಚೂರುಗಳನ್ನು ಕೊಂಬೆಗೆ ಕಟ್ಟಿರುವುದನ್ನೂ, ಬೆಳ್ಳಿಯ ನಕ್ಷತ್ರಗಳು ಮತ್ತು ಚಿನ್ನದ ಗುಂಡುಗಳು ತಿರುಗುತ್ತಾ ತೂಗಾಡುತ್ತಾ, ಹಾರಾಡುತ್ತಿದ್ದುದನ್ನೂ ನೋಡಿ ಅವನಿಗೆ ಕಕ್ಕಾಬಿಕ್ಕಿಯಾಯಿತು. ವರಾಂಡದಲ್ಲಿ ಕುಳಿತಿದ್ದವರು ಹರ್ಷದಿಂದ ಮತ್ತು ಉತ್ಸಾಹದಿಂದ ಗಟ್ಟಿಯಾಗಿ ಮಾತನಾಡುತ್ತಿದ್ದರು. ಹಿರಿಯರು ಮಕ್ಕಳೊಡನೆ ಆಟವಾಡುತ್ತಿದ್ದರು. ರಾತ್ರಿ ಬಹಳ ಹೊತ್ತಿನವರೆಗೆ ಎಲ್ಲರೂ ಒಟ್ಟಿಗೆ ಹಾಡಿ ನಕ್ಕು ನಲಿದರು. ಅವರು ತುಂಬ ತಡವಾಗಿ ರಾತ್ರಿಯೂಟ ಮಾಡಿದರು. ಅವರು ಊಟ ಮಾಡುವ ಮುನ್ನ ತಟ್ಟೆಯಲ್ಲಿದ್ದ ಅನ್ನದ ಉಂಡೆಗೆ ಅಗ್ನಿ ಸ್ಪರ್ಶ ಮಾಡಿದ್ದನ್ನು ಅಡಿಗೆ ಮನೆಯಲ್ಲಿ ಪಾತ್ರೆ ತೊಳೆಯುತ್ತಿದ್ದ ಹರಿ ನೋಡಿದ. ಏಕೆಂಬುದು ಅವನಿಗೆ ಗೊತ್ತಾಗಲಿಲ್ಲ.

ಮಾರನೆ ಬೆಳಗ್ಗೆ ಲೀಲ ಕಸಗುಡಿಸಲು ಬಂದಾಗ, ನೆಲದ ಮೇಲೆ ಚೆಲ್ಲಾಪಿಲ್ಲಿಯಾಗಿ ಬಿದ್ದಿದ್ದ ಬಣ್ಣದ ಕಾಗದದ ಚೂರುಗಳನ್ನು ಸರಿಯಾಗಿ ಜೋಡಿಸಿ ಒಂದು ಕಡೆ ಇಡುತ್ತಿದ್ದಳು. ಶ್ರೀಮತಿ ಡಿಸಿಲ್ವಾ ಅಲ್ಲಿಗೆ ಬಂದು, ''ಓ, ಅವನ್ನೆಲ್ಲಾ ಬಿಸಾಕಿ ಬಿಡು. ಕ್ರಿಸ್‌ಮಸ್ ಹಬ್ಬ ಮುಗಿಯಿತು'' ಅಂದಳು. ಗಲಿಬಿಲಿಗೊಂಡ ಲೀಲ, ಅವನ್ನು ನೋಡಿ ಉಪಯೋಗಿಸಲೆಂದು ಬೇಲ ಮತ್ತು ಕಮಲರಿಗಾಗಿ ಗುಡಿಸಿಲಿಗೆ ಒಯ್ದಳು. ''ಕ್ರಿಸ್‌ಮಸ್ ಮುಗಿಯಿತು'' ಎಂದು ಲೀಲ ಹೇಳಿದಾಗ ತಂಗಿಯರು ಹೌದೆನ್ನುವಂತೆ ತಲೆಯಾಡಿಸಿದರು ಅವಳಿಗೆ ಆಶ್ಚರ್ಯವಾಯಿತು. ''ಹೌದು, ಕ್ರಿಸ್‌ಮಸ್ ಬಗ್ಗೆ ಶಾಲೆಯಲ್ಲಿ ಉಪಾಧ್ಯಾಯರು ತಿಳಿಸಿದ್ದಾರೆ. ಬಹುಕಾಲದ ಹಿಂದೆ ಕುದುರೆ ಲಾಯವೊಂದರಲ್ಲಿ ಜನಿಸಿದ ಮಗುವೊಂದರ ಹುಟ್ಟುಹಬ್ಬವೇ

ಕ್ರಿಸ್‌ಮಸ್'' ಎಂದು ಬೇಲ ಹೇಳಿದಳು. ಲೀಲ ಮಹದಾಶ್ಚರ್ಯದಿಂದ ನೋಡಿದಾಗ, ''ಸೆರೆಮನೆಯಲ್ಲಿ ಜನಿಸಿದ ನಮ್ಮ ಕೃಷ್ಣನಂತೆ'' ಎಂದು ಕಮಲ ಮಾತು ಜೋಡಿಸಿದಳು. ''ಆದರೆ ಮರವನ್ನು ಬಣ್ಣದ ಕಾಗದಗಳಿಂದ ಮತ್ತು ನಕ್ಷತ್ರಗಳಿಂದ ಏಕೆ ಶೃಂಗರಿಸುತ್ತಾರೆ?'' ಎಂದು ಲೀಲ ಕೇಳಿದಳು. ಆ ಪ್ರಶ್ನೆಗೆ ಅವರು ಉತ್ತರ ಕೊಡಲಾಗಲಿಲ್ಲ. ಆ ವೇಳೆಗೆ ಬಂಗಲೆಯ ಮಕ್ಕಳು ಅವರಿಗಾಗಿ ಒಂದೊಂದು ಪೊಟ್ಟಣದಲ್ಲಿ ಸಿಹಿತಿಂಡಿಯನ್ನು ತಂದರು. ಸಂಕೋಚ-ದಿಂದ ಅವರು ತೆಗೆದುಕೊಂಡರು. ಆದರೆ ನಂತರ ನಿಶ್ಚಿಂತೆಯಿಂದ ಗಲಾಟೆ ಮಾಡಿಕೊಂಡು ತಿಂದರು.

''ಪಾಪ, ಪಿಂಟೊವಿಗೂ ಒಂದು ಚೂರು ಕೊಡಿ'' ಲೀಲ ಪಿಂಟೊ ಬಗ್ಗೆ ಕನಿಕರದಿಂದ ಹೇಳಿದಳು. ಬಂಗಲೆಯವರು ತಮ್ಮೊಡನೆ ಒಂದು ನಾಯಿಯನ್ನು ತಂದಿದ್ದರು. ಅಲಂಕಾರ-ಕ್ಕಾಗಿ ಬಾಲಕ್ಕೆ ಗರಿಯನ್ನು ಸಿಕ್ಕಿಸಿದ್ದ ಆ ನಾಯಿ, ಕಥೆಯಲ್ಲಿನ ರಾಜಕುಮಾರಿಯಂತೆ ಶೋಭಿಸುತ್ತಿತ್ತು. ಮಿಷ ಎಂಬ ಹೆಸರಿನ ಆ ನಾಯಿಯನ್ನು, ಉದ್ವೇಗಗೊಂಡು ಗಲಾಟೆ ಮಾಡುತ್ತಿದ್ದ ಪಿಂಟೊ ಕಚ್ಚಿ ಬಿಡಬಹುದೆಂಬ ಹೆದರಿಕೆಯಿಂದ ಹರಿ ದಿನವಿಡೀ ಪಿಂಟೊವನ್ನು ಒಂದು ಮರಕ್ಕಾಗಲೀ, ವರಾಂಡದ ಕಂಬಕ್ಕಾಗಲೀ ಕಟ್ಟುವಂತೆ ಅವರು ಹೇಳಿದ್ದರು. ಇದರಿಂದಾಗಿ, ಸುಂದರವಾದ ರೇಷ್ಮೆಯಂತಹ ಕೂದಲುಳ್ಳ ಮಿಷ ತೋಟದಲ್ಲಿ ನಿರಾತಂಕ-ವಾಗಿ ಓಡಾಡಿಕೊಂಡಿರುತ್ತಿತ್ತು. ಮೊದ ಮೊದಲು ಪಿಂಟೊ ಕೋಪದಿಂದ ಒಂದೇ ಸಮನೆ ಬೊಗಳಿದರೂ, ಇದರಿಂದ ಪ್ರಯೋಜನವೇನೂ ಇಲ್ಲವೆಂದು ಅರಿತ ಅದು ಸುಮ್ಮನೆ ಬಾಲ ಮುದುಡಿಕೊಂಡು ಮರಳ ಮೇಲೆ ಮಲಗಿರುತ್ತಿತ್ತು. ಅದಕ್ಕೆ ಎಷ್ಟು ಬೇಸರವಾಗಿ-ತ್ತೆಂದರೆ ಬೇಲ ಅದಕ್ಕೆ ಸಿಹಿಯನ್ನು ನೀಡಿದಾಗ, ಅದು ತಲೆಯನ್ನು ಅತ್ತ ತಿರುಗಿಸಿ ತಿರಸ್ಕರಿಸಿತು.

ಆದರೆ ಪಿಂಟೊವಿನ ಈ ಬವಣೆ ಬೇಗ ಮುಗಿಯಲಿತ್ತು. ಒಂದು ಬೆಳಿಗ್ಗೆ ಕಾರಿನಲ್ಲಿ ಸಾಮಾನುಗಳನ್ನೆಲ್ಲಾ ತುಂಬಲಾಯಿತು. ಅದು ಹೊರಡಲು ಸಿದ್ಧವಾಯಿತು. ಒಂದು ಬಕೆಟ್ ನೀರು ತಂದು ಕಾರನ್ನು ತೊಳೆಯುವಂತೆ ಮಿ.ಡಿಸಿಲ್ವಾ, ಹರಿಗೆ ಹೇಳಿದರು. ಅವನು ತೊಳೆಯುತ್ತಿದ್ದಾಗ, ಪೈಪ್‌ನಿಂದ ಹೊಗೆಸೊಪ್ಪು ಸೇದುತ್ತಾ ನಿಂತಿದ್ದ ಅವರು ಅವನನ್ನೇ ನೋಡುತ್ತಿದ್ದರು. ''ಹೂಂ, ಹಾಗೆ. ನೋಡಿಲ್ಲಿ, ಈ ಮನೆ ಖಾಲಿಯಿದ್ದು ಹಾಳಾಗುತ್ತದೆ. ನಮಗೊಬ್ಬ ಕಾವಲುಗಾರನ ಅಗತ್ಯವಿದೆ. ನಾವು ದೂರವಿರುವಾಗ ಅವನು ಇಲ್ಲಿದ್ದುಕೊಂಡು ಮನೆಯನ್ನು ನೋಡಿಕೊಳ್ಳಬೇಕು. ನಾವು ಇನ್ನೂ ಕೆಲವು ತಿಂಗಳ ಕಾಲ ಬರಲಾಗುವುದಿಲ್ಲ ಮತ್ತು ಈ ಮನೆ ಹಾಳಾಗುವುದಕ್ಕೆ ಬಿಡಲಾಗದು. ನಾವು ಸ್ವಲ್ಪ ಸಂಬಳವನ್ನೂ ಕೊಡುತ್ತೇವೆ, ಆದರೆ ಅದೇನು ಅಷ್ಟು ಜಾಸ್ತಿಯಲ್ಲ. ಮನೆಯ ಮೇಲೆ ನಿಗಾ ಇಟ್ಟಿರುವುದು ಬಿಟ್ಟು ಬೇರೆ ಜಾಸ್ತಿ ಕೆಲಸವೇನೂ ಇಲ್ಲಿರುವುದಿಲ್ಲ. ಆಗಾಗ ಬಾಗಿಲನ್ನು ತೆರೆದು ಸ್ವಚ್ಛವಾದ ಗಾಳಿ ಬರುವಂತೆ ಮಾಡುವುದು ಮತ್ತು ಏನಾದರೂ ದುರಸ್ತಿಯ ಅಗತ್ಯವಿದ್ದರೆ ನಮಗೆ ತಿಳಿಸುವುದು, ಅಷ್ಟೆ. ನಿಮ್ಮಪ್ಪ ಈ ಕೆಲಸ ಮಾಡಬಲ್ಲನಾ? ಹಿಂದೆ ಅವನು ಇಲ್ಲೇ ಎಲ್ಲಾದರೂ ಕಾಣುತ್ತಿದ್ದ. ಆದರೆ ಈ ಸಲ ಅವನು ಕಣ್ಣಿಗೆ ಬೀಳಲೇ ಇಲ್ಲ. ಅವನೆಲ್ಲಿದ್ದಾನೆ?'' ಎಂದು ಮಿ.ಡಿಸಿಲ್ವಾ ಕೇಳಿದರು.

ಹರಿ ತುಂಬ ಉದ್ವೇಗಗೊಂಡ. ಕತ್ತಲೆಯ ಮೂಲೆಯೊಂದರಲ್ಲಿ ಚಾಪೆಯ ಮೇಲೆ ತನ್ನಪ್ಪ ಇನ್ನೂ ಮಲಗಿರುವುದು ಗೊತ್ತಿದ್ದುದರಿಂದ ಹರಿ ಗುಡಿಸಿಲಿಗೆ ಓಡಿದ. ''ಅಪ್ಪ,



ಅವರು ನಿನ್ನನ್ನು ಕರೆಯುತ್ತಿದ್ದಾರೆ. ಅವರು ನಿನಗೊಂದು ಕೆಲಸ ಕೊಡುತ್ತಾರೆ.''

''ಹೂಂ? ಕೆಲಸ?'' ಅವನ ತಂದೆ ಎದ್ದು ಬಾಗಿಲ ಬಳಿಗೆ ಬಂದ. ಹರಿ ಕಷ್ಟದಿಂದ ಅವನನ್ನು ಹಾದಿಯಲ್ಲಿ ನಡೆಸಿಕೊಂಡು ಆ ಬಂಗಲೆಯತ್ತ ಕರೆತಂದ. ಮಿ.ಡಿಸಿಲ್ವಾ, ಸಾಮಾನು ಏರಿಸುವುದನ್ನು ನೋಡುತ್ತಾ ಕಾರಿನ ಬಳಿ ನಿಂತಿದ್ದರು. ಹರಿ ಮತ್ತು ಅವನ ಅಪ್ಪನತ್ತ ನೋಡಿದಾಗ ಅವರ ಮುಖದ ಲಕ್ಷಣವೇ ಬದಲಾಯಿಸಿತು. ಅವರು ಕೆಲವು ಚಿಕ್ಕ ಪ್ರಶ್ನೆಗಳನ್ನು ಕೇಳಿದರು. ಆದರೆ ಅವನು ಅಸ್ಪಷ್ಟವಾಗಿ, ತೊದಲುತ್ತಾ ನೀಡಿದ ದೀರ್ಘ ಉತ್ತರಗಳಿಂದಾಗಿ ಅಸಮಾಧಾನದಿಂದ ಅವರ ಹುಬ್ಬು ಗಂಟಿಕ್ಕಿತು. ಈ ಅಸ್ಪಷ್ಟ ಮಾತುಗಳ ಜೊತೆಯಲ್ಲೇ

ಅವನ ಬಾಯಿಂದ ಹೊರಡುತ್ತಿದ್ದ ಹುಳಿ ಹೆಂಡದ ವಾಸನೆಯಿಂದ, ಅವರು ಅಸಹ್ಯಪಟ್ಟು-ಕೊಂಡು ತಲೆ ಅತ್ತ ತಿರುಗಿಸಿದರು. ಕೊನೆಗೆ ತಲೆ ಕೊಡವಿ, ವರಾಂಡದ ಮೆಟ್ಟಲುಗಳ ಬಳಿ ಹೋಗಿ ತಮ್ಮ ಹೆಂಡತಿಗೆ ಹೇಳಿದರು, ''ಕೆಲಸಕ್ಕೆ ಬಾರದ ಕುಡುಕರು. ಇನ್ನೂ ಬೆಳಗಾಗುವು-ದಿಲ್ಲ, ಆಗಲೇ ಮತ್ತೇರುವಷ್ಟು ಕುಡಿದಿದ್ದಾನೆ. ಅವನಿಗಾಗಿ ಏನು ತಾನೆ ಮಾಡಬಹುದು? ನಿಷ್ಪ್ರಯೋಜಕ.''

ಹರಿ, ತನ್ನ ಅಪ್ಪನನ್ನು ಗುಡಿಸಿಲಿಗೆ ಕರೆದುಕೊಂಡು ಹೋದ. ಅವನ ಹೃದಯ ದುಃಖ, ಅವಮಾನದಿಂದ ಭಾರವಾಗಿತ್ತು. ಮಿ.ಡಿಸಿಲ್ವಾ ತಮ್ಮ ಸುಂದರವಾದ ನಾಯಿಯೊಡನೆ ಕಾರು ಹತ್ತಿದಾಗ ಅದು ಕಿಟಿಕಿಯಲ್ಲಿ ತಲೆ ಹಾಕಿ ಉದ್ವೇಗದಿಂದ ತನ್ನ ಬಾಲವನ್ನು ಅಲ್ಲಾಡಿಸುತ್ತಿತ್ತು. ಮಿ.ಡಿಸಿಲ್ವಾ ಕಿಟಿಕಿಯಲ್ಲಿ ತಲೆ ಹಾಕಿ ಹರಿಗೆ ಸ್ವಲ್ಪ ಹಣ ಕೊಟ್ಟು ಹೇಳಿದರು, ''ಒಳ್ಳೆಯ ಹುಡುಗ. ಕಾರನ್ನು ಚೆನ್ನಾಗಿ ನೋಡಿಕೊಂಡಿದ್ದೀ. ನೀನೇನಾದರೂ ಮುಂಬೈಗೆ ಬಂದರೆ ಕಾರನ್ನು ಸ್ವಚ್ಛ ಪಡಿಸುವ ಕೆಲಸವನ್ನು ನಿನಗೆ ಕೊಡುತ್ತೇನೆ.'' ಹರಿ ಹಸನ್ಮುಖಿನಾಗಲಿಲ್ಲ, ಆಗುವುದೂ ಸಾಧ್ಯವಿರಲಿಲ್ಲ. ಹರಿ ಹಣವನ್ನು ತೆಗೆದುಕೊಂಡು ಪಕ್ಕಕ್ಕೆ ಸರಿದು ನಿಂತ. ಕಾರು ಮರಳ ಹಾದಿಯಲ್ಲಿ ನಿಧಾನವಾಗಿ ಕುಪ್ಪಳಿಸುತ್ತಾ ಹೋಗಿ, ತೆಂಗಿನ ಮರದ ತೋಟದೊಳಗೆ ಕಣ್ಮರೆಯಾಯಿತು.

ಲೀಲ ಪಿಂಟೊವನ್ನು ಮರದಿಂದ ಬಿಚ್ಚಿ ಸ್ವತಂತ್ರವಾಗಿ ಬಿಟ್ಟಳು. ಅದು ಹರ್ಷದಿಂದ ಜಿಗಿಯಿತು. ಧುಲ್ ಬಿಡುವವರೆಗೆ ಕಾರನ್ನು ಅಟ್ಟಿಸಿಕೊಂಡು ಹೋಯಿತು.

***

ಕಾರ್ಖಾನೆಯೇನಾದರೂ ಏಳುತ್ತಿದೆಯೇ ಎಂದು ನೋಡಲು ಹರಿ ಹೊರಟಾಗ ತನ್ನ ತಂದೆಯ ಕುಡಿತದ ಬಗ್ಗೆ ಮತ್ತು ಮುಂಬೈ ಮನುಷ್ಯನ ಬೈಗುಳದ ಮಾತುಗಳ ಬಗ್ಗೆ ಅವನ ಮನಸ್ಸು ಇನ್ನೂ ಖೇದಗೊಂಡಿತ್ತು. ತಾನೇನಾದರೂ ಮುಂಬೈಗೆ ಹೋದಲ್ಲಿ ಕಾರು ಒರೆಸುವ ಕೆಲಸ ಕೊಡುವುದಾಗಿ ಮಿ.ಡಿಸಿಲ್ವಾ ನೀಡಿದ ಆಶ್ವಾಸನೆ ಅವರ ನೆನಪಿನಲ್ಲಿ ಇರುತ್ತದೆಯೇ ಅಥವಾ ತನಗಾದರೂ ಅವರ ಅವಶ್ಯಕತೆ ಇರುತ್ತದೆಯೇ ಎಂದು ಯೋಚಿಸಿದ. ಇಲ್ಲವೆ, ಬಿಜುವಿನ ದೋಣಿ ಸಿದ್ಧವಾದಾಗ ಅವನು ಅದರಲ್ಲಿ ತನಗೆ ಕೆಲಸ ಕೊಡಬಹುದೇ ಎಂಬುದೂ ಅವನಿಗೆ ಖಚಿತವಾಗಿರಲಿಲ್ಲ. ಆದ್ದರಿಂದ ಕಾರ್ಖಾನೆಯು ಸಿದ್ಧವಾಗಿ ಅದರಲ್ಲಿ ತನಗೆ ಕೆಲಸ ಸಿಗುವುದಾದರೆ.... ತನ್ನ ಮುಂದಿದ್ದ ಮೂರು ಆಯ್ಕೆಗಳಲ್ಲಿ ಇದೇ ಉತ್ತಮವೆನಿಸಿತು.

ಆದರೆ ಅವನು ಬೆಟ್ಟದ ಬುಡದ ನಿವೇಶನದ ಬಳಿ ಹೋದಾಗ ತಗಡಿನ ಗುಡಿಸಿಲಿಗೆ ಬೀಗ ಹಾಕಿದ್ದು ನೋಡಿ ಅವನಿಗೆ ನಿರಾಶೆಯಾಯಿತು. ಹಳದಿ ಲಾರಿ ಹೊರಟು ಹೋಗಿತ್ತು. ಹಲವಾರು ದೊಡ್ಡ ಕಾಂಕ್ರಿಟ್ ಕೊಳವೆಗಳು ಅಲ್ಲಲ್ಲಿ ಬಿದ್ದಿದ್ದವು. ಅಂತೂ ಅಲ್ಲಿ ಯಾರೋ ಏನನ್ನೋ ಕಟ್ಟಲು ಉದ್ದೇಶಿಸಿದ್ದಾರೆ ಎಂಬುದನ್ನು ಅವು ಸೂಚಿಸುತ್ತಿದ್ದವು. ಇಂತಹ ಸಣ್ಣ ಪ್ರಾರಂಭವು, ರಾಮು ಮತ್ತು ಹರಿ ಕೆಲಸ ಮಾಡುವಂತಹ, ಭಾರಿ ಶಬ್ದದ ಅನೇಕ ಯಂತ್ರಗ-ಳುಳ್ಳ ದೊಡ್ಡ ಕಾರ್ಖಾನೆಯಾಗಿ ಬೆಳೆಯುವುದಾದರೂ ಎಂದು?

ಆ ಕೊಳವೆಗಳ ಚಲನೆಯನ್ನು ನಿರೀಕ್ಷಿಸುವ ರೀತಿಯಲ್ಲಿ ಹರಿ ಅವುಗಳ ಸುತ್ತ ನಡೆದ. ಆದರೆ ಅದೇನೂ ಚಲಿಸಲಿಲ್ಲ. ಹಳದಿ ಚಿಟ್ಟೆಯೊಂದು ಮಾತ್ರ ಹುಲ್ಲು ಪೊದೆಯಿಂದ ಹಾರಿ ಬಂದು ಒಂದು ಕೊಳವೆಯೊಳಗೆ ಹೋಗಿ, ಮತ್ತೆ ಅಲ್ಲಿಂದ ಹೊರಗೆ ಹಾರಿ ಹೋಯಿತು.

ಹರಿ ಸಣ್ಣ ಕಲ್ಲೊಂದನ್ನು ತೆಗೆದುಕೊಂಡು ಕೈಯಿಂದ ಕೈಗೆ ಆಡಿಸುತ್ತಾ, ನಿರಾಶೆಯನ್ನು ಹೋಗಲಾಡಿಸುವಂತೆ ಶೀಟಿ ಊದುತ್ತಾ, ಬೆಟ್ಟದ ಮೇಲಿನ ಗುಡಿಗೆ ಹೋಗಲು ಬೆಟ್ಟ ಹತ್ತಲಾರಂಭಿಸಿದ. ಮುಂದೆ ಆ ಗುಡಿಯ ಗತಿಯೇನಾಗಬಹುದು ಎಂದು ಚಿಂತಿಸಿದ.

ಬೆಟ್ಟದ ಮೇಲೆ ಹತ್ತಲು ಅನುಕೂಲವಾಗುವಂತೆ, ಅದರ ಒಂದು ಪಾರ್ಶ್ವದಲ್ಲಿ, ಕೆಂಪು ಕಲ್ಲು ಮಿಶ್ರಿತ ಮರಳಿನಲ್ಲಿ ಮೆಟ್ಟಿಲುಗಳನ್ನು ಮಾಡಲಾಗಿತ್ತು. ಪಾರ್ಶ್ವಗಳಲ್ಲಿ ಬೆಳೆದಿದ್ದ ಒಣಗಿದ ಹಳದಿ ಹುಲ್ಲಿನ ಮೇಲೆ ಕಾಲೂರಿ ಏರುತ್ತಿದ್ದಾಗ, ಅವನ ಎದುರಿಗೆ ಕುರುಬನೊಬ್ಬ ತನ್ನ ಕುರಿ ಮಂದೆಯೊಡನೆ ಕೆಳಗಿಳಿದು ಬರುತ್ತಿದ್ದ. ಬಿಳಿ ಧೋತಿಯನ್ನು ಉಟ್ಟಿದ್ದ ಅವನು ಕೆಂಪು ಪಾಗನ್ನು ತಲೆಗೆ ಕಟ್ಟಿದ್ದ. ಕಪ್ಪು ಬಿಳಿ ಮತ್ತು ಚಾಕೊಲೇಟ್ ಬಣ್ಣದ ಅವನ ಮೇಕೆಗಳು ದೂಳೆಬ್ಬಿಸುತ್ತಾ ಕೂಗುತ್ತಾ ಅವನ ಹಿಂದೆ ಬರುತ್ತಿದ್ದವು. ಅವುಗಳಲ್ಲಿ ಕೆಲವು ಮುಳ್ಳಿನ ಚಾಚು ಪ್ರದೇಶದಲ್ಲಿ ಸಿಕ್ಕಿಕೊಂಡಿದ್ದು, ಬೆಟ್ಟದ ತಳವನ್ನಾಗಲೇ ತಲುಪಿದ್ದ ಉಳಿದವುಗಳಿಂದ ಸಹಾಯ ಪಡೆಯಲು ಆರ್ತನಾದ ಮಾಡುತ್ತಿದ್ದವು. ಕೊನೆಗೆ ಅವುಗಳ ಪೈಕಿ ತುಂಬ ಹತಾಶೆಗೊಂಡಿದ್ದ ಒಂದು ಮೇಕೆ, ಮೊಂಡು ಧೈರ್ಯದಿಂದ ಮುನ್ನುಗ್ಗಿತು. ಆಗ ಉಳಿದವೂ ಧೈರ್ಯ ತಳೆದು ಗುಂಪು ಗುಂಪಾಗಿ ಅದನ್ನು ಹಿಂಬಾಲಿಸಿ, ಬೆಟ್ಟದ ಕೆಳಗೆ ಹೆದ್ದಾರಿ ದಾಟಿ, ಚಳಿಗಾಲದ ಭತ್ತವನ್ನು ಕಟಾವು ಮಾಡಿದ್ದ ಗದ್ದೆಯೊಳಗೆ ಹೊರಟಿದ್ದ ಇತರ ಮೇಕೆಗಳನ್ನು ಸೇರಿದವು. ದೂಳಿನಲ್ಲಿ ಕುರುಬನ ಕೆಂಪು ಪಾಗು ಮಾತ್ರ ಕಾಣುತ್ತಿತ್ತು.

ಹರಿ ಬೆಟ್ಟದ ತುದಿಯನ್ನು ಏರುತ್ತಿದ್ದಾಗ, ಸಂಜೆಯ ಆಕಾಶದಲ್ಲಿ ಆಟವಾಡುತ್ತಿವೆ-ಯೇನೋ ಎಂಬಂತೆ ಕಾಣುತ್ತಿದ್ದ ರಣಹದ್ದುಗಳ ಜೋಡಿಯೊಂದನ್ನು ತಿರುಗಿ ನೋಡಿದ. ಆ ಹದ್ದುಗಳು ನೃತ್ಯ ಮಾಡುವಂತೆ ಒಗ್ಗೂಡಿ ಗಾಳಿಯ ಅಲೆಗಳಲ್ಲಿ ತೇಲುತ್ತಾ ಹೊರಳುತ್ತಾ ಇದ್ದವು.' ಸ್ತಬ್ಧವಾಗಿದ್ದ ಮತ್ತು ಸ್ವಚ್ಛವಾದ ಗಾಳಿಯಲ್ಲಿ ಉರುಳುತ್ತಾ, ಏರಿಳಿಯುತ್ತಾ ಅವು ಹಾರಾಡುತ್ತಿದ್ದವು. ಬಾಲಕಿಯರ ಶಾಲೆಯಿರುವ ಪ್ರದೇಶದ ಮೇಲೆ ಹಾರಿದವು. ತನ್ನ ಮನೆಯನ್ನು ಮರೆಮಾಡಿದ್ದ ತೆಂಗು ಮತ್ತು ಬಾಳೆಯ ತೋಟಗಳ ಹಸಿರು ಪ್ರದೇಶದ ಮೇಲೆ ಹಾರಿದವು.ರಾಜನು ವಿಶ್ರಾಂತಿಗಾಗಿ ಹೋಗುವಂತೆ ಸೂರ್ಯನು ರಾಜವೈಭವದೊಡನೆ ಇಳಿಯುತ್ತಿದ್ದ ಗಂಭೀರವಾದ ಮತ್ತು ಕೆನ್ನೀಲಿಯ ಸಮುದ್ರದಲ್ಲಿ, ರಭಸದಿಂದ ಬೀಳುವಂತೆ ಹಾರಿದವು. ಕೊನೆಯಲ್ಲಿ ಆ ಹದ್ದುಗಳು ಕಣ್ಮರೆಯಾದವು.

ಕುಡುಕ ತಂದೆ, ಮಿ.ಡಿಸಿಲ್ವಾನ ನಿಂದೆ, ಕೆಲಸ ಮತ್ತು ಹಣವಿಲ್ಲದ ಪರಿಸ್ಥಿತಿ-ಈ ಎಲ್ಲ ತೊಂದರೆಗಳನ್ನೂ ಕುರಿತು ಚಿಂತಿಸುತ್ತಿದ್ದಾಗ, ಹರಿಗೆ, ಈ ಭೂಮಿಗೆ ಅಂಟಿಕೊಂಡಿರು-ವುದಕ್ಕಿಂತ, ಹಕ್ಕಿಗಳಂತೆ ಆಕಾಶದಲ್ಲಿ ಹಾರಾಡುವುದು ಎಷ್ಟು ಚೆನ್ನ ಎಂದು ಅನಿಸಿತು. ಯಾವ ಸೌಂದರ್ಯವೂ ಇಲ್ಲದ ಗುಡಿಯ ಸುತ್ತ ಅವನು ನಡೆದ. ಆ ಗುಡಿಯಾದರೋ ಇಟ್ಟಿಗೆಗಳಿಂದ ಕಟ್ಟಿದ ಒಂದು ಗೂಡು. ಅದರಲ್ಲಿ ಕೃಷ್ಣನ ಮತ್ತು ಅವನ ಗೋವುಗಳ ಚಿತ್ರವನ್ನು ಬಣ್ಣದಲ್ಲಿ ಮೂಡಿಸಲಾಗಿತ್ತು. ಒಳಗೆ ಹೋಗದೆ ಬಾಗಿಲಿನಿಂದಲೇ ದೇವರನ್ನು ನೋಡಿದ ಹರಿ ತಾನು ಇದೀಗ ನೋಡಿದ ಕುರುಬನೂ ಕೃಷ್ಣನಂತೆಯೇ ಕೊಳಲು ನುಡಿಸಬಹುದೇ ಎಂದು ಯೋಚಿಸಿದ. ತನ್ನೊಬ್ಬನನ್ನು ಮಾತ್ರ ಬಿಟ್ಟು, ಇಲ್ಲಿ ಎಲ್ಲವೂ ಒಂದಕ್ಕೊಂದು ಸಂಬಂಧಿಸಿರುತ್ತವೆ, ಎಲ್ಲವೂ ಒಂದಾಗಿರುತ್ತವೆ ಎಂದು ಭಾವಿಸಿದ. ತನ್ನ ಅತೃಪ್ತಿ, ಕಷ್ಟಗಳು ಮತ್ತು ಅನಿಶ್ಚಿತತೆಯಿಂದಾಗಿ ಇವುಗಳೊಂದಿಗೆ ತಾನು ಇರುವುದು

ಸಾಧ್ಯವಿಲ್ಲ ಎಂದು ಅವನಿಗನಿಸಿತು.

ಒಂದಲ್ಲ ಒಂದು ದಿನ ಈ ಜಾಗವನ್ನು ತೊರೆದು ಹೋಗುತ್ತೇನೆ ಎಂಬುದು ಅವನಿಗೆ ಗೊತ್ತು. ಧುಲ್, ಹೆಚ್ಚು ಕಾಲ ತನ್ನನ್ನು ತಡೆಹಿಡಿದಿಟ್ಟಿರಲಾರದು. ಏನೇ ಆದರೂ ತೆಂಗಿನ ತೋಟಗಳ ಮತ್ತು ಮೀನು ದೋಣಿಗಳ ಧುಲ್ ಅಂತೂ ಎಂದಿಗೂ ತನ್ನನ್ನು ತಡೆಹಿಡಿಯಲಾರದು. ಕಾರ್ಖಾನೆಯು ಸ್ಥಾಪಿತಗೊಂಡಲ್ಲಿ ಬಹುಶಃ ತಾನು ಇಲ್ಲೇ ಉಳಿದು ಹೊಸ ಜೀವನ ವಿಧಾನವನ್ನು ಅನುಸರಿಸಬಹುದು. ಇಲ್ಲದಿದ್ದಲ್ಲಿ ತಾನೂ, ತನ್ನ ತಾಯಿಯಂತೆ ರೋಗ ರುಜಿನಕ್ಕೆ ಬಲಿಯಾಗಬಹುದು. ಇಲ್ಲ, ಹಾಗಾಗಬಾರದು. ಇಲ್ಲಿಂದ ಓಡಿಹೋಗಬೇಕು. ದೋಣಿಯಲ್ಲಿ ಸಾಗರವನ್ನು ದಾಟಿ ಮುಂಬೈಗೆ ಹೋಗಿ ಮಿ.ಡಿಸಿಲ್ವಾ ಅವರ ಸಹಾಯದಿಂದಾಗಲೀ, ಬೇರಾವುದಾದರೂ ರೀತಿಯಿಂದಾಗಲೀ ತನ್ನ ಅದೃಷ್ಟವನ್ನು ಕಂಡುಕೊಳ್ಳಬೇಕು. ತಾನೀಗ ಏಕಾಂಗಿ ಎಂಬ ಭಾವನೆ ಅವನಿಗುಂಟಾಯಿತು.

ಸಮೀಪದಲ್ಲೇ ಯಾರೋ ಬೆಂಕಿಕಡ್ಡಿ ಗೀರಿದಾಗ ಹರಿ ಸರ್ರನೆ ತಿರುಗಿದ. ಒಬ್ಬ ವ್ಯಕ್ತಿ ಅವನ ಹಿಂದೆಯೇ ನಿಂತಿದ್ದು, ಬಾಯಿಯಲ್ಲಿ ಸಿಗರೇಟ್ ಕಚ್ಚಿಕೊಂಡಿದ್ದ. ಹರಿ ಅವನನ್ನು ಮುಂಚೆ ನೋಡಿರಲಿಲ್ಲ. ನೀಲಿ ಅಂಗಿ ಹಾಕಿಕೊಂಡಿದ್ದ. ಅವನೂ ದೇವರನ್ನು ದಿಟ್ಟಿಸಿ ನೋಡುತ್ತಿದ್ದ.

ನಂತರ ಅವನು ಹರಿಯನ್ನು ನೋಡಿ ಕೇಳಿದ, ''ನೀನೂ ಈ ಹಳ್ಳಿಯವನಾ?''

''ಹೌದು, ಧುಲ್‌ನವನು'' ತೆಂಗಿನ ಮರಗಳತ್ತ ಕೈ ತೋರಿಸುತ್ತಾ ಹರಿ ಹೇಳಿದ.

''ಹೂಂ, ನಾನೂ ಈ ಧುಲ್‌ನ ಕೆಲ ಜನರನ್ನು ಭೇಟಿಯಾಗಿದ್ದೇನೆ'' ಆಗಂತುಕ ಹೇಳಿದ.

''ನೀನೂ ಇಲ್ಲೇ ವಾಸಿಸುತ್ತೀಯಾ?'' ಹರಿ ಕುತೂಹಲದಿಂದ ಕೇಳಿದ.

ಅವನು ಉತ್ತರಿಸಲಿಲ್ಲ. ಆದರೆ ಕೆಳಗೆ ಜಿಂಕ್‌ಶೀಟ್‌ನ ಗುಡಿಸಿಲಿನತ್ತ ಕೈ ತೋರಿಸಿದ.

''ಅಲ್ಲಿ?'' ಹರಿ ಅಚ್ಚರಿಯಿಂದ ಕೇಳಿದ, ''ನೀನು ಆ ಗುಡಿಸಿಲಿನಲ್ಲಿ ವಾಸಿಸುತ್ತೀಯಾ? ಅಂದರೆ, ಲಾರಿಯಲ್ಲಿ ಮುಂಬೈನಿಂದ ಬಂದೆಯಾ?''

ಹರಿಯ ಈ ಅಚ್ಚರಿಗಾಗಿ ನಸುನಗುತ್ತಾ ಆಗಂತುಕ ಹೌದೆನ್ನುವಂತೆ ತಲೆಯಾಡಿಸಿದ.

''ಅಂದರೆ ನೀನು.... ನೀನು...ಹೊಸ ಕಾರ್ಖಾನೆ-''

''ಇಲ್ಲ, ನಾನು ಕಾರ್ಖಾನೆಯಲ್ಲಿ-'' ಆಗಂತುಕ ನಗುತ್ತಾ ಹೇಳಿದ, ''ಅಗೋ ಅದು ಕೇವಲ ಒಂದು ಕಾರ್ಖಾನೆಯಾಗುವುದಿಲ್ಲ. ಕಾರ್ಖಾನೆಗಳ ದೊಡ್ಡ ನಗರವಾಗುತ್ತದೆ. ಕಾರ್ಖಾನೆಗಳು, ಮನೆಗಳ ಕಾಲನಿಗಳು, ಅಂಗಡಿಗಳ ಕೇಂದ್ರಗಳು, ಬಸ್ ಡಿಪೋಗಳು, ರೇಲ್ವೆ ನಿಲ್ದಾಣಗಳು, ಎಂಜಿನಿಯರ್‌ಗಳು, ಕಾರ್ಮಿಕರು-ಇಲ್ಲಿ ಇಡೀ ನಗರವನ್ನೇ ಕಟ್ಟಲಾಗುವುದು.''

''ಏನು, ಇಲ್ಲಿ, ಧುಲ್‌ನಲ್ಲೆ?'' ಹರಿ ತನ್ನ ಕಿವಿಗಳನ್ನು ನಂಬಲಾರದೆ ಅಚ್ಚರಿಯಿಂದ ಉದ್ಗರಿಸಿದ.

''ಇಗೋ, ಇಲ್ಲಿ ಧುಲ್‌ನಿಂದ ವೈಶಟ್, ವೈಶಟ್‌ನಿಂದ ರೇವಾಸ್ ಮತ್ತು ರೇವಾಸ್‌ನಿಂದ ಉರಾನ್'' ಹೆಮ್ಮೆಯಿಂದ ಅವನು ಹೇಳುತ್ತಾ ತನ್ನ ಬೆರಳನ್ನು ಮೊದಲು ತೆಂಗಿನ ತೋಟಗಳನ್ನು ಹೊಂದಿದ್ದ ಕರಾವಳಿಯತ್ತ ತೋರಿಸಿದ. ನಂತರ ಧುಲ್‌ನ ಹಾದಿಯಿಂದ ಹೆದ್ದಾರಿಯವರೆಗೆ ತಿರುಗಿಸಿದ. ನಂತರ ಬೆಟ್ಟದಿಂದ ರಸ್ತೆಯಾಚೆಯಿದ್ದ ಹಳೆಯ ಕಲ್ಲು



ಗಣಿಯವರೆಗೂ, ಹೆದ್ದಾರಿಯಿಂದ ರೇವಾಸ್‌ನ ಕರಾವಳಿ ಗ್ರಾಮದವರೆಗೂ ತೋರಿಸಿದ. "ಹೊಸ ಧುಲ್-ವೈಶೆಟ್-ರಸಗೊಬ್ಬರ ಘಟಕ" ಎಂದು ದೊಡ್ಡ ದನಿಯಲ್ಲಿ ಹೇಳಿದ.

"ಹಾಗಂದರೇನು?" ಅದನ್ನು ತಿಳಿಯುವ ಕುತೂಹಲದಿಂದ ಹರಿ ಕೇಳಿದ. ತಾನೊಬ್ಬ ಹಳ್ಳಿ ಗಮಾರನೆಂಬುದನ್ನು ತೋರಿಸಿಕೊಳ್ಳಲು ಅವನಿಗೆ ನಾಚಿಕೆಯೆನಿಸಲಿಲ್ಲ.

"ಏನು, ಹಾಗಂದರೇನೆಂಬುದು ಗೊತ್ತಿಲ್ಲವೆ?" ಅವನು ತಿರಸ್ಕಾರದಿಂದ ಕೇಳಿದ. "ಹೂಂ, ನಿನಗೆ ಸದ್ಯದಲ್ಲೆ ತಿಳಿಯುತ್ತದೆ."

"ಕಾರ್ಖಾನೆಯಲ್ಲಿ ಏನನ್ನು ತಯಾರಿಸುತ್ತಾರೆ?"

"ಹೇಳಿದೆನಲ್ಲ, ರಸಗೊಬ್ಬರ" ಅವನು ಅಸಹನೆಯಿಂದ ನುಡಿದ.

"ಅದೇನು?" ಹರಿ ಕೇಳಿದ.

ಆಗಂತುಕ ಗಹಗಹಿಸಿ ನಕ್ಕ. ಈ ಹಳ್ಳಿಯವರಂತೂ ಹೆದ್ದರು. ಅವರಿಗೇನೂ ತಿಳಿಯದು. "ರಾಸಾಯನಿಕಗಳು" ಹರಿಗೆ ಅರ್ಥವಾಗದ ಮತ್ತೊಂದು ಪದವನ್ನು ಅವನು ಆಡಿದ. "ವಿವಿಧ ರೀತಿಯ ರಾಸಾಯನಿಕಗಳನ್ನು ಅಂದರೆ, ಸಸಾರಜನಕ, ಅಮೋನಿಯ, ಯೂರಿಯಾ ಇತ್ಯಾದಿಗಳನ್ನು ಹೆಚ್ಚು ಬೆಳೆ ತೆಗೆಯುವ ಸಲುವಾಗಿ ಭೂಮಿಗೆ ಹಾಕುವರು."

"ಏನು ಗೊಬ್ಬರವೇ?" ಹರಿ ನಿರಾಶೆಯಿಂದ ಕೇಳಿದ. ಈ ವಿಸ್ತಾರವಾದ ಪ್ರದೇಶವನ್ನು

ಗೊಬ್ಬರವನ್ನು ತಯಾರಿಸಲು ಬಳಸಲಾಗುವುದೇ ಎಂದು ಆಶ್ಚರ್ಯಪಟ್ಟ.

''ಏ, ಖಾಲಿ ಬುರುಡೆ, ಗೊಬ್ಬರವಲ್ಲ. ಜನರು ತಮ್ಮ ಹಸು, ಎಮ್ಮೆಗಳನ್ನು ಸುತ್ತಮುತ್ತ ಮೇಯಿಸುತ್ತಾ ಅವುಗಳ ಸೆಗಣಿಯನ್ನು ತಮ್ಮ ದರಿದ್ರ ಜಮೀನುಗಳಲ್ಲಿ ಸುರಿಯುವುದನ್ನು ತಪ್ಪಿಸುವ ಸಲುವಾಗಿ, ಇಲ್ಲಿನ ಕಾರ್ಖಾನೆಗಳು ಟನ್‌ಗಟ್ಟಲೆ ರಾಸಾಯನಿಕ ಗೊಬ್ಬರವನ್ನು ತಯಾರಿಸಿ ದೇಶದ ಎಲ್ಲ ಭಾಗಗಳಿಗೂ ಕಳಿಸುತ್ತವೆ. ಅವನ್ನು ರೈತರಿಗೆ, ಅಂದರೆ ಹೆಚ್ಚು ಜಮೀನುಳ್ಳ ಶ್ರೀಮಂತ ರೈತರಿಗೆ ಮಾರುತ್ತವೆ'' ಹರಿದ ಷರಟು ಹಾಕಿಕೊಂಡು ಬರಿಗಾಲಿನಲ್ಲಿ ನಿಂತಿದ್ದ ಹರಿಯನ್ನು ತಿರಸ್ಕಾರದಿಂದ ನೋಡುತ್ತಾ ಅವನು ಹೇಳಿದ, ''ದೊಡ್ಡ ಫಾರಂಗಳಿಗಾಗಿ ರಾಸಾಯನಿಕಗಳನ್ನೂ, ನಿಮ್ಮಲ್ಲಿರುವ ಜಮೀನುಗಳಲ್ಲಿ ಉತ್ತಮ ರೀತಿಯಲ್ಲಿ ಫಸಲನ್ನು ತೆಗೆಯಲು ರಾಸಾಯನಿಕವನ್ನೂ ಉತ್ಪಾದಿಸಲಾಗುವುದು.''

ಹಳ್ಳಿಗರು ಮತ್ತು ಅವರ ಎಮ್ಮೆಗಳ ಬಗ್ಗೆ ಅಪಹಾಸ್ಯ ಮಾಡುವುದನ್ನು ಎದುರಿಸುವಂತೆ ಹರಿ ಹೇಳಿದ, ''ನಾವು ನಮ್ಮ ತೆಂಗಿನ ಮರಗಳಿಗಾಗಿ ಮೀನಿನ ಗೊಬ್ಬರ ಹಾಕುತ್ತೇವೆ. ತೆಂಗು ಬೆಳೆಗೆ ಅದು ತುಂಬ ಒಳ್ಳೆಯದು.''

''ಮೀನಿನ ಗೊಬ್ಬರವನ್ನು ನೀವು ಎಷ್ಟು ತಾನೆ ಸಂಗ್ರಹಿಸಬಲ್ಲಿರಿ? ಇಲ್ಲಿ ಸಾವಿರಾರು ಟನ್‌ಗಳಷ್ಟು.... ಸಾವಿರಾರು ಟನ್‌ಗಳಷ್ಟು ಗೊಬ್ಬರವನ್ನು ತಯಾರಿಸಿ ದೇಶದೆಲ್ಲೆಡೆಗೆ ಕಳಿಸಲಾಗುವುದು, ರಫ್ತು ಮಾಡಲಾಗುವುದು.''

''ಹೌದಾ?'' ಈ ಹೊಸ ಅಂಶವನ್ನು ಅರ್ಥಮಾಡಿಕೊಳ್ಳಲು ಯತ್ನಿಸುತ್ತಾ ಹರಿ ವಿನಯದಿಂದ ಉಸುರಿದ. ''ವಿವಿಧ ಅನೇಕ ಕಾರ್ಖಾನೆಗಳಲ್ಲಿ ಅದನ್ನು ತಯಾರಿಸಲಾಗುವುದಾ?''

''ಹೌದು, ಖಂಡಿತ. ಕೇವಲ ಒಂದೇ ಕಾರ್ಖಾನೆಯಲ್ಲಲ್ಲ, ಹಲವಾರು ಕಾರ್ಖಾನೆಗಳಲ್ಲಿ. ಇದೊಂದು ದೊಡ್ಡ ಕೈಗಾರಿಕಾ ಘಟಕವಾಗುತ್ತದೆ. ಮುಂಬೈನ ಬಳಿ ಥಾಣಾದಲ್ಲಿರುವುದನ್ನು ನೀನು ನೋಡಿದ್ದೀಯಾ?''

ಪಾಪ, ಹರಿ ಅದನ್ನು ನೋಡಿರಲಿಲ್ಲ, ಮಾತನಾಡದೆ ಇಲ್ಲವೆಂದು ತಲೆಯಾಡಿಸಿದ.

''ಇದು ಅದಕ್ಕಿಂತ ದೊಡ್ಡದಾಗಿರುತ್ತದೆ. ನಿನಗೇನು ಗೊತ್ತು?'' ಆಗಂತುಕ ಹಠಾತ್ತನೆ ಕೋಪಗೊಂಡಂತೆ ತೋರಿ, ಬೆಟ್ಟವನ್ನು ಇಳಿಯಲಾರಂಭಿಸಿದ. ಅದು ಕಡಿದಾಗಿದ್ದುದರಿಂದ ಒಂದು ಹೆಜ್ಜೆಯ ಮೇಲೆ ಭಾರಬಿಟ್ಟು ಇಳಿಯುತ್ತಿದ್ದ. ಅವನ ಪಾದರಕ್ಷೆಗಳು ಕೆಂಪು ಕಲ್ಲಿನ ಮೇಲೆ ಜಾರುತ್ತಿದ್ದವು. ಬರಿಗಾಲಿನ ಹರಿ ಆರಾಮವಾಗಿ ಬೇಗ ಬೇಗ ಇಳಿಯುತ್ತಿದ್ದ. ಇನ್ನೂ ಹೆಚ್ಚು ವಿಷಯಗಳನ್ನು ತಿಳಿಯುವ ಕುತೂಹಲ ಅವನಿಗುಂಟಾಯಿತು.

''ರಸಗೊಬ್ಬರವನ್ನು ಹೇಗೆ ಮಾಡಲಾಗುತ್ತದೆ?''ಹರಿ ಕೇಳಿದ, ''ಯಂತ್ರಗಳು ಹೇಗಿರುತ್ತವೆ? ಅವು ಕೆಲಸ ಮಾಡುವುದು ಎಣ್ಣೆಯಿಂದಲೊ, ಕಲ್ಲಿದ್ದಿಲಿನಿಂದಲೊ? ಅವುಗಳಲ್ಲಿ ಕೆಲಸ ಮಾಡುವವರಾರು?''

''ಅವುಗಳಲ್ಲಿ ಕೆಲಸಮಾಡಲು ಜನರ ಅಗತ್ಯವಿದೆ'' ಆ ಮನುಷ್ಯ ಗಟ್ಟಿಯಾಗಿ ಹೇಳಿದ, ''ರೇಲ್ವೆಮಾರ್ಗವನ್ನು ಹಾಕಲಾಗುವುದು. ಎಲ್ಲೆಡೆಯಿಂದ ಜನ ಬಂದು ಇಲ್ಲಿ ಕೆಲಸ ಮಾಡುತ್ತಾರೆ.''

ಸಮತೋಲನವನ್ನು ಉಳಿಸಿಕೊಳ್ಳಲು ಮೆಟ್ಟಲಿನಿಂದ ಮೆಟ್ಟಲಿಗೆ, ಬಂಡೆಯಿಂದ ಬಂಡೆಗೆ

ಹಾರುತ್ತಾ ಹರಿ ಕೇಳಿದ, ''ಎಲ್ಲಿಂದ?''

''ಎಲ್ಲೆಡೆಯಿಂದ'' ಆ ಮನುಷ್ಯ ಹೇಳಿದ, ''ಭಾರತದ ಎಲ್ಲ ಕಡೆಯಿಂದ ಬರುತ್ತಾರೆ. ಅವರಿಗೆ ಇಲ್ಲಿ ಉದ್ಯೋಗಗಳು ಸಿಗುತ್ತವೆ.''

''ನಮ್ಮ ಬಗ್ಗೆ ಏನು?'' ಈಗಾಗಲೇ ಬೆಟ್ಟದ ಬುಡವನ್ನು ತಲುಪಿದ್ದ ಆ ವ್ಯಕ್ತಿಯ ಹಿಂದೆ ಓಡುತ್ತಾ ಹರಿ ಕೇಳಿದ. ಪೈರಿನ ಕೂಳೆಗಳು ಅವನ ಕಾಲನ್ನು ಚುಚ್ಚುತ್ತಿದ್ದವು.

''ನೀವು?'' ಆ ಮನುಷ್ಯ ಸರ್ರನೆ ತಿರುಗಿ ಹರಿಯನ್ನೇ ನೋಡುತ್ತಾ ಕೇಳಿದ, ''ಏ ಹುಡುಗ, ನೀನು ಕಾರ್ಖಾನೆಯಲ್ಲಿ ಕೆಲಸ ಮಾಡಬಲ್ಲೆಯ?''

''ನಾನು ಕಲಿಯಬಲ್ಲೆ'' ತನ್ನ ಧ್ವನಿಯನ್ನು ಹಿಡಿತದಲ್ಲಿಟ್ಟುಕೊಳ್ಳಲು ಪ್ರಯತ್ನಿಸುತ್ತಾ ಧೈರ್ಯವಾಗಿ ಹರಿ ಹೇಳಿದ, ''ನನಗೆ ಅದು ಸಾಧ್ಯ ಎನಿಸುತ್ತದೆ. ನನಗೆ ಉದ್ಯೋಗದ ಅಗತ್ಯವಿದೆ.''

ಹರಿಯನ್ನು ದೃಷ್ಟಿಸಿ ನೋಡುವುದನ್ನೂ, ಆರ್ಭಟಿಸುವುದನ್ನೂ ಆ ಮನುಷ್ಯ ಹಠಾತ್ತನೆ ನಿಲ್ಲಿಸಿದ. ಅವನ ಮುಖ ಮೃದುವಾಯಿತು. ಕಣ್ಣುಗಳಲ್ಲಿ ದಯಾ ಭಾವನೆ ಮೂಡಿತು. ''ಅಂದರೆ ನಿನಗೆ ಕೆಲಸದ ಅಗತ್ಯವಿದೆ, ಹಾಂ? ಹಸಿವು, ಹಾಂ? ಮನೆಯಲ್ಲಿ ಆಹಾರವಿಲ್ಲ, ಹಾಂ? ರೋಗಿಷ್ಠ ತಾಯಿ, ಕುಡುಕ ತಂದೆ. ಸೋದರಿಯರಿಗೆ ಮದುವೆಯಾಗಬೇಕು, ಆದರೆ ವರದಕ್ಷಿಣೆಯಿಲ್ಲ, ಆಂ?''

ಹರಿ ನಿಬ್ಬೆರಗಾದ. ತನ್ನ ಕುಟುಂಬದ ವಿಷಯ ಈ ಅಪರಿಚಿತನಿಗೆ ಹೇಗೆ ಗೊತ್ತು? ತನ್ನ ಬಗ್ಗೆ ಅವನು ವಿಚಾರಿಸಿರಬಹುದೆ? ಏಕೆ? ಕಾರ್ಖಾನೆಯ ಭಾವಿ ಕೆಲಸಗಾರನಂತೆ ತನ್ನನ್ನು ಕಂಡಿರಬಹುದೆ? ತನಗೆ ಅವನು ಕೆಲಸ ಕೊಡಿಸಬಹುದೆ? ''ನಿನಗೆ ಹೇಗೆ ಗೊತ್ತು?'' ಹರಿ ಮೆತ್ತಗೆ ಕೇಳಿದ.

ಆದರೆ ಅವನು ಸರ್ರನೆ ತಿರುಗಿದ. ಅವನ ಮುಖದಲ್ಲಿ ತಿರಸ್ಕಾರದ ಭಾವನೆ ಇತ್ತು. ''ನೀವೆಲ್ಲರೂ ಒಂದೇ ರೀತಿ. ಹೆಡ್ಡರು. ಹೆಂಡ ಕುಡಿದು, ಇಡೀ ದಿನ ತೆಂಗಿನ ಮರದ ಕೆಳಗೆ ಮತ್ತಿನಿಂದ ಬಿದ್ದಿರುತ್ತೀರಿ. ಮೀನು ಹಿಡಿಯಲು ಹೋಗಿ ಸಮುದ್ರದಲ್ಲಿ ಮುಳುಗಿ ಸಾಯಿರಿ. ಮನೆ ಜವಾಬ್ದಾರಿ ಹೆಂಗಸರಿಗೆ ಬಿಡಿ. ಮುದುಕಿಯರು ಮತ್ತು ಮಕ್ಕಳು ಹಸಿವಿನಿಂದಿದ್ದಾರೆ. ಬೀದಿ ನಾಯಿಗಳು ರಾತ್ರಿ ಹೊತ್ತು ಊಳಿಡುತ್ತವೆ. ಓ, ಎಂತಹ ಜಾಗ, ನಿಮ್ಮ ಧುಲ್! ನೀವೆಂತಹ ಹೆಡ್ಡರು. ಎಲ್ಲರೂ ಒಂದೇ ಇಲ್ಲಿ. ಬೇರೆಯವರಿಗೆ ನನ್ನ ಕೆಲಸ ವಹಿಸಿಕೊಟ್ಟು ಹೋಗುವ ದಿನ ಬಂದಾಗ ನನಗೆ ತುಂಬ ಸಂತೋಷವಾಗುತ್ತದೆ.'' ನೆಲದ ಮೇಲೆ ಬಿದ್ದಿದ್ದ ಕಾಂಕ್ರಿಟ್ ಕೊಳವೆಗಳ ಗುಡ್ಡೆಯತ್ತ ಕೈ ಆಡಿಸುತ್ತಾ ಅವನು ಹೇಳಿದ, ''ನಾನು ಮನೆಗೆ ಹೋಗುತ್ತೇನೆ. ಮುಂಬೈಗೆ, ಮುಂಬೈ''! ಅವನು ತನ್ನ ಕೈಗಳನ್ನೆತ್ತಿ ಅಲ್ಲಾಡಿಸುತ್ತಾ ಗುಡಿಸಿಲಿನೊಳಗೆ ಜಿಗಿದು ರಪ್ಪನೆ ಬಾಗಿಲನ್ನು ಹಾಕಿಕೊಂಡ.

ಹರಿ ಮುಚ್ಚಿದ ಬಾಗಿಲನ್ನೇ ನೋಡುತ್ತಾ ನಿಂತ. ತಾನು ಕೇಳಬೇಕಾದ ಪ್ರಶ್ನೆಗಳು ಅನೇಕವಿದ್ದು, ಕೇಳಲಾಗದಿದ್ದುದಕ್ಕಾಗಿ ತಳಮಳಿಸಿದ. ಆ ಮನುಷ್ಯ ಮುಂಬೈನ ಸಿನಿಮಾ ಗೀತೆಯೊಂದನ್ನು ಜೋರಾಗಿ ಇನ್ನೂ ಹಾಡುತ್ತಿದ್ದ. ನಂತರ ಬಾಗಿಲು ತೆರೆಯಿತು. ತನ್ನ ತಲೆಯನ್ನು ಹೊರಹಾಕಿ ಕೂಗಿದ, ''ಏ, ಹೆಡ್ಡ! ಇನ್ನೂ ಇಲ್ಲೇ ನೋಡುತ್ತಾ ನಿಂತಿದ್ದೀಯಾ? ಹೊರಡು, ನನ್ನ ಪಾಡಿಗೆ ನನ್ನನ್ನು ಬಿಡು. ನಿನ್ನ ಕೆಟ್ಟ ಮುಖ ನಾನು ನೋಡಲಾರೆ. ಅದನ್ನು

ಹೊತ್ತು ಮನೆಗೆ ಹೋಗು. ರಾಸಾಯನಿಕಗಳೆಂದರೇನು? ಕಾರ್ಖಾನೆಗಳೆಂದರೇನು? ಯಾವ ರಸಗೊಬ್ಬರ ಒಳ್ಳೆಯದು ಎಂಬುದನ್ನು ಅರಿತ ಮೇಲೆ ಬಾ."

***

ದೂಳು ತುಂಬಿದ ಹಳ್ಳಿಯ ಹಾದಿಯಲ್ಲಿ ಹರಿ ಮನೆಯತ್ತ ಬರುತ್ತಿದ್ದಾಗ ಒಂದು ಸೈಕಲ್ ವೇಗದಿಂದ ಅವನ ಪಕ್ಕಕ್ಕೇ ಬಂದಿತು. ಅದರ ಗಂಟೆಯನ್ನು ಜೋರಾಗಿ ಬಾರಿಸಲಾಗುತ್ತಿತ್ತು. ಹಾಗೆ ಬರುತ್ತಿದ್ದವನು ಮತ್ತಾರೂ ಅಲ್ಲ, ರಾಮು! ಅಂದು ಅಪರೂಪಕ್ಕೆ ವೇಗವಾಗಿ ಬರುತ್ತಿದ್ದ.

"ನಿನಗೆ ಗೊತ್ತಾ?" ರಾಮು ಹಿಂದಿರುಗಿ ಹರಿಯತ್ತ ನೋಡುತ್ತಾ ಕೇಳಿದ, "ಬಿಜುವಿನ ಡೀಪ್-ಫ್ರಿಜ್ ಬಂದಿದೆ. ಮುಂಬೈನಿಂದ ಒಂದು ಲಾರಿ ಅದನ್ನು ತಂತು."

ಹರಿ ಗೊತ್ತಿಲ್ಲವೆಂದು ತಲೆಯಾಡಿಸಿದುದನ್ನು ಗಮನಿಸದೆ ಅವನು ವೇಗವಾಗಿ ಹೊರಟು ಹೋದ. ಬಿಜುವಿನ ಕಳ್ಳಸಾಗಾಣಿಕೆ ದೋಣಿಯ ಬಗ್ಗೆ ಹರಿ ಆಸಕ್ತಿಯನ್ನು ಕಳೆದುಕೊಂಡಿದ್ದ. ಅದು ದೂರದ ಸಮುದ್ರಕ್ಕೆ ಹೋಗಿ, ಮುಂಗಾರು ಮಾರುತದಲ್ಲಿ ಸಿಕ್ಕಿ ಮುಳುಗುತ್ತದೆ. ಡೀಪ್-ಫ್ರಿಜ್ ಸಮುದ್ರದ ತಳವನ್ನು ಮುಟ್ಟುತ್ತದೆ. ಮಿನುಗುತ್ತಿರುವ ದೊಡ್ಡ ಕಾರ್ಖಾನೆ-ಗಳು, ಉದ್ದನೆಯ ಹೊಗೆಯ ಕೊಳವೆಗಳು, ವಿಚಿತ್ರವಾದ ವಾಸನೆ ನೀಡುವ ಹೊಗೆಯ ಮೋಡಗಳು, ದೊಡ್ಡ ಬಾಗಿಲಿನ ಮೂಲಕ ಇರುವೆಗಳಂತೆ ಒಳಗೆ ಹೋಗುತ್ತಿರುವ ಜನರು, ಈ ಪೈಕಿ ಖಾಕಿ ಚಡ್ಡಿ ಮತ್ತು ಹರಿದ ಷರಟು ಹಾಕಿರುವ ಒಬ್ಬ ಹುಡುಗ.. ಅದೇ ತಾನು-ಇವೇ ಅವನ ತಲೆ ತುಂಬಿದ್ದವು.

ತೆಂಗಿನ ತೋಟದ ಮೂಲಕ ಹಾದಿಯ ತುದಿಯನ್ನು ತಲುಪಿದಾಗ ಕತ್ತಲೆ ಕವಿಯುತ್ತಿತ್ತು. ಪಿಂಟೊ ಬೊಗಳುತ್ತಾ ಅವನ ಸಮೀಪ ಬಂದಿತು. ಅದರ ಬೆನ್ನು ತಟ್ಟುವ, ಇಲ್ಲವೆ ಅದನ್ನು ಮಾತನಾಡಿಸುವ ಗೋಜಿಗೆ ಅವನು ಹೋಗಲಿಲ್ಲ. ಆದರೆ, ಅದು ಅವನ ಪಕ್ಕದಲ್ಲೇ ಜಿಗಿದಾಡುತ್ತಾ ಹೋಗಲು ಹಾಗೂ ಅವನು ನಡೆಯುತ್ತಿದ್ದಾಗ ಪ್ರೀತಿಯಿಂದ ಅವನ ಕಾಲಿಗೆ ಬಡಿಯಲು ಅವಕಾಶ ಕೊಟ್ಟ. ಗುಡಿಸಿಲಿನಲ್ಲಿ ಸಣ್ಣ ಬೆಂಕಿ ದೀಪದಂತೆ ಕಾಣುತ್ತಿತ್ತು. ಬಾಗಿಲ ಚೌಕಟ್ಟಿನಲ್ಲಿ ಒಂದು ಚಿತ್ರದಂತೆ, ಅವನ ಸೋದರಿಯರ ಕಪ್ಪು ಆಕೃತಿಗಳು ಬೆಂಕಿಯ ಸುತ್ತ ಒಟ್ಟಾಗಿ ಕುಳಿತಿದ್ದವು.

ಕೊರಕಲ ಮೇಲಿನ ದಿಮ್ಮಿಯನ್ನೇರಿ ಅವನು ಅವರನ್ನು ತದೇಕ ದೃಷ್ಟಿಯಿಂದ ನೋಡಿದ. ಅವನು ಕತ್ತಲಲ್ಲಿ ಅವರಿಗೆ ಕಾಣುವಂತಿರಲಿಲ್ಲ. ಅವನು ಅಲ್ಲಿರುವುದೂ ಅವರಿಗೆ ಗೊತ್ತಿರಲಿಲ್ಲ. ಅವರ ತಲೆಗಳು ಬಾಗಿದ್ದವು, ಅವರು ಮೌನವಾಗಿದ್ದರು. ಹೊಗೆಯಾಡುತ್ತಿದ್ದ ಸಣ್ಣ ಬೆಂಕಿಯಿಂದ ಅವರ ಆಕೃತಿಯ ರೇಖೆಗಳು ಮಾತ್ರ ಕಾಣುತ್ತಿದ್ದವು. ಸಂಜೆಗತ್ತಲಲ್ಲಿ ಮುದುಡಿಕೊಂಡು ಕುಳಿತಿದ್ದ ಅವರು ಭೀತರಾಗಿದ್ದಂತೆ, ಬಳಲಿದಂತೆ ಮತ್ತು ಹತಾಶರಾಗಿ-ದ್ದಂತೆ ಕಾಣುತ್ತಿದ್ದರು.

ಲೀಲ, ಬೇಲ ಮತ್ತು ಕಮಲ ತಾವೆಲ್ಲರೂ ಆ ಸಣ್ಣ ಗುಡಿಸಿಲಿನಲ್ಲಿ ಒಟ್ಟಿಗೆ ವಾಸಿಸುತ್ತಿ-ದ್ದುದರಿಂದ ಅವರ ಬಗ್ಗೆ, ಇಲ್ಲವೆ ಅವರ ಜೀವನದ ಬಗ್ಗೆ ಆಲೋಚಿಸದೆ ಇರುವುದು ಅವನಿಗೆ ಸಾಧ್ಯವೇ ಇರಲಿಲ್ಲ. ಅವರು ನಡೆಸುತ್ತಿದ್ದುದು ಕಷ್ಟದ ಜೀವನ. ಲೀಲ, ಬೇಲ ಮತ್ತು ಕಮಲ-ಅವನ ಮೂವರು ಸೋದರಿಯರು. ಅವರ ಪೈಕಿ ಒಬ್ಬಳು ಅವನಿಗಿಂತ ದೊಡ್ಡವಳು,

ಇನ್ನಿಬ್ಬರು ಚಿಕ್ಕವರು. ತಾನು ಹೊರಗಿರುವಾಗ ಅವರಿಗೆ ಸ್ವಲ್ಪ ಉಪಶಮನ ನೀಡಲು ಮತ್ತು ಗುಡಿಸಿಲಿಗೆ ಬೆಳಕು ನೀಡಲು ಆ ಬೆಂಕಿ ಬಿಟ್ಟು ಅವರಲ್ಲಿ ಮತ್ತೇನೂ ಇಲ್ಲ.

ಏತಕ್ಕಾಗಿ ಅವರು ಕಾಯುತ್ತಿದ್ದಾರೆ? ಅವರ ಆಶಯವಾದರೂ ಏನು? ತನ್ನಂತೆ ಮೀನು ದೋಣಿಯಲ್ಲಾಗಲೀ, ಇಲ್ಲವೆ ಕಾರ್ಖಾನೆಯಲ್ಲಾಗಲೀ ಕೆಲಸ ಮಾಡುವುದನ್ನು ಅವರು ಎದುರು ನೋಡುತ್ತಿಲ್ಲ. ಒಂದು ದಿನ ಅವರು ಮದುವೆಯಾಗಬೇಕು. ತನ್ನ ತಂದೆ ಏನೂ ಮಾಡದಿರುವುದರಿಂದ ಅವರ ಮದುವೆಯ ಕಾರ್ಯವನ್ನೂ ತಾನೇ ನಿರ್ವಹಿಸಬೇಕು.

ಅವರಿಗೆ ಗಂಡುಗಳನ್ನು ಹುಡುಕಬೇಕು. ಮದುವೆಯ ಉಡುಗೆ-ತೊಡುಗೆಗಳು, ಅಂದರೆ ರೇಷ್ಮೆ ಸೀರೆಗಳು ಮತ್ತು ಚಿನ್ನದ ಆಭರಣಗಳನ್ನು ಕೊಳ್ಳಬೇಕು. ಮದುವೆಯ ಏರ್ಪಾಡು ಮಾಡಬೇಕು. ಇಡೀ ಹಳ್ಳಿಯನ್ನೇ ವಿವಾಹಕ್ಕೆ ಆಹ್ವಾನಿಸಬೇಕು. ಮದುಮಗನು ವರದಕ್ಷಿಣೆಗೆ ಒಂದು ಬೈಸಿಕಲ್, ಏಕೆ, ಒಂದು ಸ್ಕೂಟರ್‌ಗೇ ಒತ್ತಾಯಿಸಬಹುದು. ಚಿನ್ನದ ಗುಂಡಿಗಳು, ನಾಣ್ಯಗಳು ಮತ್ತು ಆಭರಣಗಳು, ಒಂದು ಹಸು ಅಥವಾ ಎಮ್ಮೆ, ಸ್ವಲ್ಪ ಜಮೀನು... ಇವುಗಳನ್ನು ಕೇಳಬಹುದು. ಗಂಡುಗಳು ಮಾಡಿದ ಅಭೂತಪೂರ್ವ ಬೇಡಿಕೆಗಳನ್ನೂ ಹಾಗೂ ಹುಡುಗಿಯರ ತಂದೆ-ತಾಯಿಯರು ಅದನ್ನು ಪೂರೈಸಲು ಹೆಣಗಾಡಿದುದನ್ನೂ ಹರಿ ಕೇಳಿದ್ದ. ಅದನ್ನು ಪೂರೈಸುವುದೆಂತು? ತನಗೊಂದು ಕೆಲಸ. ಇಂತಹ ಅಮೂಲ್ಯ ವಸ್ತುಗಳನ್ನು ಕೊಳ್ಳುವುದು ತನ್ನಿಂದ ಸಾಧ್ಯವಾಗದು. ಹಳ್ಳಿಯಲ್ಲಿ ಸಾಲ ನೀಡುವವರಿಂದ ಹಣವನ್ನು ಪಡೆಯಬೇಕು. ವರ್ಷಾನುಗಟ್ಟಲೆ, ಬಹುಶಃ ತನ್ನ ಜೀವನ ಪರ್ಯಂತ ತನ್ನ ಸಂಬಳದಿಂದ ಆ ಸಾಲವನ್ನು ತೀರಿಸಬೇಕು. ಅದೂ ತನಗೆ ಸಂಬಳ ದೊರೆತರೆ, ಅಂದರೆ ಕೆಲಸ ಸಿಕ್ಕಿದರೆ ಮಾತ್ರ. ತಾನು ನಿಜವಾಗಿ ಸಂಬಳ ಪಡೆಯುವಂತಾದರೆ ತನ್ನ ಸೋದರಿಯರನ್ನು ಈ ಕಗ್ಗತ್ತಲು ಮತ್ತು ವಿಷಮತೆಯ ಮನೆಯಿಂದ ಪಾರು ಮಾಡಲು ಒಂದು ಮಾರ್ಗವಿದೆ ಎಂದು ಕಂಡು ಹಿಡಿಯಬಹುದು. ರಾತ್ರಿಯ ಕತ್ತಲಿನಲ್ಲಿ ಕವಿದಿರುವ ಅಸ್ಪಸ್ಥತೆ, ಕುಡುಕತನದ ಕಗ್ಗತ್ತಲ ವಾತಾವರಣದಿಂದ ಅವರನ್ನು ಪಾರುಮಾಡಬೇಕು.

ತನ್ನ ಇಡೀ ಕುಟುಂಬಕ್ಕೆ ಸಾಕಾಗುವಷ್ಟು ಹಣವನ್ನು ಧುಲ್‌ನಲ್ಲಿ ಗಳಿಸುವುದು ಸಾಧ್ಯವಿಲ್ಲವೆಂದು ಅವನಿಗೆ ಗೊತ್ತು. ತಾನು ಮುಂಬೈಗೆ ಹೋಗಬೇಕು. ಮುಂಬೈ ಒಂದು ಮಹಾನ್ ನಗರ, ಒಂದು ಶ್ರೀಮಂತ ನಗರ. ಉದ್ಯೋಗವನ್ನು ಪಡೆಯಬಹುದಾದ, ಹಣವನ್ನು ಗಳಿಸಬಹುದಾದ ಮತ್ತು ಐಶ್ವರ್ಯವನ್ನು ಗಳಿಸಬಹುದಾದ ಜನಭರಿತ ನಗರ. ಹೇಗಾದರೂ ಅಲ್ಲಿಗೆ ಹೋಗಬೇಕು. ಹೇಗೆ? ಎಂದು? ಅದು ಅವನಿಗಿನ್ನೂ ಸ್ಪಷ್ಟವಾಗಿರಲಿಲ್ಲ.

ಹರಿ ಗುಡಿಸಿಲಿನೊಳಗೆ ಹೋದ. ಅವನಿಗಿಂತ ಮುಂಚೆಯೇ ಪಿಂಟೊ ನುಗ್ಗಿತು. ಸೋದರಿಯರೆಲ್ಲಾ ತಲೆಯೆತ್ತಿ ಅವನನ್ನು ನೋಡಿದರು. ಅವರ ಶೋಕತಪ್ತ ಗಾಬರಿಗೊಂಡ ಮುಖಗಳು ಅವನು ಹೌಹಾರುವಂತೆ ಮಾಡಿದವು. ಕೂಗಿ ಕೇಳಿದ, ''ಏನಾಯಿತು?''

# 3

ಅವರ ಶೋಕ ಅವರ ತಾಯಿಗೆ ಸಂಬಂಧಿಸಿದ್ದು. ಅವಳ ದೇಹಸ್ಥಿತಿ ವಿಲಕ್ಷಣವಾಗಿದ್ದುದನ್ನು ಅವರು ಗಮನಿಸಿದ್ದರು. ಬೆಳಿಗ್ಗೆ, ಲೀಲ ಅವಳಿಗಾಗಿ ಚಹಾ ತೆಗೆದುಕೊಂಡು ಹೋದಾಗ, ಅವಳಿಗೆ ತಾನೇ ತಲೆಯೆತ್ತಿ ಕುಡಿಯಲು ಸಹ ಸಾಧ್ಯವಾಗಿರಲಿಲ್ಲ. ಲೀಲ ಅವಳ ತಲೆಯ ಕೆಳಗೆ ಕೈಯಿಟ್ಟು ಎತ್ತಿದಾಗ ತಾಯಿಯ ಶರೀರ ಜ್ವರದಿಂದ ಸುಡುತ್ತಿರುವುದು ಮತ್ತು ಅವಳ ಚರ್ಮ ಒಣಗಿರುವುದು ತಿಳಿಯಿತು. ''ಅಮ್ಮ'' ಎಂದು ಲೀಲ ಕರೆದಾಗ ಅವಳು ಕಣ್ಣಾಲಿಗಳನ್ನು ಆಡಿಸಿದಳೇ ವಿನಹ ಬಾಯಿ ಬಿಡಲಿಲ್ಲ, ನಸುನಗಲಿಲ್ಲ. ''ಬೇಲ, ಕಮಲ'' ಲೀಲ ಕರೆದಳು. ತಂಗಿಯರು ಓಡಿಬಂದಾಗ ವರಾಂಡದಲ್ಲಿ ಮಣ್ಣಿನ ಹೂಜಿಯಲ್ಲಿರುವ ತಣ್ಣನೆಯ ನೀರನ್ನೂ, ಅದರಲ್ಲಿ ಅದ್ದಲು ಹರಕಲು ಬಟ್ಟೆಯನ್ನೂ ತರುವಂತೆ ಹೇಳಿದಳು. ಲೀಲ, ಒದ್ದೆ ಬಟ್ಟೆಯನ್ನು ತಾಯಿಯ ಹಣೆಯ ಮೇಲಿಟ್ಟು ಹಾಸಿಗೆಯ ತುದಿಯಲ್ಲಿ ಕುಳಿತಳು. ಅವಳ ಮುಂಗೈಯನ್ನು ಹಿಡಿದಳು. ಅವಳ ಬೆರಳುಗಳು ನಡುಗುತ್ತಿದ್ದವು.

''ಅಮ್ಮನಿಗೇನಾಗಿದೆ?'' ಹಾಸಿಗೆಯ ಮೇಲೆ ಬಗ್ಗಿ ನೋಡುತ್ತಾ ಹುಡುಗಿಯರು ಕೇಳಿದರು. ಶಾಲೆಗೆ ಹೋಗಲು ಅವರು ಉಡುಪು ಧರಿಸಿ ಸಿದ್ಧವಾಗಿದ್ದರು. ಆದರೆ, ಹಾಸಿಗೆಯ ಪಕ್ಕದಿಂದ ಕದಲಲಿಲ್ಲ.

''ಅಮ್ಮನಿಗೆ ಜ್ವರ ಬಂದಿದೆ'' ಲೀಲ ಮೆಲ್ಲಗೆ ಉಸುರಿದಳು, ''ಹೋಗಿ ಹೇಳಿ...ಹೋಗಿ, ಹೇಳಿ.''

''ಯಾರಿಗೆ?''

''ಏನೆಂದು?''

ಇದಕ್ಕೆ ಉತ್ತರ ಕೊಡಲಾಗದೆ ಲೀಲ ತನ್ನ ನಾಲಿಗೆಯನ್ನು ಕಚ್ಚಿಕೊಂಡಳು. ಸ್ವಲ್ಪ ಸಮಯದ ನಂತರ ಮನಸ್ಸನ್ನು ಹಿಡಿತದಲ್ಲಿಟ್ಟುಕೊಳ್ಳಲು ಪ್ರಯತ್ನಿಸುತ್ತಾ ನಡುಗುವ ಧ್ವನಿಯಲ್ಲಿ ಹೇಳಿದಳು, ''ಹೋಗಿ, ಹರಿ ಹೊಲದಲ್ಲಿ ಇದ್ದಾನಾ ನೋಡಿ. ಅವನಿಗೆ ಹೇಳಿ, ಹಳ್ಳಿಗೆ ಹೋಗಿ.... ಬೇಡ ಅಲ್ಲಿ ಯಾವ ವೈದ್ಯನೂ ಇಲ್ಲ.''

''ಅವನು ಅಲಿಬಾಗ್‌ಗೆ ಹೋಗಬೇಕಾ?'' ಸಹಾಯ ಮಾಡುವ ಯತ್ನದಲ್ಲಿ ಬೇಲ ಕಾತುರದಿಂದ ಕೇಳಿದಳು.

''ಇಲ್ಲ, ಅದರಿಂದ ಪ್ರಯೋಜನವಿಲ್ಲ. ಅಲಿಬಾಗ್‌ನ ಯಾವ ವೈದ್ಯನೂ ಇಷ್ಟು ದೂರ ಬರುವುದಿಲ್ಲ'' ಲೀಲ ನಿಟ್ಟುಸಿರಿಟ್ಟು ಮತ್ತೆ ಹೇಳಿದಳು, ''ಬೇಲ, ನೆರೆಯ ಖಾನೇಕರ್ ಅವರ ಮನೆಗೆ ಹೋಗು. ಇಲ್ಲಿಗೆ ಬರುವಂತೆ ಹೀರಾಬಾಯಿಗೆ ತಿಳಿಸು. ಇಲ್ಲವೆ, ವೈದ್ಯನಿಗೆ ಹೇಳಿ

ಕಳಿಸುವಂತೆ ಹೇಳು. ಅವಳಿಗೆ ವೈದ್ಯರುಗಳು ಗೊತ್ತು. ಬಹುಶಃ ಅವಳೇ ಬಂದರೂ ಬರಬಹುದು.''

''ಆದರೆ....'' ಬೇಲ ಅನುಮಾನಿಸಿದಳು.

''ಓ, ಅವರೆಲ್ಲಾ....ಹೂಂ...ಹೂಂ.... ಅವರೆಲ್ಲಾ..... ನಿನಗೇ ಗೊತ್ತಲ್ಲ?'' ಕೊಠಡಿಯ ಅತ್ಯಂತ ಕತ್ತಲೆಯ ಮೂಲೆಯಲ್ಲಿ ಚಾಪೆಯ ಮೇಲೆ ಮಲಗಿ ಗೊರಕೆ ಹೊಡೆಯು-ತ್ತಿದ್ದ, ಕುಪ್ಪೆಯಂತೆ ಕಾಣುತ್ತಿದ್ದ ಕುಡುಕ ಅಪ್ಪನತ್ತ ನೋಡುತ್ತಾ ಕಮಲ ಹೇಳಿದಳು.

''ಆದರೂ ನೀವು ಹೋಗಲೇಬೇಕು. ಆದರೆ, ಗಂಡಸರ ಹತ್ತಿರ ಮಾತನಾಡಬೇಡಿ. ಸೀದಾ ಹೀರಾಬಾಯಿ ಹತ್ತಿರ ಹೋಗಿ.''

''ಆದರೆ ಅವಳೂ ಕುಡಿಯುತ್ತಾಳಲ್ಲ'' ಹುಡುಗಿಯರು ಎಚ್ಚರಿಸಿದರು.

''ಆದರೆ ಸದಾ ಕುಡಿಯುವುದಿಲ್ಲ'' ಲೀಲ ಗದರಿಕೆಯ ಧ್ವನಿಯಲ್ಲಿ ಹೇಳಿದಳು, ''ಹೇಗಾದರೂ ಆಗಲಿ. ಹೋಗಿ ನೋಡಿ.''

ಇಬ್ಬರು ಹುಡುಗಿಯರೂ ಮತ್ತಷ್ಟು ವಾದಕ್ಕಿಳಿಯದೆ ಓಡಿದರು. ದಿಮ್ಮಿಯನ್ನೇರಿ ಅವರು ಕೊರಕಲನ್ನು ದಾಟಿದಾಗ ಬದಿಯಲ್ಲಿ ಉದ್ದನೆಯ ಹುಲ್ಲುಗಳಿಂದ ಚಿಮ್ಮಿ ಬಂದ ಪಿಂಟೊ ಅವರನ್ನು ಕಂಡು ಹರ್ಷದಿಂದ ಬೊಗುಳಲಾರಂಭಿಸಿತು. ಬಂಡೆಯೊಂದರ ಮೇಲೆ ಗೂನುಬೆನ್ನು ಮಾಡಿಕೊಂಡು ಜೌಗು ಪ್ರದೇಶವನ್ನು ದಿಟ್ಟಿಸಿ ನೋಡುತ್ತಾ ನಿಂತಿದ್ದ ಕ್ರೌಂಚಪಕ್ಷಿಯೊಂದು ಆ ಶಬ್ದಕ್ಕೆ ಹೆದರಿ ನೆಟ್ಟಗೆ ನಿಂತು, ತನ್ನ ಬೂದು ಬಣ್ಣದ ಗರಿಗಳನ್ನು ಆಡಿಸುತ್ತಾ ಪೈನ್ ಮರಗಳ ಮೇಲಕ್ಕೆ ಹಾರಿ ಹೋಯಿತು. ಇನ್ನೊಂದು ಪಕ್ಷಿಯು'' ಕೂ-ಕೂ-ಕೂ''ಎಂದು ಎಚ್ಚರಿಸಿತು. ಕಪ್ಪುಪಕ್ಷಿಗಳ ಜೋಡಿಯೊಂದು, ಮಿನುಗುತ್ತಾ, ಸೂರ್ಯನತ್ತ ಹಾರಿತು. 'ಭಿಂಡಿ' ಮರವು ಕೆಲವು ಹಳದಿ ಹೂಗಳನ್ನು ಅವರ ತಲೆಯ ಮೇಲೆ ಸುರಿಸಿತು.

ಬೇಲ ಮತ್ತು ಕಮಲ ಮರದ ಕೊಂಬೆಗಳ ಕೆಳಗೆ ಬಗ್ಗಿಕೊಂಡು, ತಮ್ಮ ಮನೆಯನ್ನೂ, ನೆರೆಯವರ ತೋಟವನ್ನೂ ಪ್ರತ್ಯೇಕಿಸುವ ದಟ್ಟವಾದ ಪೊದೆಗಳನ್ನು ದಾಟುತ್ತಾ ಮುನ್ನುಗ್ಗಿ-ದರು. ಹಠಾತ್ತನೆ ಬೇಲ ನಿಂತು, ಕಮಲಳನ್ನು ರಕ್ಷಿಸುವಂತೆ ತನ್ನ ಕೈಯನ್ನು ಅವಳ ಮುಂದೆ ಅಡ್ಡಲಾಗಿ ಹಿಡಿದಳು. ನಂತರ ಸಮಾಧಾನದಿಂದ ನಿಡುಸುಯ್ದು, '' ಓ, ಇದು ಬರೀ ಚರ್ಮ'' ಅಂದಳು. ಅವಳ ಹಿಂದಿದ್ದ ಕಮಲ ಅವಳ ಭುಜದ ಮೇಲೆ ತಲೆ ಎತ್ತಿ ನೋಡಿದಳು. ಬೇಲಳ ಕಾಲ ಬಳಿ ಹರಡಿಕೊಂಡು ಬಿದ್ದಿದ್ದ ದೊಡ್ಡ ಹೂಗಳ ಮೇಲೆ ಆರು ಅಡಿ ಉದ್ದದ ಹಾವಿನ ಪೊರೆಯೊಂದಿತ್ತು. ಸುಂದರವಾದ ಅವಕುಂಠನದಂತೆ, ಅದು ಪಾರದರ್ಶಕವಾಗಿದ್ದು ಮಿನುಗು-ತ್ತಿತ್ತು. ಗಾಳಿಯಲ್ಲಿ ಆ ಪೊರೆಯು ಅಲ್ಲಾಡುತ್ತಿದ್ದು, ಹಾವು ಜೀವಂತವಾಗಿದೆಯೇನೊ ಎಂಬಂತೆ ತೋರುತ್ತಿತ್ತು. ಅದರ ಬಾಯಿ ತೆರೆದಿತ್ತು ಮತ್ತು ಕಣ್ಣುಗಳ ಸ್ಥಳದಲ್ಲಿ ಎರಡು ತೂತುಗಳಿದ್ದವು. ಪೊರೆಯು ಸಮಗ್ರವೂ, ಪರಿಪೂರ್ಣವೂ ಆಗಿತ್ತು. ಆದರೆ ಅದು ಒಣಗಿದ ಚರ್ಮವಾಗಿತ್ತು. ಬಹುಶಃ ಹಿಂದಲ ರಾತ್ರಿ ಪೊರೆ ಬಿಟ್ಟಿರಬೇಕು. ಹುಡುಗಿಯರು ಒಬ್ಬರನ್ನೊ-ಬ್ಬರು ಹಿಡಿದುಕೊಂಡು ಖಾನೇಕರ್ ಅವರ ತೋಟಕ್ಕೆ ಧಾವಿಸಿ ಹೋದರು.

ಖಾನೇಕರ್‌ಗಳು ಈ ಎಲ್ಲ ಗಿಡಮರಗಳ ಮಧ್ಯೆ ದೊಡ್ಡದಾದ, ವಿಸ್ತಾರವಾದ ಆದರೆ ಓರಣವಿಲ್ಲದ ಮನೆಯಲ್ಲಿ ವಾಸಿಸುತ್ತಿದ್ದರು. ಮನೆಯಲ್ಲಿ ಮಣ್ಣಿನ ಗೋಡೆಗಳಿಗೆ ಒತ್ತಿಕೊಂಡು ಜೊಂಡು ಬೆಳೆದಿತ್ತು. ಮುರುಕು ಛಾವಣಿಯ ಮೇಲೆ ಬಳ್ಳಿಗಳು ಹಬ್ಬಿದ್ದವು. ಕೆಲವು ಕೋಳಿಗಳು

ಶಬ್ದ ಮಾಡಿಕೊಂಡು ಓಡಾಡುತ್ತಿದ್ದವು. ಪೊದೆಗಳ ಮೇಲೆ ಕೆಲವು ಕೊಳೆ ಬಟ್ಟೆಗಳನ್ನೂ ಒಣಹಾಕಲಾಗಿತ್ತು. ಒಟ್ಟಿನಲ್ಲಿ ಯಾವುದಕ್ಕೂ ಗಮನಕೊಡದೆ ಎಲ್ಲವೂ ದುಃಸ್ಥಿತಿಯಲ್ಲಿದ್ದವು. ಒಂದು ಕಾಲದಲ್ಲಿ ಅವರು ವೀಳ್ಯದ ಎಲೆ ಮತ್ತು ಬಾಳೆಯ ತೋಟಗಳನ್ನು ಹೊಂದಿದ್ದರು. ಮತ್ತು ಕೋಳಿಯನ್ನು ಸಾಕಿದ್ದರು. ಸ್ವಚ್ಛವಾದ ಕೊಳವೊಂದರಲ್ಲಿ ಮೀನುಗಳನ್ನು ಅಭಿವೃದ್ಧಿಪಡಿಸುತ್ತಿದ್ದರು. ಸಾಕಷ್ಟು ಜಮೀನು ಹೊಂದಿದ ಮೂವರು ಸೋದರರೂ ಕೃಷಿಗಾಗಲಿ, ಮೀನುಗಾರಿಕೆಗಾಗಲಿ ಗಮನ ಕೊಡಲಿಲ್ಲ. ಅವರ ಅಪ್ಪ ಸತ್ತ ಮೇಲೆ ಎಲ್ಲರೂ ದುಡಿಮೆಯನ್ನು ಪೂರ್ಣವಾಗಿ ನಿಲ್ಲಿಸಿದರು. ತಾವೇ ತಯಾರಿಸಿದ ಹೆಂಡವನ್ನು ಕುಡಿಯುತ್ತಾ, ಮಿಕ್ಕದ್ದನ್ನು ಬಾಕಿ ಕುಡುಕರಿಗೆ ಮಾರುತ್ತಿದ್ದರು. ಅವರ ಹೆಂಡಂದಿರು ಅವರನ್ನು ತೊರೆದು, ಇತರ ಗ್ರಾಮಗಳಲ್ಲಿ ತಮ್ಮ ತಂದೆ-ತಾಯಿಗಳ ಮನೆಗೆ ವಾಪಸ್ ಹೊರಟು ಹೋಗಿದ್ದರು. ತಾಯಿ ಹೀರಾಬಾಯಿ ಮಾತ್ರ ಅವರಿಗಾಗಿ ಮನೆಯ ಕಾರುಬಾರನ್ನು ವಹಿಸಿಕೊಂಡಿದ್ದಳು. ಅವಳಿಗೂ ಹೆಂಡವೆಂದರೆ ತುಂಬ ಇಷ್ಟ.

ಅವಳು ತನ್ನ ಮನೆಯ ಮುಂದೆ ಹಗ್ಗದ ಮಂಚವೊಂದರ ಮೇಲೆ ಕುಳಿತು, ಅಡಕೆ ಹೋಳುಗಳನ್ನು ಸಣ್ಣದಾಗಿ ಕತ್ತರಿಸಿ ಪಕ್ಕದಲ್ಲಿಟ್ಟುಕೊಂಡಿದ್ದ ಲೋಹದ ಡಬ್ಬಿಯೊಂದರೊಳಗೆ ಹಾಕುತ್ತಿದ್ದುದನ್ನು ನೋಡಿ ಬೇಲ ಮತ್ತು ಕಮಲರಿಗೆ ಸಮಾಧಾನವಾಯಿತು. ದಿನವಿಡೀ ಜಗಿಯುತ್ತಿದ್ದ ವೀಳ್ಯದೆಲೆ ಮತ್ತು ಅಡಕೆಯಿಂದಾಗಿ ಅವಳ ಬಾಯಿ ಕೆಂಪಾಗಿತ್ತು. ಹುಡುಗಿಯರನ್ನು ಕಂಡು ಅವಳು ಅಚ್ಚರಿಯಿಂದ ತನ್ನ ಕೆಂಪು ಬಾಯನ್ನು ತೆರೆದು, ಮನೆಗೆ ಅತಿಥಿಗಳು ಬಂದಾಗ ಮಾಡುವಂತೆ, ತನ್ನ ಕಡುಗೆಂಪು ಸೀರೆಯನ್ನು ಸರಿಪಡಿಸಿಕೊಂಡು ಬಿಳಿಕೂದಲ ತಲೆಯ ಮೇಲೆ ಸೆರಗು ಹೊದ್ದುಕೊಂಡಳು.

''ಹೋ, ಬೇಲ, ಕಮಲ, ಇಲ್ಲಿಗೆ ಬಂದದ್ದೇಕೆ? ನಿಮ್ಮಪ್ಪ ಒಂದು ಕುಡಿಕೆ ಹೆಂಡಕ್ಕಾಗಿ ಇಷ್ಟು ಬೆಳಗ್ಗೆಯೇ ಕಳಿಸಿದ್ದಾನಾ?'' ಎಂದು ಗಟ್ಟಿಯಾಗಿ ನಗಲಾರಂಭಿಸಿದಳು. ಅವಳ ನಗುವಿನಿಂದಾಗಿ ಮನೆಯೊಳಗಿನಿಂದ ಗಂಡಸಿನ ದನಿಯೊಂದು ಕೇಳಿತು, ''ಏಕಮ್ಮ, ಏನಾಯ್ತು?''

ಬೇಲ ಮತ್ತು ಕಮಲ ಅವಳಿಗೆ ಸ್ವಲ್ಪ ದೂರದಲ್ಲಿ ನಿಂತರು. ಕಮಲ ತನ್ನ ಒಂದು ಕಾಲನ್ನು ಮತ್ತೊಂದರೊಳಗೆ ಹೊಸಕೊಂಡು, ತನ್ನ ಕೈ ಬೆರಳನ್ನು ಬಾಯಲ್ಲಿಟ್ಟುಕೊಂಡಳು. ಬೇಲಳೂ ಅದೇ ರೀತಿ ಮಾಡಿದಳು.

ಹೀರಾಬಾಯಿ ಗಹಗಹಿಸಿ ನಗುತ್ತಾ ಕೇಳಿದಳು, ''ಹೇಳಲಿಷ್ಟವಿಲ್ಲ, ಅಲ್ಲವಾ? ಹೆಂಡವನ್ನು ಕೇಳಲು ಸಂಕೋಚವಾ? ನಾಚಿಕೆ ಬೇಡ. ಗಂಡಸರು ಯಾವ ರೀತಿ ಎಂಬುದು ನನಗೆ ಗೊತ್ತು, ಅಂಥಾದ್ರಲ್ಲಿ ನಾಚಿಕೆ ಏಕೆ?''

ಹುಡುಗಿಯರು ಮಾತನಾಡದೆ ಇಲ್ಲವೆಂಬಂತೆ ತಲೆಯಾಡಿಸಿದರು.

''ಏನು, ಹೆಂಡ ಬೇಡವಾ? ಹಾಗಿದ್ದರೆ ನಿಮಗೇನು ಬೇಕು? ಹೆಂಡಕ್ಕಾಗಿ ಹಣವಾ?''

ಪುನಃ ಹುಡುಗಿಯರು ತಮ್ಮ ತಲೆಯ ಕೂದಲೆಲ್ಲಾ ಹಾರಾಡುವಂತೆ ಮತ್ತಷ್ಟು ಜೋರಾಗಿ ತಲೆಯಾಡಿಸಿದರು.

''ಏನು, ಹೆಂಡಕ್ಕಾಗಿ ದುಡ್ಡೂ ಬೇಡವಾ? ಅಂದರೆ ನಿಮ್ಮ ಅಮ್ಮ ನಿಮ್ಮನ್ನು ಕಳಿಸಿ-ದ್ದಾಳಾ? ಅಕ್ಕಿಗಾಗಿ ಹಣ ಬೇಕಾ? ಅಥವಾ ಚಹಾಕ್ಕೊ? ಅದೇ ತಾನೆ? ಮನೆಯಲ್ಲಿ ಅಕ್ಕಿ

ಇಲ್ಲವಾ? ನೀವು ಏನನ್ನೇ ಕೇಳುವ ಮುನ್ನ, ನಿಮಗೆ ಎಚ್ಚರಿಕೆ ನೀಡುವುದು ಒಳ್ಳೆಯದು...''

ಬೇಲಳಿಗೆ ಇನ್ನು ಸಹಿಸಲಾಗಲಿಲ್ಲ. ಕಮಲಳ ಪಕ್ಕದಿಂದ ಅವಳು ಕೆಲವು ಹೆಜ್ಜೆಗಳಷ್ಟು ಮುಂದೆ ಬಂದು ಗದ್ಗದ ಧ್ವನಿಯಲ್ಲಿ ಹೇಳಿದಳು, ''ನಮಗೆ ದುಡ್ಡೂ ಬೇಡ, ಅಕ್ಕಿಯೂ ಬೇಡ. ಏನನ್ನೂ ಕೇಳಲು ನಾವು ಇಲ್ಲಿಗೆ ಬಂದಿಲ್ಲ. ನಮ್ಮಮ್ಮ ಕಾಯಿಲೆ ಬಿದ್ದಿದ್ದಾಳೆ. ನಿಮಗೆ ತಿಳಿಸುವಂತೆ ನಮ್ಮಕ್ಕ ಕಳಿಸಿದಳು....''

''ಏನು, ಕಾಯಿಲೆಯೆ?'' ಮುದುಕಿ ಬೇಲಳನ್ನು ನೋಡುತ್ತಾ ತನ್ನ ನಗುವನ್ನು ನಿಲ್ಲಿಸಿದಳು. ''ಅವಳಿಗೆ ಜ್ವರ, ಯಾವ ಔಷಧಿಯೂ ಇಲ್ಲ. ಅವಳನ್ನು ಪರೀಕ್ಷಿಸಲು ಒಬ್ಬ ವೈದ್ಯನನ್ನು ನೀವು ಕರೆಸುವಿರಾ?''

ಮುದುಕಿ ತನ್ನ ಹರಿತವಾದ ಕತ್ತರಿಯಲ್ಲಿ ಅಡಕೆಯನ್ನು ಮತ್ತೆ ಕತ್ತರಿಸುತ್ತಾ ತಂತಾನೇ ಮಾತನಾಡಲಾರಂಭಿಸಿದಳು. ಸ್ವಲ್ಪ ಸಮಯದ ನಂತರ ಕತ್ತರಿಸುವುದನ್ನು ನಿಲ್ಲಿಸಿದಳು. ಸ್ವಲ್ಪ ಬೇರೆಯಾದ ಧ್ವನಿಯಲ್ಲಿ ಮಾತನಾಡಿದಳು, '' ಏನು ಮಾಡಬೇಕೆಂಬುದನ್ನು ನಾನು ಹೇಳುತ್ತೇನೆ. ಇಂದು ಮುಂಜಾನೆ ಶಂಖ ಊದುತ್ತಾ, ತಮಟೆ ಬಡಿಯುತ್ತಾ ಹಸುವಿನೊಡನೆ ಶಕುನ ಹೇಳುವ ಮುದುಕ ಬಂದದ್ದನ್ನು ನಾನು ನೋಡಿದೆ. ಅವನು ಹೆಚ್ಚು ದೂರ ಹೋಗಿರಲಾರ. ಅವನು ಹಿಂದಿರುಗಿ ಬರುವಾಗ ನಿಮ್ಮಲ್ಲಿಗೆ ಕಳಿಸುತ್ತೇನೆ. ಅವನಲ್ಲಿ ಒಳ್ಳೆಯ ಮೂಲಿಕೆಗಳು, ಮರದ ತೊಗಟೆಗಳು ಮತ್ತು ಪುಡಿಗಳಿರುತ್ತವೆ. ಹೋಗಿ ಲೀಲಳಿಗೆ ಹೇಳಿ.'' ಅವಳು ತಲೆಯಾಡಿಸಿದಾಗ, ಅವಳ ತಲೆಯಿಂದ ಸೀರೆ ಜಾರಿತು. ಗೋರಂಟಿಯ ಉಜ್ವಲ ಕೆಂಪು ಬಣ್ಣ ಹಾಕಿದ್ದ ಅವಳ ತಲೆ ಕಾಣಿಸಿತು.

ಬೇಲ ಮತ್ತು ಕಮಲ ಹಿಂದಿರುಗಿ, ಪೊದೆಗಳ ಮೂಲಕ ತಮ್ಮ ಮನೆಯತ್ತ ಓಡಿದರು. ಆದರೆ, ಕೊರಕಲನ್ನು ಸಮೀಪಿಸಿದಾಗ, ಪಿಂಟೊ, ನೋವಿನಿಂದ ಬೊಗಳಿದ ಶಬ್ದ ಕೇಳಿಸಿತು. ಆ ಮನೆಯ ಪಕ್ಕದಲ್ಲಿ ಗುಡ್ಡೆಗುಡ್ಡೆಯಾಗಿ ಬಿದ್ದಿದ್ದ ಮೀನಿನ ಮುಳ್ಳುಗಳನ್ನು ಮೂಸುತ್ತಾ ಅಲ್ಲೇ ಉಳಿದಿದ್ದ ಪಿಂಟೊ, ತನ್ನ ಬಾಲವನ್ನು ಹಿಂಗಾಲುಗಳ ಮಧ್ಯೆ ಸಿಕ್ಕಿಸಿಕೊಂಡು ಕಿವಿಗಳನ್ನು ಅಗಲ ಮಾಡಿಕೊಂಡು ಕುಂಟುತ್ತಾ ಅವರ ಹಿಂದೆ ಬಂತು. ಆ ಮುದುಕಿ ಅಥವಾ ಮನೆಯೊಳ-ಗಿದ್ದವರಲ್ಲಿ ಯಾರೋ ಅದರತ್ತ ಕಲ್ಲು ಇಲ್ಲವೆ ತೆಂಗಿನ ಚಿಪ್ಪನ್ನು ತೂರಿದ್ದು, ಅದು ಅದರ ಕಾಲಿಗೆ ಬಡಿದಿತ್ತು. ಕುಂಯ್‌ಗುಡುತ್ತಾ ಅವರ ಬಳಿ ಬಂದ ಅದನ್ನು ಅದಕ್ಕೆ ಮತ್ತಷ್ಟು ಕಲ್ಲೇಟುಗಳು ಬೀಳುವ ಮುನ್ನವೇ ಮನೆಯತ್ತ ಕರೆದುಕೊಂಡು ಹೋದರು.

***

ಗುಡಿಸಿಲಿನಲ್ಲಿ ಕುಳಿತು ಕಾಯುವುದು ಬಿಟ್ಟು ಮತ್ತೇನೂ ಅವರು ಮಾಡುವಂತಿರಲಿಲ್ಲ. ಶಾಲೆಗೆ ಹೋಗುವಂತೆ ಲೀಲ ತಂಗಿಯರಿಗೆ ಹೇಳಲಿಲ್ಲ. ಲೀಲ ಮನೆಗೆಲಸದಲ್ಲಿ ನಿರತಳಾದಳು. ಆಗಾಗ ತನ್ನ ತಾಯಿಯನ್ನು ನೋಡಿಕೊಂಡು ಬರುತ್ತಿದ್ದಳು. ಹುಡುಗಿಯರು ಗಲಾಟೆ ಮಾಡದೆ ಗುಡಿಸಿಲ ಹೊರಗೆ ಆಟವಾಡುತ್ತಿದ್ದರು. ಮರಳ ಮೇಲೆ ರೇಖಾ ಚಿತ್ರಗಳನ್ನು ಮೂಡಿಸಿ, ಅವನ್ನು ಹೂದಳಗಳಿಂದ ಅಲಂಕರಿಸುತ್ತಿದ್ದರು. ಲೀಲ, ಆಗಾಗ ಅವರಿಗೆ ಸಣ್ಣ ಪುಟ್ಟ ಕೆಲಸಗಳನ್ನು ವಹಿಸಿಕೊಡುತ್ತಿದ್ದಳು. ಅವರು ಬಾವಿಯಿಂದ ನೀರು ತಂದರು, ಚಹಾ ಮಾಡಿದ ಪಾತ್ರೆಗಳನ್ನು ತೊಳೆದರು, ಅಡುಗೆಗಾಗಿ ಅಕ್ಕಿಯನ್ನು ತೊಳೆದರು. ಉರುವಲಿಗಾಗಿ ಕುರುಚಲು ಗಿಡಗಳನ್ನೂ, ಸುತ್ತಮುತ್ತ ಬಿದ್ದಿದ್ದ ಒಣಗಿದ ಕಡ್ಡಿಗಳನ್ನೂ ಆರಿಸಿದರು.

ಅಂತೂ ತಮಟೆಯನ್ನು ಬಡಿಯುವ ಸದ್ದು ಹತ್ತಿರದಲ್ಲಿ ಕೇಳಿ ಬರಲಾರಂಭಿಸಿತು. ಅಂದರೆ ವೈದ್ಯ ಹತ್ತಿರಕ್ಕೆ ಬಂದಿರುವುದು ಅವರಿಗೆ ಗೊತ್ತಾಯಿತು. ಅವನ ಹಿಂದೆ ಚಿಕ್ಕದಾದ ಕುಬ್ಜ ಹಸುವೊಂದು ಬರುತ್ತಿತ್ತು. ಅದರ ಕತ್ತಿಗೆ ಅಲಂಕಾರಿಕ ಕುಚ್ಚನ್ನೂ ಮಣಿಗಳ ಸರವನ್ನೂ ಹಾಕಲಾಗಿತ್ತು. ಅದರ ಡುಬ್ಬದ ಮೇಲೆ ಕಸೂತಿ ಕೆಲಸದ ವಸ್ತ್ರವನ್ನು ಹೊದಿಸಲಾಗಿತ್ತು. ಅವನು ಹುಲ್ಲಿನ ಕಂತೆಗಳನ್ನು ಜನರಿಗೆ ಕೊಡುತ್ತಿದ್ದನು. ಜನ ಅದನ್ನು ಕೊಂಡು ಹಸುವಿಗೆ ತಿನ್ನಿಸುತ್ತಿದ್ದರು. ಹಸುವಿಗೆ ಮೇವು ಹಾಕುವುದು ಒಂದು ಪುಣ್ಯದ ಕಾರ್ಯವೆಂದು ಜನ ತಿಳಿದಿದ್ದರು. ಇದರಿಂದಾಗಿ ಅವನಿಗೆ ಸ್ವಲ್ಪ ಹಣ ಲಭಿಸಿದರೂ ಅದು ಸಾಕಾಗುತ್ತಿರಲಿಲ್ಲ. ಆದ್ದರಿಂದ ಅವನು ಕಾಡಿನಲ್ಲಿ ದೊರೆಯುವ ಗಿಡಮೂಲಿಕೆಗಳಿಂದ ಔಷಧಗಳನ್ನು ತಯಾರಿಸಿ, ಹಸುವನ್ನು ಹಳ್ಳಿಹಳ್ಳಿಗೆ ಕರೆದುಕೊಂಡು ಹೋದಾಗ ಆ ಔಷಧಗಳನ್ನು ಮಾರುತ್ತಿದ್ದ. ಕೆಲವು ಸಲ ರೋಗಿಗಳಿಗೆ ತಾನೇ ಅದನ್ನು ನೀಡುತ್ತಿದ್ದ. ಅವನು ಚಾಲಾಕಿ ಮನುಷ್ಯನಾಗಿದ್ದ. ಪುಡಿಗಳು ಮತ್ತು ಗುಳಿಗೆಗಳನ್ನು ತನ್ನ ಬಿಳಿ ಧೋತಿಯಲ್ಲಿ ಕಟ್ಟಿದ್ದ ಚೀಲದಲ್ಲಿ ಇಲ್ಲವೆ ತನ್ನ ಕಡುಗೆಂಪು ರುಮಾಲಿನಲ್ಲಾಗಲೀ ಇಟ್ಟುಕೊಂಡಿರುತ್ತಿದ್ದ. ಕುರು, ಕಜ್ಜಿ, ನೋವುಗಳು ಮತ್ತು ಜ್ವರ ಮುಂತಾದ ರೋಗಗಳಿಗೆ ಚಿಕಿತ್ಸೆ ನೀಡುತ್ತಿದ್ದ. ತನ್ನ ಪುಡಿಗಳಿಂದ ಗುಣವಾಗದಂತಹ ಉಲ್ಬಣ ರೋಗಿಗಳಿಗೆ, ಅಂದರೆ ಬುದ್ಧಿಮಾಂದ್ಯರು, ದುಃಖಿಗಳು ಮತ್ತು ಸಾಯುವ ಸ್ಥಿತಿಯಲ್ಲಿರು-ವವರಿಗಾಗಿ ವಿಶೇಷ ಪೂಜೆಗಳನ್ನು ಮಾಡುತ್ತಿದ್ದ. ಇದರಿಂದ ಅವನಿಗೆ ಮಂತ್ರವಾದಿ, ಮಾಟಗಾರ ಎಂಬ ಕೀರ್ತಿಯೂ ಬಂದಿತ್ತು. ಅವನು ಹತ್ತಿರ ಬರುತ್ತಿರುವುದರ ಶಬ್ದ ಕೇಳಿ ಹುಡುಗಿಯರು ಹೆದರಿ ನಡುಗುತ್ತಿದ್ದರು.

ಕೊರಕಲ ಮೇಲಿನ ದಿಮ್ಮಿಯನ್ನು ಹತ್ತಿ ಬಂದಾಗ, ಕೊಂಬಿನಿಂದ ಮಾಡಿದ ಕಹಳೆಯನ್ನು ಮೇಲಕ್ಕೆತ್ತಿ ಮತ್ತೊಮ್ಮೆ ಜೋರಾಗಿ ಊದಿದ. ಅದು ಯಾತರ ಕೊಂಬು? ಹುಡುಗಿಯರಿಗೆ ಹೆದರಿಕೆಯಾಗಿತ್ತು.

ಲೀಲ ಮನೆಯೊಳಗಿನಿಂದ ಹೊರಗೆ ಧಾವಿಸಿ ಬಂದಳು. ಪವಿತ್ರ ಹಸುವಿನ ಮೇಲೆ ಪಿಂಟೊ ಹಾರದಂತೆ ತಡೆಯಲು ಬೇಲ ಮತ್ತು ಕಮಲ ಅದನ್ನು ಬಲವಾಗಿ ಹಿಡಿದು ಕೊಂಡಿದ್ದರು. ಸಮೀಪ ಹೋಗಿ ಆ ಕುಬ್ಜ ಹಸುವನ್ನು ನೋಡಬೇಕೆಂದು ಅವರಿಗೆ ಆಸೆಯಾಗಿತ್ತು. ಆದರೆ ಆ ಮನುಷ್ಯನೊಡನೆ ಮಾತನಾಡುವಾಗ ಪಿಂಟೊವನ್ನು ದೂರವಿಟ್ಟಿರುವಂತೆ ಲೀಲ ಅವರಿಗೆ ಎಚ್ಚರಿಸಿದ್ದಳು.

''ನಮ್ಮ ತಾಯಿ ಅಸ್ವಸ್ಥಳಾಗಿದ್ದಾಳೆ. ದೀರ್ಘ ಕಾಲದಿಂದ ಅವಳು ಕಾಯಿಲೆ ಬಿದ್ದಿದ್ದಾಳೆ. ಈಗ ಅವಳಿಗೆ ಜ್ವರ ಸಹ ಬಂದಿದೆ. ಜ್ವರಕ್ಕೆ ನಿನ್ನಲ್ಲಿ ಯಾವುದಾದರೂ ಔಷಧವಿದೆಯಾ? ಅವಳು ಚೇತರಿಸಿಕೊಳ್ಳುವಂತೆ ಮಾಡಲು ನಿನ್ನಲ್ಲಿ ಯಾವುದಾದರೂ ಮದ್ದಿದೆಯೆ? ಆಕೆ ತುಂಬ ನಿತ್ರಾಣಳಾಗಿದ್ದಾಳೆ'' ಎಂದು ಲೀಲ ಹೇಳಿದಳು.

''ನಿಧಾನ, ನಿಧಾನ ಮಗಳೆ. ಆತುರವೇನು? ಮೊದಲು ನನ್ನ ಹಸುವಿಗೆ ನೀರು ಬೇಕು, ಸ್ವಚ್ಛವಾದ ಬಾವಿಯ ನೀರು. ನಂತರ ಅದಕ್ಕೆ ಹುಲ್ಲು ಬೇಕು, ಎಳೆಯ ತಾಜಾ ಹುಲ್ಲು. ಆನಂತರ ನಾನು ಬಂದು ನಿನ್ನ ತಾಯಿಯನ್ನು ನೋಡುತ್ತೇನೆ.''

ಹೀಗೆ ಮಾಡಬೇಕಾದ ಕಾರ್ಯಗಳ ವಿಧಾನವನ್ನು ತಿಳಿಸಿದ. ಹಸುವಿಗೆ ಉಪಚಾರವಾದ ನಂತರ, ಲೀಲ ಅವನಿಗಾಗಿ ತಯಾರಿಸಿದ ಚಹವನ್ನು ಪ್ಲಮ್ ಮರದ ಕೆಳಗೆ ಹಾಕಿದ್ದ ಹಗ್ಗದ



ಮಂಚದ ಮೇಲೆ ಕುಳಿತು ಕುಡಿಯಲಾರಂಭಿಸಿದ. ಹುಡುಗಿಯರು ಅವನ ಮುಂದೆ ನಿಂತು ತಮ್ಮ ತಾಯಿ ದಿನದಿನಕ್ಕೂ ಹೇಗೆ ದುರ್ಬಲಳಾಗುತ್ತಿದ್ದಾಳೆ, ಆಹಾರವನ್ನೂ ಹೇಗೆ ನಿರಾಕರಿಸುತ್ತಿದ್ದಾಳೆ, ಏಳಲಾಗದಷ್ಟು ಹೇಗೆ ನಿಶ್ಶಕ್ತಳಾಗಿದ್ದಾಳೆ ಎಂಬುದನ್ನು ವಿವರಿಸಿದರು. ಸಮಾಧಾನದಿಂದ ಮಾತನಾಡಲಾಗದೆ ಲೀಲ ಹಠಾತ್ತನೆ ಅಳುತ್ತಾ, ''ಈಗಂತೂ ಅವಳಿಗೆ ತುಂಬ ಜ್ವರ'' ಅಂದಳು.

ಅವನು ಚುರುಕಾದ ಮತ್ತು ತೀಕ್ಷ್ಣವಾದ ತನ್ನ ಕಣ್ಣುಗಳಿಂದ ಅವಳನ್ನು ನೋಡಿದ.

ಅವಳ ಮನಸ್ಸಿಗೆ ಎಷ್ಟು ನೋವಾಗಿದೆಯೆಂಬುದನ್ನು ಅರಿತ. ಅವನು ಬೇಗ ಎದ್ದು ಕಾರ್ಯತತ್ಪರನಾದ. ತಮ್ಮ ನಿರೀಕ್ಷೆಗೆ ಅನುಗುಣವಾಗಿ ಅವನು ತಮ್ಮ ತಾಯಿಯನ್ನು ನೋಡಲು ಎದ್ದಾಗ ಅವರಿಗೆ ಅಚ್ಚರಿಯುಂಟಾಯಿತು. ಗುಡಿಸಿಲ ಹೊಸ್ತಿಲ ಮೇಲೆ ಬೆಂಕಿಯನ್ನು ಮಾಡುವಂತೆ ಆಜ್ಞಾಪಿಸಿದ. ತದೇಕ ದೃಷ್ಟಿಯಲ್ಲಿ ಅವರನ್ನು ನೋಡುತ್ತಾ, ನಿರ್ದಿಷ್ಟ ರೀತಿಯ ಉರುವಲು ಮತ್ತು ಕಡ್ಡಿಗಳನ್ನು ಬೆಂಕಿಯ ಸುತ್ತ ಇಡುವಂತೆ ತಿಳಿಸಿದ. ಅವು ಚಿಟಚಿಟ ಶಬ್ದಮಾಡುತ್ತಾ ಹೊಗೆಯನ್ನು ಕಾರಲಾಂಭಿಸಿದಾಗ, ಹಸುವಿನ ಬೆನ್ನಿಗೆ ನೇತು ಹಾಕಿದ್ದ ಚೀಲದಿಂದ ಹೂವಿನ ಪೊಟ್ಟಣಗಳನ್ನು ತೆಗೆದು, ಅವರ ಮೇಲೆ ಹಾಕಿದ. ಜಾಜಿ, ಮಲ್ಲಿಗೆ, ದಾಸವಾಳ, ಚೆಂಡುಹೂ ಮುಂತಾದ ಹೂಗಳು ಆ ಪೊಟ್ಟಣದಲ್ಲಿದ್ದವು. ಹಾಡಿನ ರೀತಿಯಲ್ಲಿ ಸಂಸ್ಕೃತದ ಉದ್ದನೆಯ ಪ್ರಾರ್ಥನೆಯನ್ನು ಗುನುಗಿದ. ಪ್ರಾರ್ಥಿಸುತ್ತಿ-ದ್ದಾಗ ಬೆಂಕಿ ಚಟ ಚಟನೆ ಉರಿಯಲಾರಂಭಿಸಿತು. ಮೂವರು ಹುಡುಗಿಯರೂ, ಬೆಂಕಿಯ ಸುತ್ತ ಗಲ್ಲಕ್ಕೆ ಕೈಕೊಟ್ಟು ಕುಳಿತಿದ್ದರು. ಬೆಂಕಿ ನಂದಿದಾಗ, ದೊಡ್ಡ ಕೋಲನ್ನು ಬೂದಿಯ ಮೇಲಿಟ್ಟು ಅದು ಆರುವಂತೆ ಕೆದರಿ, ನಂತರ ಹರಡಿದ ಬೂದಿಯನ್ನು ಗೋರಿ, ಬಟ್ಟಲಾಕಾರದ ತನ್ನ ಹಸ್ತದಲ್ಲಿ ತೆಗೆದುಕೊಂಡು, ನೀರು ತರುವಂತೆ ಹೇಳಿದ. ಪಾತ್ರೆಯಲ್ಲಿ ಅವರು ನೀರು ತಂದರು. ಸ್ವಲ್ಪ ನೀರನ್ನು ತನ್ನ ಹಸ್ತದ ಮೇಲೆ ಸುರಿದುಕೊಂಡು, ಹೆಬ್ಬೆರಳು ಮತ್ತು ತೋರುಬೆರಳಲ್ಲಿ ಬೂದಿಯನ್ನು ಆ ನೀರಿನಲ್ಲಿ ಕಲಸಿದ. ನಂತರ ಅವರ ತಾಯಿಯನ್ನು ನೋಡಲು ಹೊರಟ.

ತಾಯಿ ಕಣ್ಣುಗಳನ್ನು ಮುಚ್ಚಿಕೊಂಡು ಮಗ್ನುಲಾಗಿ ಮಲಗಿದ್ದಳು. ಅವಳನ್ನುದ್ದೇಶಿಸಿ ಅವನು ಜೋರಾಗಿ ಮಾತನಾಡಿದಾಗ ಅವಳು ಭಯದಿಂದ ತಿರುಗಿ, ಕಣ್ಣುಬಿಟ್ಟಳು. ಲೀಲ, ಅವಳ ಹಣೆಯ ಮೇಲೆ ಕೈಯಿಟ್ಟು ಸಾಂತ್ವನದಿಂದ ಮಾತನಾಡಿದಳು. ಬಾಯಿ ತೆರೆದು ನಾಲಗೆಯನ್ನು ಹೊರಚಾಚುವಂತೆ ಅವನು ಹೇಳಿದ. ಅವಳು ಅದೇ ರೀತಿ ಮಾಡಿದಳು. ''ತಿನ್ನು ತಂಗಿ'' ಅವನು ಹೇಳಿದ, ''ಇದು ಪವಿತ್ರವಾದ ಭಸ್ಮ. ಶುದ್ಧೀಕರಿಸಿದ ಭಸ್ಮ. ಇದು ನಿನ್ನ ದೇಹದ ಒಳಭಾಗವನ್ನೂ ಶುದ್ಧೀಕರಿಸುತ್ತದೆ. ಜ್ವರವನ್ನು ಸೃಷ್ಟಿಸಿದ ಭೂತಗಳನ್ನು ಅದು ಹೊರಗಟ್ಟುತ್ತದೆ. ನುಂಗು.'' ಅವನು ತನ್ನ ಬೆರಳುಗಳಿಂದ ಭಸ್ಮವನ್ನು ಸಣ್ಣ ಗುಳಿಗೆಗಳಾಗಿ ಮಾಡಿ, ಅವಳ ಬಾಯೊಳಗೆ ಹಾಕುತ್ತಾ ನುಂಗಿಸಿದ. ನಂತರ ಚಪ್ಪಾಳೆ ತಟ್ಟಿ, ಜೋರಾಗಿ ಪ್ರಾರ್ಥನೆ ಮಾಡಿ ಹೊರಗೆ ನಡೆದ.

ಆಶ್ಚರ್ಯದಿಂದ ಹುಡುಗಿಯರು ಅವನನ್ನು ಹಿಂಬಾಲಿಸಿದರು.

''ಆ ಭಸ್ಮವನ್ನೆಲ್ಲಾ ಗುಡಿಸಿ, ಒಟ್ಟು ಮಾಡಿ, ಅದನ್ನು ನನ್ನಲ್ಲಿಗೆ ತನ್ನಿ'' ಎಂದು ಆಜ್ಞಾಪಿಸಿದ. ಅವರು ಅಂತೆಯೇ ಮಾಡಿದರು. ತನ್ನ ಚೀಲದಿಂದ ಕೆಲವು ಎಲೆಗಳನ್ನು ತೆಗೆದು, ಭಸ್ಮವನ್ನು ಆ ಎಲೆಗಳ ಮೇಲೆ ಹಾಕುವಂತೆ ಹೇಳಿದ. ನಂತರ ಎಲೆಯನ್ನು ಸುರುಳಿ ಮಾಡಿ, ತನ್ನ ರುಮಾಲಿನಿಂದ ಒಂದು ದಾರ ಎಳೆದು, ಆ ಸುರುಳಿಗಳನ್ನು ಅದರಲ್ಲಿ ಕಟ್ಟಿದ. ''ಇಗೋ ತೆಗೆದುಕೊಳ್ಳಿ'' ಅದನ್ನು ಹುಡುಗಿಯರಿಗೆ ಕೊಡುತ್ತಾ ಹೇಳಿದ, ''ಈ ಪೈಕಿ ಒಂದು ಪೊಟ್ಟಣವನ್ನು ಅವಳ ತಲೆದಿಂಬಿನ ಕೆಳಗಿಡಿ. ಅದು ಜ್ವರದ ಪಿಶಾಚಿಯನ್ನು ಹೊರ ಹಾಕುತ್ತದೆ. ಉಳಿದ ಒಂದೊಂದನ್ನು ನಿಮ್ಮ ತಲೆದಿಂಬುಗಳ ಕೆಳಗೆ ಇಟ್ಟುಕೊಳ್ಳಿ. ಇದರಿಂದಾಗಿ ನೀವು ಪಿಶಾಚಿಗಳಿಂದ ಸುರಕ್ಷಿತರಾಗಿರುತ್ತೀರಿ. ನಾನು ಅದನ್ನು ಪವಿತ್ರಗೊಳಿಸಿದ್ದೇನೆ. ಹರಿ

ಓಂ, ಹರಿ ಓಂ, ಹರಿ ಓಂ'' ಹಠಾತ್ತನೆ ಅವನು ಜೋರಾಗಿ ಗರ್ಜಿಸಿ ತನ್ನ ಕಹಳೆಯನ್ನು ದೀರ್ಘವಾಗಿ ಊದಿದ. ಆಗ, ಕಂಬವೊಂದಕ್ಕೆ ಕಟ್ಟಿದ್ದ ಪಿಂಟೊ ಜೋರಾಗಿ ಬೊಗಳಿತು.

ಕಹಳೆಯನ್ನು ಕೆಳಗಿಳಿಸಿ, ಹುಡುಗಿಯರ ಮುಖಗಳನ್ನು ದುರುಗುಟ್ಟಿ ನೋಡಿದ. ಅವನ ಮುಖ ಕಠೋರವಾಗಿತ್ತು. ಹೊಗೆಸೊಪ್ಪಿನ ಸೇವನೆಯಿಂದ ಬ್ರಷ್‌ನಂತೆ ಒರಟಾಗಿದ್ದ ಅವನ ಮೀಸೆಯ ಕೂದಲನ್ನು ಅವರು ನೋಡಿದರು. ''ಹೂಂ, ಹೀಗೇನು ನೋಡುತ್ತೀರಿ? ಬಿರುಗಣ್ಣಿನಿಂದ ನನ್ನ ಮುಖವನ್ನೇ ನೋಡುತ್ತಾ ಕುಳಿತಿರುತ್ತೀರಾ? ಅದರಿಂದ ನನ್ನ ಹೊಟ್ಟೆ ತುಂಬುವುದೆಂದು ಭಾವಿಸಿದ್ದೀರಾ? ಅಥವಾ ನಾನು ಎಲ್ಲವನ್ನೂ ಬಿಟ್ಟಿ ಮಾಡುತ್ತೇನೆಂದು ತಿಳಿದಿದ್ದೀರಾ?''

ಲೀಲ ಅಪರಾಧಿಯಂತೆ ಮೈಕೊಡವಿ ಎದ್ದು ಗುಡಿಸಿಲೊಳಗೆ ಓಡಿ ಹೋದಳು. ಬೇಲ ಮತ್ತು ಕಮಲ ಅವಳು ಹೋದ ಕಡೆಯೇ ನೋಡಿದರು. ಮನೆಯಲ್ಲಿ ಸ್ವಲ್ಪವೂ ಹಣವಿಲ್ಲವೆಂಬುದು ಅವರಿಗೆ ಗೊತ್ತಿತ್ತು. ಲೀಲ ಹೊರಗೆ ಬಂದಾಗ ಮುಷ್ಠಿಯಲ್ಲೇನೋ ಹಿಡಿದುಕೊಂಡಿದ್ದಳು.

ಅದು ತನ್ನ ತಾಯಿಯ ಉಂಗುರ. ಅಸ್ವಸ್ಥಳಾದ ಮೇಲೆ ಕನ್ನಡಿಯ ಹಿಂದೆ ಇಟ್ಟಿದ್ದಳು. ಉಂಗುರ ಕಂಡು ಹುಡುಗಿಯರು ಅಚ್ಚರಿಯಿಂದ ಬಾಯ್ತೆರೆದರು. ಆದರೆ ಆ ಮನುಷ್ಯ ಲೀಲಳ ಕೈಯಿಂದ ಕಸಿದುಕೊಂಡು, ಅದನ್ನು ಸೂಕ್ಷ್ಮವಾಗಿ ನೋಡಿ, ಜೇಬಿಗೆ ಹಾಕಿ, ಕೃತಜ್ಞತೆಯ ಒಂದೇ ಒಂದು ಮಾತನ್ನೂ ಆಡದೆ ತನ್ನ ಹಸುವಿನೊಡನೆ ಹೊರಟ.

ಅವನು ತನ್ನ ತಮಟೆಯನ್ನು ಬಡಿದು ದೀರ್ಘವಾದ ಮತ್ತು ವಿಚಿತ್ರ ಶಬ್ದವನ್ನು ಹೊರಡಿಸುತ್ತಾ ಆಗಾಗ ಕಹಳೆ ಊದುತ್ತಾ ಆಕಾಶದತ್ತ ತಲೆಯೆತ್ತಿ, ''ಹರಿ ಓಂ, ಹರಿ, ಓಂ'' ಎಂದು ಕೂಗುತ್ತಿದ್ದ. ಆಗ ಪಕ್ಷಿಗಳು ಹೆದರಿ, ಹಾರಿ ಅವನು ಕಣ್ಮರೆಯಾಗಿ ಶಬ್ದ ಕೊನೆಗೊಳ್ಳುವ ತನಕ ಕೂಗುತ್ತಾ, ಸುತ್ತಿಸುತ್ತಿ ಹಾರಾಡುತ್ತಿದ್ದವು.

ಹುಡುಗಿಯರು ತಮ್ಮ ಕೈಯಲ್ಲಿದ್ದ ಎಲೆಯ ಪೊಟ್ಟಣಗಳನ್ನು ದಿಟ್ಟಿಸಿ ನೋಡುತ್ತಿದ್ದರು. ''ಇವುಗಳನ್ನು ನಾವು ಏನು ಮಾಡಬೇಕು?'' ಬೇಲ ಮತ್ತು ಕಮಲ ಕೇಳಿದರು.

ಅದನ್ನು ಕಿತ್ತು ಹಾಕುವಳೋ, ಇಲ್ಲವೆ ಬಿಸಾಕುವಳೋ ಎಂಬಂತೆ ಲೀಲ ಕೈಲಿದ್ದ ಪೊಟ್ಟಣವನ್ನು ಬಿಗಿಯಾಗಿ ಹಿಡಿದಳು. ''ನಾವೇನು ಮಾಡಬೇಕು?'' ಅವಳು ಕೇಳಿದಳು. ''ಹೂಂ, ನಾವೇನೂ ಮಾಡಲಾರೆವು. ಅವನು ಹೇಳಿದಂತೇ ಮಾಡಬೇಕು. ಅಮ್ಮನನ್ನು ಕರೆದೊಯ್ಯಲು ಹಳ್ಳಿಯಲ್ಲಿ ಯಾವ ಆಸ್ಪತ್ರೆಯೂ ಇಲ್ಲ. ಯಾವ ವೈದ್ಯನೂ ಬರುವುದಿಲ್ಲ. ಈ ಮಂತ್ರವಾದಿಯನ್ನು ಬಿಟ್ಟು ನಮಗೆ ಸಹಾಯ ಮಾಡುವವರು ಮತ್ತಾರೂ ಇಲ್ಲ. ಬರೀ ಮಾಯಾಜಾಲ!'' ಕೋಪದಿಂದ ಅವಳು ನುಡಿದು, ಆ ಮನುಷ್ಯ ಹೇಳಿದಂತೆಯೇ ಮಾಡುವ ಸಲುವಾಗಿ ಗುಡಿಸಿಲಿನೊಳಗೆ ಹೋದಳು.

***

ಈ ಸಂಗತಿಗಳಿಂದ ಹುಡುಗಿಯರು ಸಾಕಷ್ಟು ಹೆದರಿದ್ದರು. ಆದರೆ ಇಂದು ಅವರಿಗೆ ಕೇಡಿನ ದಿನವಾಗಿತ್ತು. ಇನ್ನೂ ಹೆಚ್ಚು ಭಯ ಮತ್ತು ದಿಗ್ಭ್ರಮೆಯನ್ನು ಅವರು ಎದುರಿಸ-ಬೇಕಾಗಿತ್ತು.

ಮಧ್ಯಾಹ್ನ ಅವರು ಗುಡಿಸಿಲಿನ ತಣ್ಣನೆ ನೆಲದಲ್ಲಿ ಚಾಪೆಯ ಮೇಲೆ ಮೈ ಚಾಚಿ

ಮಲಗಿ ಜೊಂಪಿನಲ್ಲಿದ್ದಾಗ ಪಿಂಟೊವಿನ ಹಠಾತ್ ಬೊಗಳುವಿಕೆ ಹಾಗೂ ಸಮೀಪದ ಇತರ ನಾಯಿಗಳು ಕೂಗಾಟದಿಂದ ಎಚ್ಚರಗೊಂಡರು.

ಕಮಲ ಹುಷ್ ಎಂದು ಪಿಂಟೊವನ್ನು ಸುಮ್ಮನಿರಿಸಲು ಯತ್ನಿಸಿದಳು. ಆದರೆ ಹೊರಗೆ ನಾಯಿಗಳು ಬೊಗುಳುವುದು ಜೋರಾಯಿತು. ಪಿಂಟೊವನ್ನು ತಡೆಯುವುದು ಅವಳಿಗೆ ಸಾಧ್ಯವಾಗಲಿಲ್ಲ. ಅವಳಿಂದ ಕಿತ್ತುಕೊಂಡು ಅದು ಹೊರಗೋಡಿತು. ಅವಳೂ ಹಿಂದೆಯೇ ಹೋದಳು. ವರಾಂಡದ ಛಾವಣಿಯ ಮೇಲೆ ಹಾಸಿದ್ದ ಚಿಂದಿಯಾಗಿ ಜೋತುಬಿದ್ದ ತೆಂಗಿನ ಗರಿ ಚಾಪೆಯ ಕೆಳಗೆ ನಿಂತು, ಮಧ್ಯಾಹ್ನದ ಬಿಸಿಲಿನಲ್ಲಿ, ಅದೇನೆಂದು ನೋಡಿದಳು. ಜನರು, ಬೀದಿ ನಾಯಿಗಳ ಗುಂಪು, ಕೊರಕಲ ಸುತ್ತಮುತ್ತಲಿದ್ದ ದಟ್ಟವಾದ ಪೊದೆಯ ಮೇಲೆ ದಾಳಿಯಿಟ್ಟಂತಿತ್ತು. ಪೊದೆಯೊಳಗಿದ್ದ ಕೋಳಿಗಳು, ಕ್ರೌಂಚ ಪಕ್ಷಿಗಳು, ಮಿಂಚುಳ್ಳಿಗಳು, ಹೇರಾನ್ ಪಕ್ಷಿಗಳು ಹೆದರಿ ಹಾರಿ ಹೋಗುತ್ತಿದ್ದವು. ಬೇಟೆಗಾರರಂತೆ ಜನರು ಅರಚಾಡುತ್ತಾ, ಗಿಡಗಳನ್ನು ತುಳಿದು ಹಾಕುತ್ತಾ, ಸರ್ವೆಮರದ ಕೊಂಬೆಗಳನ್ನು ಕೀಳುತ್ತಾ, ತಮ್ಮ ಉದ್ದನೆಯ ಕೋಲುಗಳಿಂದ ಹುಲ್ಲನ್ನೂ, ಪೊದೆಯನ್ನೂ ಬಡಿಯುತ್ತಿದ್ದರು. ಈ ಹೊತ್ತಿನಲ್ಲಿ ಸಾಮಾನ್ಯ-ವಾಗಿ ಮರಳ ದಂಡೆಯ ಮೇಲೆ ಮೈಚಾಚಿ ಮಲಗಿರುತ್ತಿದ್ದ ಬೀದಿನಾಯಿಗಳು ಉದ್ವೇಗ-ಗೊಂಡು ಬೊಗಳುತ್ತಿದ್ದವು. ಎಂದಿನಂತೆ ಅವುಗಳನ್ನು ದೊಣ್ಣೆಯಿಂದ ಹೊಡೆದಟ್ಟದೆ, ಬೇಟೆಯಲ್ಲಿ ಅವನ್ನೂ ಉಪಯೋಗಿಸಿಕೊಳ್ಳಲಾಗಿತ್ತು.

''ಅವರೇನು ಮಾಡುತ್ತಿದ್ದಾರೆ?'' ಮೆತ್ತಗೆ ಹೊರಗೆ ಬಂದು, ಅಕ್ಕನ ಪಕ್ಕದಲ್ಲಿ ಭಯದಿಂದ ನೋಡುತ್ತಾ ನಿಂತ ಬೇಲ ಕೇಳಿದಳು.

''ನನಗೆ ಗೊತ್ತಿಲ್ಲ'' ಕಮಲ ಪಿಸುಗುಟ್ಟಿದಳು. ''ಅವರ ಹುಯಿಲು ಕೇಳಿದರೆ ಅಲ್ಲೊಂದು ಆನೆಯಿರಬಹುದು, ಇಲ್ಲವೆ ನರಭಕ್ಷಕ ಹುಲಿಯಿರಬಹುದು ಅನಿಸುತ್ತದೆ. ಬಹುಶಃ ನಾಗರ ಹಾವಿರಬೇಕು'' ಬೇಲ ಹೆದರಿಕೆಯಿಂದ ನಡುಗಿದಳು.

''ಅಗೋ ! ಪಿಂಟೊವನ್ನು ನೋಡು !'' ಅವಳು ಸರ್ರನೆ ಕೂಗಿದಳು.

''ಪಿಂಟೊ ಅವುಗಳ ಜೊತೆ ಸೇರಿದೆ, ಅದನ್ನು ಹಿಡಿ.''

ಕಮಲ ಹಾದಿಯಲ್ಲಿ ಹಿಂದೆ ಓಡಿದಳು. ಜನ ಕಲ್ಲಿನಿಂದಲೋ ದೊಣ್ಣೆಯಿಂದಲೋ ಪಿಂಟೊವಿಗೆ ಹೊಡೆಯುವುದು, ಇತರ ನಾಯಿಗಳು ಅದಕ್ಕೆ ಕಚ್ಚುವುದನ್ನು ತಪ್ಪಿಸುವುದು ಅವಳ ಉದ್ದೇಶವಾಗಿತ್ತು.

ಕೊರಕಲ ಪಕ್ಕದಲ್ಲಿ ಅವಳು ಪಿಂಟೊವನ್ನು ಹಿಡಿದಳು. ತುಳಿದಾಡಿದ್ದರಿಂದ ಆ ಜಾಗ ಹಸಿಯಾಗಿತ್ತು. ತುಳಿದವರ ಹೆಜ್ಜೆಗಳಿಂದ ಕೆಸರು ಒಸರುತ್ತಿತ್ತು. ಬೇಟೆಗಾರರ ತಂಡವು ಸರ್ವೆಮರದ ಸುತ್ತ ಒತ್ತಾಗಿ ನಿಂತಿತ್ತು. ಅತ್ಯಂತ ಕೋಲಾಹಲದಿಂದ ಅವರು ತಮ್ಮ ಕೋಲುಗಳನ್ನು, ತಮ್ಮ ಬೇಟೆಯ ಮೇಲೆ ರಭಸದಿಂದ ಬಡಿಯುತ್ತಿದ್ದರು. ನಾಯಿಗಳು ರೋಷಾವೇಶದಿಂದ ಎಗರಾಡುತ್ತಿದ್ದವು.

ಈ ದೃಶ್ಯದಿಂದ ಭಯ ಮತ್ತು ದಿಗ್ಭ್ರಮೆಯಾಗಿದ್ದಾಗ್ಯೂ, ತುಂಬ ಕುತೂಹಲಗೊಂಡಿದ್ದ ಕಮಲ, ಒಂದು ಕಾಲಿನಿಂದ ಇನ್ನೊಂದು ಕಾಲನ್ನು ತಿಕ್ಕಿಕೊಳ್ಳುತ್ತಾ ವೃತ್ತದ ಹೊರ ತುದಿಯಲ್ಲಿ ನಗುತ್ತಾ ನಿಂತಿದ್ದ ವೃದ್ಧನೊಬ್ಬನನ್ನು ಕೇಳಿದಳು, ''ಅದೇನು? ಅವರೇನು ಹಿಡಿದಿದ್ದಾರೆ?''

''ಅಗೋ ನೋಡು, ಅಲ್ಲಿ ನೋಡು'' ನಾಯಿಗಳು ಛಿದ್ರಮಾಡಿದ್ದ, ಜನ ಅವುಗಳ

ಬಾಯಿಂದ ಕಸಿದುಕೊಂಡು ದೊಡ್ಡ ಪ್ರಶಸ್ತಿಯೇನೊ ಎಂಬಂತೆ ಗಳುವೊಂದರ ತುದಿಗೆ ಸಿಕ್ಕಿಸಿದ್ದ, ಪ್ರಾಣಿಯನ್ನು ತೋರಿಸುತ್ತಾ ಆ ವೃದ್ಧ ಹರ್ಷದಿಂದ ನಗಲಾರಂಭಿಸಿದ.

''ಓ!'' ಕಮಲ ಹತಾಶೆಯಿಂದ ತನ್ನ ಕೈಗಳನ್ನು ಬಿಗಿಹಿಡಿದು ಅಳುವ ದನಿಯಲ್ಲಿ ಹೇಳಿದಳು, ''ಅಯ್ಯೋ, ಅದೊಂದು ಚಿಕ್ಕ ಮುಂಗುಸಿ.''

ಆ ವೃದ್ಧ ಅವಳತ್ತ ತಿರುಗಿ ಕಣ್ಣರಳಿಸಿ ನೋಡಿ ಅವಳಿಗೆ ಹೇಳಿದ, ''ಅದು ದುಷ್ಟ ಜಂತು. ತುಂಬ ಕೆಟ್ಟದ್ದು. ಅದು ನಮ್ಮ ತೆಂಗಿನ ಕಾಯಿಗಳಿಂದ ನೀರು ಕುಡಿಯುತ್ತದೆ. ಎಳೆಕಾಯಿ, ಮರಗಳನ್ನು ಕಡಿದು ಹಾಕುತ್ತದೆ, ಕಾಯಿಗಳು ಒಣಗಿ ಕೆಳಗೆ ಬೀಳುತ್ತವೆ.''

ಆಶ್ಚರ್ಯಗೊಂಡ ಕಮಲ, ಪಿಂಟೊವಿನ ಕತ್ತು ಹಿಡಿದುಕೊಂಡು ಕೊರಕಲ ದಡದ ಮೇಲೆ ನಿಂತಿದ್ದಳು. ಪಾಪ, ಚಿಕ್ಕ, ನಿಸ್ಸಹಾಯಕ ಮುಂಗುಸಿ, ಅಂತಹ ಕೆಟ್ಟದ್ದನ್ನೇನೂ ಮಾಡಿರಲಿಲ್ಲವೆಂದೂ, ಅವರು ಎಸಗಿದ ಕೃತ್ಯ ತಪ್ಪೆಂದೂ ಅವಳು ಭಾವಿಸಿದಳು. ಅದು ಎಳೆನೀರು ಕುಡಿದು ತೆಂಗಿನಕಾಯಿ ಹಾಳುಮಾಡಿದರೂ ಹತ್ತಾರು ದೊಣ್ಣೆಗಳ ಸಮೂಹ, ದುಷ್ಟ ನಾಯಿಗಳ ಗುಂಪು ಮತ್ತು ಅರಚುತ್ತಿದ್ದ ಜನರ ತಂಡ ಅದರ ಮೇಲೆರಗುವ ಅಗತ್ಯವಿತ್ತೆ? ಆ ಪುಟ್ಟ ಪ್ರಾಣಿಯನ್ನು ಸಾಯಿಸಲು ಆ ಜನ ತೋರಿಸಿದ ಕ್ರೌರ್ಯ ಅವಳಿಗೆ ಭೀತಿಯುಂಟುಮಾಡಿತ್ತು.

ತಮ್ಮ ಮಹತ್ ಸಾಧನೆಯನ್ನು ಆಚರಿಸಲು ಮರಳ ದಂಡೆಯತ್ತ ಹೋಗುತ್ತಿದ್ದ ಜನರು ಮತ್ತು ನಾಯಿಗಳನ್ನು ನೋಡಿದ ಕಮಲ, ''ಬಾ ಪಿಂಟೊ, ಬಾ'' ಎಂದು ಕಣ್ಣೀರಿನೊಡನೆ ನಾಯಿಯನ್ನು ಕರೆಯುತ್ತಾ, ತನ್ನ ಮನೆಯತ್ತ ತಿರುಗಿದಳು.

* * *

ಸಂಜೆಯಾಗಿತ್ತು, ಹರಿ ಇನ್ನೂ ಬಂದಿರಲಿಲ್ಲ. ತಂದೆ ಹೋಗಿಯಾಗಿತ್ತು. ಹುಡುಗಿಯರು ತಾಯಿಯ ಕೊಠಡಿಯ ಬಳಿ ಕುಳಿತು ಆಕೆಗೇಕೆ ಜ್ವರ ಇನ್ನೂ ಇಳಿದಿಲ್ಲ ಎಂದು ಚಿಂತಿಸುತ್ತಿದ್ದರು. ಆಗ ಮತ್ತೊಬ್ಬ ಆಗಂತುಕ ದಟ್ಟವಾದ ಮತ್ತು ಕಡಿದಾದ ಬೇಲಿಯನ್ನೂ ಭೇದಿಸಿ ಬರುತ್ತಿದ್ದ. ಅವನ ಕಾಲ ಒದೆತಕೆ ಸಿಕ್ಕಿ, ಪೈನ್ ಮರದ ಒಣಗಿದ ಹಣ್ಣೊಂದು ಉರುಳಿ ಬರುತ್ತಿತ್ತು.

ಲೀಲ ಎದ್ದು ತನ್ನಿಬ್ಬರು ತಂಗಿಯರನ್ನು ದಾಟಿಕೊಂಡು ಹೊರಬಂದಾಗ ನೆರೆಯ ತೋಟದಲ್ಲಿ ವಾಸಿಸುತ್ತಿದ್ದ ಮೂವರು ಕುಡುಕರ ಪೈಕಿ ಒಬ್ಬ ಅಲ್ಲಿದ್ದುದನ್ನು ನೋಡಿದಳು. ಅವನು ಓಲಾಡುತ್ತಾ ನಡೆಯುತ್ತಿದ್ದ ರೀತಿ, ಕೆದರಿದ ತಲೆ ಮತ್ತು ಕೆಂಗಣ್ಣುಗಳನ್ನು ನೋಡಿದರೆ, ಸಂಜೆಯ ಬೆಳಕು ಇನ್ನೂ ಇದ್ದು, ಕಡಲು ಕಂದು ಬಣ್ಣದಲ್ಲಿದ್ದು ಇನ್ನೂ ಶಾಂತವಾಗಿದ್ದು ಗ್ರಾಮದ ಜನ ಕುಡಿಯಲು ಪ್ರಾರಂಭಿಸುವ ಸಮಯ ಇನ್ನೂ ಶುರುವಾಗಿಲ್ಲದಿದ್ದರೂ ಅವನು ಈಗಾಗಲೇ ಮತ್ತೇರುವಷ್ಟು ಕುಡಿದಿದ್ದನ್ನು ಕಾಣಬಹುದಿತ್ತು. ಆದರೆ ಅವರು ಮನೆಯಲ್ಲೇ ಹೆಂಡವನ್ನು ತಯಾರಿಸುತ್ತಿದ್ದುದರಿಂದ, ಇಡೀ ದಿನ ಮನೆಯಲ್ಲೇ ಕುಡಿಯುತ್ತಾ ಬಿದ್ದಿರುತ್ತಾನೆಂಬುದು ಲೀಲಳಿಗೆ ಗೊತ್ತಿತ್ತು. ಅವಳಿಗೆ ಭಯವಾಯಿತು.

''ಓ, ನೀನು, ಆ ಠಕ್ಕನ ಮಗಳು'' ತೂರಾಡುತ್ತಾ ಕೊರಕಲ ಮೇಲಿನ ದಿಮ್ಮಿಯ ಮೇಲೆ ನಿಂತಿದ್ದ ಅವನು ಆರ್ಭಟಿಸಿದ.

''ಎಲ್ಲಿ ನಿಮ್ಮಪ್ಪ, ಆ ಮೋಸಗಾರ?''

''ನಮ್ಮಪ್ಪ'' ಲೀಲ ಮೆಲ್ಲಗೆ ಹೇಳಿದಳು, ''ಅವನು... ಅವನು ಹೊರಗ ಹೋಗಿದ್ದಾನೆ.''

''ಹೊರಗೆ ಹೋಗಿದ್ದಾನೊ.... ಇಲ್ಲ ತನ್ನ ಹೆಂಡತಿಯ ಮಂಚದ ಕೆಳಗೆ ಅವಿತುಕೊಂಡಿದ್ದಾನೊ?..ನಾನೇ ಬಂದು.. ಅವನನ್ನು ಹೊರಗೆ ಎಳೆದು ಹಾಕಲಾ?''

ಲೀಲ ಮೆಲ್ಲಗೆ ಕಿರುಚಿದಳು. ಅವಳ ಹಿಂದೆ ಮರೆಯಾಗಿ ನಿಂತಿದ್ದ ಅವಳ ತಂಗಿಯರಿಂದ ಅದು ಪ್ರತಿಧ್ವನಿಸಿತು. ಪಿಂಟೊ ಅವನ ಮೇಲೆ ಎರಗದಂತೆ ಬಲವಾಗಿ ಹಿಡಿದುಕೊಂಡಿದ್ದರೂ ಬೊಗಳಲಾರಂಭಿಸಿತ್ತು. ''ಅವನು ಇಲ್ಲಿಲ್ಲ'' ಲೀಲ ಕಂಪಿಸುತ್ತಾ ಹೇಳಿದಳು, '' ಒಳಗೆ ಬರಬೇಡ ನಮ್ಮ ತಾಯಿ ಅಸ್ವಸ್ಥಳಾಗಿದ್ದಾಳೆ.''

''ಓ, ಒಳ್ಳೆಯದು... ತುಂಬ ಒಳ್ಳೆಯದು'' ಎಲೆ ಅಡಿಕೆ ರಸದಿಂದ ಕೆಂಪಾಗಿದ್ದ .ತನ್ನ ಹಲ್ಲುಗಳನ್ನು ಬಿಡುತ್ತಾ ಅವನು ಕಿಡಿಗೇಡಿತನದಿಂದ ನಕ್ಕ '' ಅಮ್ಮನಿಗೆ ಕಾಯಿಲೆ... ಅಪ್ಪ ಹೊರಗೆ.. ಚಿಕ್ಕ ಹುಡುಗಿಯರಿಗೆ ಏನೂ ತಿಳಿಯದು... ಕಡೆಯ ಪಕ್ಷ ಅವನು ದುಡ್ಡು ಎಲ್ಲಿಟ್ಟಿದ್ದಾನೆಂಬುದಾದರೂ ನಿನಗೆ ಗೊತ್ತಾ?'' ಸಿಂಹದಂತೆ ಅವನು ಹಠಾತ್ತನೆ ಗರ್ಜಿಸಿದ. ಲೀಲ ಹೆದರಿ ಹಿಂದಕ್ಕೆ ಹೆಜ್ಜೆಯಿಟ್ಟಳು.

''ದುಡ್ಡು?'' ತನ್ನ ಕೈಗಳನ್ನು ಹಿಸುಕಿಕೊಳ್ಳುತ್ತಾ ಹರಿ, ಬರಲೆಂದು ಆಶಿಸುತ್ತಾ ಅವಳು ಹೇಳಿದಳು, ''ನಮ್ಮಲ್ಲಿ ದುಡ್ಡಿಲ್ಲ.''

''ದುಡ್ಡಿಲ್ಲ.... ನಮ್ಮಲ್ಲಿ ದುಡ್ಡಿಲ್ಲ'' ಅವನು ಅವಳನ್ನು ಅಣಕಿಸಿದ, '' ಸೊಗಸಾದ ಉತ್ತರ. ನಿನ್ನಪ್ಪ, ಆ ದಗಾಕೋರ ನಿನಗೆ ಹೇಳಿಕೊಟ್ಟನೊ? ಅಪ್ಪನಂತೆಯೇ ಮಗಳೂ ಸಹ... ಸುಳ್ಳುಗಾರರ ಸಂತಾನ... ಏನೂ ಪ್ರಯೋಜನವಿಲ್ಲ, ಹಣವಿಲ್ಲ... ಹಿತವೂ ಇಲ್ಲ... ನೀವೆಲ್ಲರೂ ಅಷ್ಟೆ. ಆದರೆ ನಾನು ಅವನನ್ನು ಹಿಡಿಯುತ್ತೇನೆ, ನೋಡುತ್ತಿರಿ. ಅವನ ಕತ್ತನ್ನು ಮುರಿದು ಹಾಕುತ್ತೇನೆ, ಹಣ ವಸೂಲು ಮಾಡುತ್ತೇನೆ.''

ತಮ್ಮ ಮನೆಯ ಮುಂದೆ ಕೂಗಾಡುತ್ತಾ, ತೂರಾಡುತ್ತಾ, ಕೈಗಳನ್ನು ಬೀಸುತ್ತಾ ಬೈದಾಡುತ್ತಿದ್ದ ಮನುಷ್ಯನ ಬಗ್ಗೆ ತುಂಬ ಕೋಪಗೊಂಡ ಪಿಂಟೊ ಒಂದೇ ಸಮನೆ ಬೊಗುಳುತ್ತಾ, ಹುಡುಗಿಯರ ಹಿಡಿತದಿಂದ ತಪ್ಪಿಸಿಕೊಂಡು, ಲೀಲಳ ಪಕ್ಕದಿಂದ ಮುನ್ನುಗ್ಗಿ, ಹಾದಿಯಲ್ಲಿ ನಿಂತು, ತನ್ನ ಮುಂಗಾಲುಗಳಿಂದ ಮಣ್ಣನ್ನು ಕೆದಕುತ್ತಾ, ತನ್ನ ಹರಿತವಾದ ಹಲ್ಲುಗಳನ್ನು ತೋರುತ್ತಾ ಒಳ್ಳೆಯ ಕಾವಲು ನಾಯಿಯಂತೆ ಬೊಗಳಲಾರಂಭಿಸಿತು. ಅವನು ಆರ್ಭಟಿಸಿದ, ''ನಾಯಿಯನ್ನು ಹಿಂದಕ್ಕೆ ಕರೆಯಿರಿ, ದೂರ ಕಳಿಸದಿದ್ದರೆ ಅದನ್ನು ಸಾಯಿಸಿ-ಬಿಡುತ್ತೇನೆ.''

ಬೇಲ ಮತ್ತು ಕಮಲ ಒಟ್ಟಿಗೆ ಕುಡುಕನಿಂದ ಪಿಂಟೊವನ್ನು ರಕ್ಷಿಸಲು ಅದರ ಬಳಿಗೆ ಓಡಿದರು.ಯುದ್ಧಕ್ಕೆ ಸಿದ್ಧವಾಗಿರುವಂತೆ ಅವರೆಲ್ಲಾ ನಿಂತದ್ದನ್ನು ನೋಡಿ, ಲೀಲ ಅವರತ್ತ ಹೋಗುತ್ತಾ, ''ಪಿಂಟೊ... ಪಿಂಟೊ.. ಬಾ... ಬೇಲ ...ಬೇಲ, ಕಮಲ ಅದನ್ನು ಹಿಡಿಯಿರಿ. ಅದು ಕಚ್ಚುವುದಿಲ್ಲ... ಅದು ಕಚ್ಚುವುದಿಲ್ಲ'' ಅಂದಳು.

''ಅದೇನಾದರೂ ಕಚ್ಚಿದರೆ ... ನಾನು... ನಾನು''

ಆ ಮನುಷ್ಯ ಅರಚಿದ.

ಒಟ್ಟಿನಲ್ಲಿ ಈ ಗಲಾಟೆಯಿಂದ ಸ್ವಲ್ಪ ಒಳ್ಳೆಯದೇ ಆಯಿತು. ಅವನ ಮುದಿತಾಯಿ,

ಅಂದರೆ ಬೆಳಿಗ್ಗೆ ಅವರ ಮನೆಗೆ ಮಂತ್ರವಾದಿಯನ್ನು ಕಳಿಸಿದ್ದ ಮುದುಕಿ, ಗಲಭೆಯೇನೆಂದು ನೋಡಲು ಕುಂಟಿಕೊಂಡು ಬೇಲಿಯ ಸಮೀಪಕ್ಕೆ ಬಂದಳು. ಕುಡಿದು ಮತ್ತನಾಗಿದ್ದ ಮಗ ತೂರಾಡುತ್ತಾ, ಕೂಗುತ್ತಿದ್ದುದನ್ನು ಕಂಡು ಅವಳು, ಅವನ ಕೈ ಹಿಡಿದು ಬಲವಾಗಿ ಅಲುಗಾಡಿಸಿದಳು. ಮುದುಕಿ ಕೋಪದಿಂದ ಗರ್ಜಿಸುತ್ತಾ, "ಏ, ಮೂರ್ಖ, ಇಲ್ಲೇನು ಮಾಡುತ್ತಿದ್ದೀ? ಈ ಚಿಕ್ಕ ಹುಡುಗಿಯರನ್ನೇಕೆ ಹೆದರಿಸುತ್ತೀ? ಮನೆಗೆ ಹಿಂದಿರುಗು.... ಏನು, ಕೇಳಿಸುತ್ತಿದೆಯಾ? ಮನೆಗೆ ಹಿಂದಿರುಗು.ನಿನ್ನ ಅವಸ್ಥೆ ನೋಡಲಾಗುವುದಿಲ್ಲ. ಹೂಂ, ವಾಪಸ್ ಹೊರಡು.ಹೋಗಿ, ನಿನ್ನ ಗೂಡಿನಲ್ಲಿ ಅಡಗಿಕೊ. ನಿನ್ನ ಮುಖ ಮತ್ತೆ ತೋರಿಸಬೇಡ... ಹೂಂ, ಹೊರಡು" ಎಂದು ಹೇಳಿ ಅವನನ್ನು ನೂಕಿದಳು. ಅವನು, ಮುಗ್ಗರಿಸುತ್ತಾ ತನ್ನಲ್ಲೇ ಗೊಣಗಿಕೊಂಡ. "ಹೂಂ! ಹೋಗು, ಹೋಗು, ಹೋಗು ಎಂದು ಎಲ್ಲರೂ ಹೇಳುತ್ತಾರೆ. ನಾನೆಲ್ಲಿಗೆ ಹೋಗಲಿ? ನನಗೆ ನನ್ನ ದುಡ್ಡು ಬೇಕು. ಆ ಮೋಸಗಾರನನ್ನು ಸಾಯಿಸುತ್ತೇನೆ. ಆ ನಾಯಿಯನ್ನೂ ಸಾಯಿಸುತ್ತೇನೆ."

"ಸಾಕು, ನಿಲ್ಲಿಸು" ಅವನಮ್ಮ ಕೂಗುತ್ತಾ ಒಂದು ಕೋಲನ್ನೆತ್ತಿ, ಮರದ ಬುಡಕ್ಕೆ ಬಲವಾಗಿ ಹೊಡೆದಳು. "ಸುಮ್ಮನಾಗು" ಎಂದು ಮತ್ತೆ ಹೇಳಿದಳು. ಆ ಹುಡುಗಿಯರತ್ತ ಹಿಂದಿರುಗಿ ನೋಡದೆ ಮುದುಕಿ, ಕೂಗುತ್ತಾ ಅವನ ಹಿಂದೆ ಹೋದಳು.

ನಂತರ ಅವರು ಒಬ್ಬರ ಹಿಂದೆ ಒಬ್ಬರು ಮೌನವಾಗಿ ಒಳಗೆ ನಡೆದರು. ಕಪ್ಪು ನೆರಳನ್ನು ಹೊರಹಾಕಲು ಲೀಲ ಒಲೆಯನ್ನು ಬೇಗನೆ ಹೊತ್ತಿಸಿದಳು. ಬೆಂಕಿಯ ಸುತ್ತ ಅವರು ಬಿಕ್ಕಳಿಸುತ್ತಾ ನಡೆದುದನ್ನೆಲ್ಲಾ ಹೇಳಿದರು. ತಮ್ಮ ತಾಯಿ ಗುಣಮುಖಳಾಗುವಂತೆ ಮಾಡಲು, ನೆರೆಯ ಕುಡುಕನನ್ನೂ, ಅವನ ಬೆದರಿಕೆಯನ್ನು ದೂರವಿಡಲು, ಅವನಿಂದ ಪಿಂಟೊವನ್ನು ರಕ್ಷಿಸಲು ಹಾಗೂ ತಮ್ಮ ಸುತ್ತಣ ಕ್ರೌರ್ಯದಿಂದ ತಮ್ಮೆಲ್ಲರನ್ನೂ ರಕ್ಷಿಸಲು ಹರಿ ಏನೂ ಮಾಡಲಾರ ಎಂಬುದು ಅವರಿಗೆ ಗೊತ್ತು. ಆದರೂ ಅವರ ಹೆದರಿಕೆಯ ಕಾರಣವನ್ನು ಅರಿತು, ಅವರ ಕಷ್ಟದಲ್ಲಿ ತಾನೂ ಪಾಲ್ಗೊಳ್ಳಲು, ಸೋದರಿಯರ ವಿವರಣೆ ಅವನಿಗೆ ಸಹಾಯಕಾರಿ-ಯಾಯಿತು.

# 4

ಗುಡಿಸಿಲಿನ ನೆರಳಿನಲ್ಲಿ ತನ್ನ ಸೋದರಿಯೊಡನೆ ಮೌನವಾಗಿ ಕೂಡುವುದಾಗಲಿ, ಬರಿದಾದ ತನ್ನ ಬಲೆಯನ್ನು ಹಿಡಿದು ಕಡಲ ದಂಡೆಯಲ್ಲಿ ಸುಮ್ಮನೆ ಓಡಾಡುವುದಾಗಲಿ, ಇನ್ನೂ ಹಲವಾರು ವರ್ಷಗಳ ಕಾಲ ಕಾರ್ಯರೂಪಕ್ಕೆ ಬರಬಹುದಾದ ಕಾರ್ಖಾನೆಯ ಕೆಲಸವನ್ನು ನೆಚ್ಚಿಕೊಂಡು ಬೆಟ್ಟದ ಬುಡದಲ್ಲಿರುವ ಟಿನ್ನಿನ ಗುಡಿಸಿಲ ಸುತ್ತ ಯಾರಿಗೂ ಗೊತ್ತಾಗದಂತೆ ಓಡಾಡುವುದಾಗಲಿ ಇನ್ನು ಮುಂದೆ ಸಾಧ್ಯವಿಲ್ಲವೆಂಬುದು ಹರಿಗೆ ಗೊತ್ತು. ಕೆಲಸಕ್ಕಿಳಿಯಲು ತನ್ನ ಕುಟುಂಬದಲ್ಲಿ ಇನ್ಯಾರಿಗೂ ಸಾಧ್ಯವಿಲ್ಲದಿರುವುದರಿಂದ ತಾನೇ ಕಾರ್ಯನಿರತನಾಗ-ಬೇಕು. ಇಂಥ ಕೆಲಸದ ಅಗತ್ಯ ತುಂಬ ಇದೆ.

ಈಗಾಗಲೇ ಸಿದ್ಧವಾಗಿರುವಂತೆ ಕಾಣುತ್ತಿದ್ದ ಬಿಜುವಿನ ದೋಣಿಯನ್ನು ನೋಡಲು ಅದರ ಸುತ್ತ ಜಮಾಯಿಸುತ್ತಿದ್ದ ಜನರ ಗುಂಪನ್ನು ಸೇರಲು ಹರಿ ಮರುದಿನ ಬೆಳಿಗ್ಗೆ ಬಿಸಿಯಾದ ಬಿಳಿ ಮರಳ ಮೇಲೆ ನಡೆದ. ಡೀಪ್-ಫ್ರೀಜ್ ಅನ್ನು ದೋಣಿಗೆ ಅಳವಡಿಸಿದ್ದರಿಂದ, ಬಿಜು ಹಗಲು-ರಾತ್ರಿ ದೋಣಿಯನ್ನು ಬಿಟ್ಟು ಅಗಲುವಂತಿರಲಿಲ್ಲ. ದೋಣಿ ಈಗಾಗಲೇ ಸಮುದ್ರದಲ್ಲಿ ಸಂಚಾರ ಕೈಗೊಂಡಿದೆಯೇನೋ ಎಂಬಂತೆ, ಬಿಜು ದೋಣಿಯ ಒಳಗೇ ಮಲಗುತ್ತಿದ್ದಾನೆಂದೂ ಹೇಳಲಾಗುತ್ತಿತ್ತು. ಬೆಳಗಿನ ಈ ಪ್ರಕಾಶಮಾನವಾದ ಬೆಳಕಿನಲ್ಲಿ ಬಿಜು ತನ್ನ ಮಡಚು-ಕುರ್ಚಿಯ ಮೇಲೆ ಕುಳಿತು, ತನ್ನ ಕೈಗಳನ್ನು ಮಂಡಿಗಳಿಗೆ ಒತ್ತಿಕೊಳ್ಳುತ್ತಾ, ಕೆಲಸಗಾರರು ದೋಣಿಯ ಕೆಳಗೆ ತೆವಳಿಕೊಂಡು ಹೋಗಿ, ದೋಣಿಗೆ ಪಾಲಿಷ್ ಮಾಡಿ ಬಣ್ಣದಲ್ಲಿ ಮತ್ಸ್ಯಕನ್ಯೆಯ ಚಿತ್ರವೊಂದನ್ನು ನೀಲಿಬಣ್ಣದ ಫಲಕವೊಂದರ ಮೇಲೆ ಬರೆದಿದ್ದು, ಅದನ್ನು ಕ್ಯಾಬಿನ್ನಿನ ಬಾಗಿಲಿಗೆ ಸಿಕ್ಕಿಸಲಾಗಿತ್ತು. ಮತ್ಸ್ಯಕನ್ಯೆಯ ಚಿತ್ರದ ಕೆಳಗೆ 'ಜಲ್‌ಪರಿ' ಎಂಬ ದೋಣಿಯ ಹೆಸರನ್ನು ಒಬ್ಬ ಎಚ್ಚರದಿಂದ ಬರೆಯುತ್ತಿದ್ದ. ದೋಣಿಯ ಹೆಸರೇನೆಂಬುದು ಗೊತ್ತಾದಾಗ ದೋಣಿಯ ಸುತ್ತ ನಿಂತಿದ್ದ ಹಳ್ಳಿಯ ಹುಡುಗರು ಗಟ್ಟಿಯಾಗಿ ನಗಲಾರಂಭಿಸಿದರು. ಬಿಜು ಕೋಪದಿಂದ ಅವರತ್ತ ನೋಡಿದ.

ಅವರೆಲ್ಲಾ ಏಕೆ ನಗುತ್ತಿದ್ದಾರೆಂಬುದನ್ನು ತಿಳಿಯಲು ಹರಿ ಅಲ್ಲೇ ನಿಂತ. ಉಜ್ವಲವಾದ ನೀಲಿ ಸಮುದ್ರದಲ್ಲಿ ಉಲ್ಲಾಸದಿಂದ ನಲಿದಾಡುತ್ತಿರುವಂತೆ ಕಾಣುತ್ತಿದ್ದ ಮತ್ಸ್ಯಕನ್ಯೆಯತ್ತ ಕೈ ಮಾಡಿ ತೋರಿಸುತ್ತ ಜನ ಹಾಸ್ಯ ಮಾಡುತ್ತಿದ್ದಂತೆ, "ಅವಳನ್ನು ಹಿಡಿಯುವ ಸಲುವಾಗಿ ಬಿಜು ದೋಣಿಯನ್ನು ಕಟ್ಟುತ್ತಿದ್ದಾನೆ" ಎಂದು ಹೇಳುತ್ತಾ ಅವರು ಕಣ್ಣು ಮಿಟುಕಿಸಿದರು. ಆದರೆ ಹರಿ ನಗಲಿಲ್ಲ. ಅವನು ಆ ಗುಂಪನ್ನು ಬಿಟ್ಟು ನೇರವಾಗಿ ನಿಧಾನವಾಗಿ ಬಿಜುವಿನತ್ತ ಹೊರಟ. ದೋಣಿಯಲ್ಲಿ ತನಗೊಂದು ಕೆಲಸ ಕೊಡುವಂತೆ ಅವನನ್ನು ಕೇಳಲು ಅವನು ಹಿಂದಲ ರಾತ್ರಿಯೇ ನಿರ್ಧರಿಸಿದ್ದ.

ಆದರೆ ಅದೇ ಸಮಯದಲ್ಲಿ ಮತ್ತೊಬ್ಬ ಆಗಂತುಕ ತನ್ನತ್ತ ಬಂದದ್ದರಿಂದ, ಅವನಿಗೆ ಮೊದಲು ಗಮನ ಕೊಡಲು ಬಿಜು ಅವನತ್ತ ತಿರುಗಿದ. ಬೃಹತ್ ಕಾರ್ಖಾನೆಯ ಪ್ರಾರಂಭಿಕ ಸೂಚನೆಯಂತೆ ಬಂದು ಬಿದ್ದಿದ್ದ ಕೊಳವೆಗಳನ್ನು ರಕ್ಷಿಸಲು ಜಿಂಕ್‌ಶೀಟಿನ ಗುಡಿಸಿಲಿನಲ್ಲಿ ವಾಸಿಸುತ್ತಿದ್ದ ಕಾವಲುಗಾರ ಅವನೆಂಬುದು ಹರಿಗೆ ಗೊತ್ತಾಯಿತು.

''ಥುಲ್‌ನ ಜನರಿಗಾಗಿ ಮೀನನ್ನು ಹಿಡಿಯಲು ಇನ್ನೊಂದು ದೋಣಿ ಸಿದ್ಧಗೊಳ್ಳುತ್ತಿ-ದೆಯೊ?'' ಬಿಜುವಿನತ್ತ ಬರುತ್ತಾ ಅವನು ಕೇಳಿದ.

ಬಿಜುವಿನ ಮುಖ ಕಪ್ಪಿಟ್ಟು ಕೋಪದಿಂದ ಗಂಟಿಕ್ಕಿತು. ''ಇದೇನು ಸಾಮಾನ್ಯ ಮೀನು ದೋಣಿಯಲ್ಲ'' ಬಿಜು ಗುರುಗುಟ್ಟುತ್ತಾ ಹೇಳಿದ, ''ಕಾಣುವುದಿಲ್ಲವಾ ನಿನಗೆ? ಅದರಲ್ಲಿ ಡೀಸಲ್ ಎಂಜಿನ್ ಇದೆ, ಡೀಪ್-ಫ್ರಿಜ್ ಇದೆ. ದಿನಕ್ಕೆ ಐವತ್ತು ಮೈಲಿ ಸಂಚರಿಸುವಷ್ಟು ಸಾಮರ್ಥ್ಯ ಹೊಂದಿದೆ''.

''ಓಹೋ!'' ಆಗಂತುಕ ಜೋರಾಗಿ ನಗುತ್ತಾ, ಬೀಡಿಯ ಹೊಗೆ ಬಿಡುತ್ತಾ ದೋಣಿಯ ಕಡೆ ನೋಡಿದ.

ಅದೇ ಸಮಯಕ್ಕೆ ಹೆಸರು ಬರೆದಿದ್ದ ಫಲಕವು ಮೊಳೆಯಿಂದ ಕಿತ್ತುಕೊಂಡು ಕೆಳಗೆ ಬಿದ್ದು ಝಣ ಝಣ ಸದ್ದು ಮಾಡಿಕೊಂಡು ಉರುಳಾಡಿತು. ಅದನ್ನೆತ್ತಿ ಮತ್ತೆ ನೇತು ಹಾಕಬೇಕಾಯಿತು. ಅದರ ಬಣ್ಣವೆಲ್ಲ ಕರದಿ ತೊಟ್ಟಿಕ್ಕಲಾರಂಭಿಸಿತ್ತು. ಹುಡುಗರು ಮತ್ತೆ ಕಿಸಕಿಸನೆ ನಕ್ಕರು. ಬಿಜು, ಆ ವರ್ಣಚಿತ್ರಕಾರನ ಮೇಲೆ ಕೋಪದಿಂದ ಆರ್ಭಟಿಸಿದ. ಅವನು ಕಂಪಿಸುತ್ತಾ ಹರಕು ಬಟ್ಟೆಯಿಂದ ಫಲಕದ ಮೇಲ್ಮೈಯನ್ನು ಒರೆಸಿ ಸರಿಪಡಿಸಲಾರಂಭಿಸಿದ.

''ಓ. ಅಂದರೆ, ಪ್ರಬಲವಾದ ಸಾಗರ ದೋಣಿಯನ್ನು ಇಲ್ಲಿ ಕಟ್ಟುತ್ತಿದ್ದೀರಾ'' ಆಗಂತುಕ ವ್ಯಂಗ್ಯವಾಗಿ ಕೇಳಿದ, ''ಐವತ್ತು ಮೈಲಿಗಳಷ್ಟು ದೂರ ಅದು ಹೋಗುವುದೇ? ಅದು ಸರಿ ಅನ್ನಿ, ಯಾವುದೇ ಮೀನು ಹಿಡಿಯಲು ಅಷ್ಟು ದೂರ ಹೋಗಲೇಬೇಕು.''

''ನೀನೇನು ಹೇಳುತ್ತಿದ್ದೀಯೆ? ಇಲ್ಲಿ ಸುತ್ತಮುತ್ತ ಬೇಕಾದಷ್ಟು ಮೀನುಗಳಿವೆ'' ತನ್ನ ಮಡಚು-ಕುರ್ಚಿಯಲ್ಲಿ ಅತ್ಯಂತ ಕಷ್ಟದಿಂದ ಕುಳಿತಿದ್ದ ಬಿಜು, ಅತ್ತಿತ್ತ ಮೈತಿರುಗಿಸುತ್ತಾ ಅಸಮಾಧಾನದಿಂದ ಹೇಳಿದ.

''ಇಲ್ಲಿ, ಸುತ್ತಮುತ್ತ ಎಲ್ಲೂ ಇಲ್ಲ'' ಆ ವ್ಯಕ್ತಿ ಮರಳ ಮೇಲೆ ಆರಾಮವಾಗಿ ಕುಳಿತು ಹೇಳಿದ. ಇಲ್ಲಂತೂ ಯಾವ ಮೀನೂ ಇಲ್ಲ. ನಿನ್ನೆ ರಾತ್ರಿ ನನ್ನ ಊಟಕ್ಕಾಗಿ ಪಾಮ್‌ಫ್ರೆಟ್ ಮೀನನ್ನು ಕೊಳ್ಳಲು ಹೋದರೆ ಸಿಕ್ಕದ್ದು ಕೆಟ್ಟ ಒಂದು ಪುಟ್ಟ ಮೀನು. ಮುಂಬೈನಲ್ಲಿ ಇಂತಹ ಮೀನನ್ನು ಯಾರೂ ಮೂಸುವುದಿಲ್ಲ.'' ತಿರಸ್ಕಾರದಿಂದ ಅವನು ಆಡಿದ ಮಾತನ್ನು ಹಳ್ಳಿಗರು ತದೇಕ ಚಿತ್ತದಿಂದ ಮೌನವಾಗಿ ಕೇಳಲಾರಂಭಿಸಿದ್ದರು. ''ನೀವು ಪಾಮ್‌ಫ್ರೆಟ್ ಹಿಡಿಯಲು ಹೋದರೆ ಸಿಗುವುದು ಚಿಕ್ಕ ಕಚಡಾ ಸೀಗಡಿಗಳು. ಮುಂಬೈನ ಜನತೆಗೆ ಇವು ಎಂದೆಂದೂ ಸಾಲದು, ನಿಮಗೇ ಸಾಕಾಗದು. ನಿಮ್ಮ ದೋಣಿಗಳು ಮತ್ತು ಬಲೆಗಳನ್ನು ಬಿಸಾಡಿ ಬೇರೆ ಯಾವುದಾದರೂ ಹೊಸ ಉದ್ಯೋಗ ಕೈಗೊಳ್ಳುವುದು ಉತ್ತಮ.''

''ನಾವು ಸದಾ ಕಡಲಲ್ಲಿ ಮೀನು ಹಿಡಿಯುತ್ತೇವೆ'' ತಮ್ಮ ಅತ್ಯಂತ ಶ್ರೀಮಂತ ಮೀನುಗಾರನು ಹೆಮ್ಮೆಪಡುತ್ತಿರುವುದನ್ನು ಹರಿ ಮತ್ತು ಇತರರು ತಿಳಿಯದ ರೀತಿಯಲ್ಲಿ ಬಿಜು ಕೆಚ್ಚೆದೆಯಿಂದ ಹೇಳಿದ, ''ನಾವು ಸದಾ ಹಾಗೆಯೇ ಮಾಡುತ್ತೇವೆ. ನಮಗೆ ಸಾಕಷ್ಟು

ಮೀನು ಸಿಗದಿದ್ದರೂ ಇತರ ಆಹಾರ ಪದಾರ್ಥಗಳು ವಿಪುಲವಾಗಿವೆ-ಅಕ್ಕಿ, ಕಾಯಿಪಲ್ಲೆ ಮತ್ತು ತೆಂಗಿನಕಾಯಿ ಇವೆಲ್ಲ ದೇಶದ ಇತರ ಯಾವ ಭಾಗದಲ್ಲಿ ತಾನೆ ದೊರೆಯುತ್ತವೆ? ದೊಡ್ಡ ರುಚಿಕರ ತೆಂಗಿನಕಾಯಿಗಳಿಗೆ ಮುಂಬೈನಲ್ಲಿ ಒಳ್ಳೆಯ ಬೆಲೆ ಸಿಗುತ್ತದೆ. ಇಲ್ಲಿ, ಭೂಮಿ ತುಂಬ ಫಲವತ್ತಾಗಿದೆ. ನಾವು ವರ್ಷಕ್ಕೆ ಎರಡು ಬೆಳೆ ತೆಗೆಯುತ್ತೇವೆ. ನಮ್ಮದು ಅತ್ಯುತ್ತಮವಾದ ಅಕ್ಕಿ. ನಮ್ಮ ಈ ಒಳ್ಳೆಯ ಅಕ್ಕಿಯನ್ನು ನೀನು ಊಟಮಾಡಿದ್ದೀಯಾ?''

''ಓಹೋ'' ಬೀಡಿಯ ಚೂರುಗಳನ್ನು ಉಗಿಯುತ್ತಾ ಆ ಮನುಷ್ಯ ಹೇಳಿದ, ''ನಾನು ನಿಮ್ಮ ಅಕ್ಕಿಯನ್ನು ತಿಂದಿದ್ದೇನೆ, ನಿಮ್ಮ ಜಮೀನನ್ನೂ ನೋಡಿದ್ದೇನೆ. ಆದರೆ, ಸದ್ಯದಲ್ಲೇ ಅವೆಲ್ಲಾ ಮಾಯವಾಗುತ್ತವೆ. ಎಲ್ಲ ಜಮೀನನ್ನೂ ಕೊಳ್ಳಲಾಗುವುದು. ಅದರ ಮೇಲೆ ಕಾರ್ಖಾನೆಗಳನ್ನು ನಿರ್ಮಿಸಲಾಗುವುದು. ನಿಮ್ಮ ಅಕ್ಕಿಯೂ ಹೊರಟು ಹೋಗುತ್ತದೆ.''

ಹುಡುಗರು ಆಶ್ಚರ್ಯದಿಂದ ಒಬ್ಬರ ಮುಖ ಒಬ್ಬರು ನೋಡಿಕೊಂಡು ತಲೆದೂಗಿದರು. ಹಳ್ಳಿಯ ಹಿರಿಯರಿಗೆ ಅವರು ಅನೇಕ ಬಾರಿ ಈ ಮಾತು ಹೇಳಿದ್ದರು. ಆದರೆ ಈ ಮಾತನ್ನು ನಂಬಿರಲಿಲ್ಲ. ಆದರೆ ಈಗ ಅವರು ಸಂಬಂಧಪಟ್ಟ ವ್ಯಕ್ತಿಯಿಂದಲೇ ಈ ಮಾತು ಕೇಳುತ್ತಿರುವುದರಿಂದ ಅವರು ನಂಬಲೇಬೇಕಾಗಿತ್ತು. ವೃದ್ಧ ಬಿಜುವಿನ ಕೋಪೋದ್ರಿಕ್ತ ಮುಖದಲ್ಲಿ ಒಂದು ರೀತಿಯ ಭಯ ಮತ್ತು ಕಸಿವಿಸಿ ಉಂಟಾಗಿದ್ದು ನೋಡಿ ಹುಡುಗರಿಗೆ ಸಂತೋಷವಾಯಿತು.

''ನಮ್ಮ ಜಮೀನನ್ನು ಯಾರೂ ಕಸಿದುಕೊಳ್ಳಲಾರರು.'' ಮೂರು ಎಕರೆಗಳಷ್ಟು ಭತ್ತದ ಗದ್ದೆಯನ್ನೂ, ಎರಡು ತೆಂಗಿನ ಮತ್ತು ಅಡಕೆ ತೋಟವನ್ನೂ ಹಾಗೂ ಮೀನು ದೋಣಿಗಳನ್ನೂ ಹೊಂದಿದ್ದ ಬಿಜು ಹೇಳಿದ, ''ಅದು ನಮ್ಮದು, ಅದನ್ನು ನಾವು ಮಾರಾಟ ಮಾಡುವುದಿಲ್ಲ.''

''ಮಾರು ಎಂದು ಸರ್ಕಾರ ಹೇಳಿದಾಗ ನೀವು ಮಾರಲೇಬೇಕು'' ಆ ಮನುಷ್ಯ ತನ್ನ ಬೆರಳುಗಳಲ್ಲಿ ಚಿಟಿಕೆ ಹಾಕುತ್ತಾ, ''ಇಗೋ ಈ ರೀತಿ ಯಾವ ಪ್ರಶ್ನೆಯನ್ನೂ ಕೇಳುವಂತಿಲ್ಲ. ನೀವು ಮಾರಲೇಬೇಕು. ಕಾರ್ಖಾನೆಗಳನ್ನು ಕಟ್ಟಲು ಈ ಜಾಗ ಸರಿಯಾದದ್ದೆಂದು ಸರ್ಕಾರ ಆರಿಸಿದೆ, ಇಲ್ಲಿ ಕಾರ್ಖಾನೆಗಳನ್ನು ನಿರ್ಮಿಸಲಾಗುವುದು'' ಎಂದು ಹೇಳಿದ.

''ಎಲ್ಲ ಬಿಟ್ಟು ಇಲ್ಲೇಕೆ?'' ಬಿಜು ಸವಾಲು ಹಾಕಿದ, ''ಬಂಜರು ಭೂಮಿಯಲ್ಲಿ, ಕಲ್ಲುಮುಳ್ಳು ಬಿಟ್ಟು ಮತ್ತೇನೂ ಬೆಳೆಯದ ಭೂಮಿಯಲ್ಲಿ, ನಿಮ್ಮ ಕಾರ್ಖಾನೆಗಳನ್ನು ಕಟ್ಟಿಕೊಳ್ಳಿ.'' ಕರಾವಳಿ ಉದ್ದಕ್ಕೂ ಇರುವ ಹಸಿರು ಬಯಲನ್ನು ಬಂಜರು ಹಿನ್ನಾಡಿನಿಂದ ಪ್ರತ್ಯೇಕಿಸುವ ಕಂಕೇಶ್ವರ ಬೆಟ್ಟಗಳತ್ತ ಕೈ ಬೀಸಿ ತೋರಿಸುತ್ತಾ ಬಿಜು ಹೇಳಿದ, ''ಕಾರ್ಖಾನೆಗಳಿಗಾಗಿ ನಮ್ಮ ಒಳ್ಳೆಯ ಬೇಸಾಯದ ಭೂಮಿಯನ್ನು ಏಕೆ ಮಾರಬೇಕು?''

''ನೀವು ಮಾರಲೇಬೇಕು. ಸರ್ಕಾರ ಈ ಜಾಗವನ್ನು ಆರಿಸಿದೆ.''

''ನಮ್ಮನ್ನು ಕೇಳದೆಯೆ ಸರ್ಕಾರ ಈ ಜಾಗವನ್ನು ಆರಿಸಿದೆಯಾ?''

''ಅಯ್ಯಾ ಮುದುಕ, ನಿಮ್ಮನ್ನಾರು ಕೇಳುತ್ತಾರೆ?'' ಆಗಂತುಕ ಹೇಳಿದ, ''ಸೂಕ್ತವಾದ ಭೂಮಿಯನ್ನು ಆರಿಸುವಂತೆ ಸರ್ಕಾರ ಪರಿಣತರನ್ನು ಕಳಿಸಿತ್ತು. ಅವರು ಈ ಜಾಗವನ್ನು ಆರಿಸಿದರು. ಇದು ರೇವಾಸ್ ಬಂದರಿಗೆ ಸಮೀಪವಿದೆ. ಇದರಿಂದ ಸರಕನ್ನು ಮುಂಬೈಗೆ ಕಳಿಸುವುದು ಸುಲಭ. ಈ ಜಾಗ ಮುಂಬೈಗೂ ಸಮೀಪವಿದೆ. ಕೇವಲ ಹದಿನಾಲ್ಕು ಕಿಲೋಮೀಟರ್‌ಗಳು, ಅಷ್ಟೆ. ಇಲ್ಲಿ ರೇಲ್ವೆ ಮಾರ್ಗವನ್ನು ಸುಲಭವಾಗಿ ಹಾಕಬಹುದು.

ರಸ್ತೆ ಈಗಾಗಲೇ ಇದೆ. ಅದನ್ನು ಮತ್ತಷ್ಟು ಅಗಲ ಮಾಡಬೇಕು. ಸಾರಿಗೆಯೂ ಉತ್ತಮವಾಗಿದೆ. ಇದು ಸಮುದ್ರಕ್ಕೂ ಹತ್ತಿರವಿದ್ದು, ಎಲ್ಲ ನಿರುಪಯುಕ್ತ ಪದಾರ್ಥಗಳನ್ನೂ ಸಮುದ್ರದೊಳಗೆ ಬಿಸಾಕಬಹುದು. ಕಾರ್ಖಾನೆಗಳಿಗೆ, ವಸತಿಗಳಿಗೆ ಸಾಕಷ್ಟು ಭೂಮಿಯಿದೆ. ಇಲ್ಲಿ ಕೆಲಸ ಮಾಡಲು ಎಲ್ಲ ಜನರೂ ಬರುತ್ತಾರೆ.''

''ಜನ? ಯಾವ ಜನ ಇಲ್ಲಿಗೆ ಬಂದು ಕೆಲಸ ಮಾಡುತ್ತಾರೆ?''

''ಸಾವಿರಾರು ಜನ'' ಅವನು ನಗುತ್ತಾ ಹೇಳಿದ, ''ಸಾವಿರಾರು ಜನ ಬರುತ್ತಾರೆ. ಅವರಿಗಾಗಿ ಇಡೀ ಕಾಲನಿಗಳನ್ನೇ ಕಟ್ಟಬೇಕು. ಬಸ್‌ಗಳು ಮತ್ತು ರೈಲು ಸಂಚಾರವನ್ನು ಪ್ರಾರಂಭಿಸಬೇಕು. ಪೇಟೆಗಳನ್ನು...''

''ಅಂದರೆ, ಇಲ್ಲಿ ವಾಸಿಸುತ್ತಿರುವ ನಮ್ಮ ಗತಿ ಏನು?'' ಬಿಜು ಕೋಪದಿಂದ ಕೇಳಿದ. ಅವನ ಮುಖ ಆಗಲೇ ಕಪ್ಪಿಟ್ಟಿತ್ತು.

ಆಗುಂತುಕ ನಗುತ್ತಾ ಜೊಂಡನ್ನು ಕತ್ತರಿಸುವ ರೀತಿಯಲ್ಲಿ ಗಾಳಿಯಲ್ಲಿ ಕೈ ಆಡಿಸುತ್ತಾ ಹೇಳಿದ, ''ಹೀಗೆ...ನಿಮ್ಮ ಹಳ್ಳಿ ಮಾಯವಾಗುತ್ತದೆ. ಅದರ ಸ್ಥಳದಲ್ಲಿ ಕಾರ್ಖಾನೆಗಳು ಬರುತ್ತವೆ. ಅವುಗಳಲ್ಲಿ ರಸಗೊಬ್ಬರವನ್ನು ತಯಾರಿಸಲಾಗುವುದು. ಅನಿಲವನ್ನು ಉತ್ಪಾದಿಸಲಾಗುವುದು. ಅನೇಕ ಹುದ್ದೆಗಳನ್ನು ನಿರ್ಮಿಸಲಾಗುವುದು. ಸರ್ಕಾರ ಹಾಗೆ ಹೇಳುತ್ತಿದೆ'' ಗ್ರಾಮದ ಜನ ತನ್ನನ್ನು ಕೋಪದಿಂದ ನೋಡುತ್ತಿರುವುದನ್ನು ಅರಿತ ಅವನು ಹೇಳಿದ.

''ಅಂದರೆ ಮೀನುಗಾರರು ಮತ್ತು ರೈತರು ಕಾರ್ಖಾನೆಯ ಕೆಲಸಗಾರರಾಗುತ್ತಾರಾ?'' ಬಿಜು ಕೇಳಿದ, ''ಈ ಹುಡುಗರು ತಮ್ಮ ಅಪ್ಪಂದಿರ ಜಮೀನುಗಳು ಮತ್ತು ದೋಣಿಗಳನ್ನು ತೊರೆದು ನಗರವಾಸಿಗಳಂತೆ, ಕೆಲಸಕ್ಕಾಗಿ ಕಾರ್ಖಾನೆಗಳಿಗೆ ಹೋಗಬೇಕಾ?''

''ಏನು, ಈ ಹುಡುಗರಾ?'' ತದೇಕ ಚಿತ್ತದಿಂದ ತನ್ನ ಮಾತುಗಳನ್ನು ಕೇಳುತ್ತಿದ್ದ ಹುಡುಗರನ್ನು ತಿರಸ್ಕಾರದಿಂದ ನೋಡುತ್ತಾ ಅವನು ಹೇಳಿದ, ''ಈ ಹುಡುಗರ ವಿಷಯ ಗೊತ್ತಿಲ್ಲ. ಕಾರ್ಖಾನೆಗಳನ್ನು ನಡೆಸಲು ಇಂಜಿನಿಯರ್‌ಗಳು ಮತ್ತು ತಂತ್ರಜ್ಞರನ್ನು ಎಲ್ಲೆಡೆಯಿಂದ ಇಲ್ಲಿಗೆ ಕರೆತರಲಾಗುವುದು.''

''ಅಂದರೆ ನಾವು?'' ರಾಮು ಹಠಾತ್ತನೆ ಕೂಗಿ ಕೇಳಿದ. ಹರಿ ಮಾತನಾಡಬೇಕೆಂದು ಇಷ್ಟಪಟ್ಟರೂ, ಗಂಟಲು ಒಣಗಿ ಹೋಗಿ ಅವನು ಮಾತನಾಡಲಾಗಲಿಲ್ಲ.

''ನೀನು?'' ತಿರಸ್ಕಾರದಿಂದ ರಾಮುವನ್ನು ನೋಡುತ್ತಾ ಆ ಮನುಷ್ಯ ಹೇಳಿದ, ''ಈ ಮುದುಕ, ನಿನ್ನನ್ನು ತನ್ನ ದೋಣಿಯಲ್ಲಿ ಕೂಡಿಸಿ, ಮೀನು ಹಿಡಿಯಲು ಕಳಿಸುತ್ತಾನೆ... ಐವತ್ತು ಮೈಲಿಗಳಷ್ಟು ದೂರ'' ಅವನು ನಗುತ್ತಾ, ''ದೂರ...ಬಹುದೂರ'' ಎಂದು ಕೂಗಿ, ಸೂರ್ಯನ ಬೆಳಕಿನಲ್ಲಿ ಹೊಳೆಯುತ್ತಾ ಉಬ್ಬುತ್ತಿದ್ದ ಕಡಲಿನತ್ತ ತನ್ನ ಕೈಗಳನ್ನು ಬೀಸಿ ತೋರಿಸಿದ.

* * *

ಇಡೀ ಗ್ರಾಮದಲ್ಲೇ ಕೋಪದ ವಾತಾವರಣ ಆವರಿಸಿತ್ತು. ಹಳ್ಳಿಯ ಹಾದಿಯಿಂದ ಗುಡಿಗೆ ನಡೆದು ಹೋಗುವಾಗ ಎಲ್ಲೆಲ್ಲೂ ಕೇಳಿಬರುತ್ತಿದ್ದ ಈ ವಿಚಾರ ಹರಿಗೆ ಸ್ಪಷ್ಟವಾಗಿತ್ತು. ತಮ್ಮ ತಾಯಿ ಜ್ವರದಿಂದ ಇನ್ನೂ ನರಳುತ್ತಿದ್ದುದರಿಂದ, ಕೊಳ್ಳಲು ಮಂಜುಗಡ್ಡೆ ಸಿಗುವುದೇ

ಎಂದು ನೋಡುವುದಾಗಿ, ಹರಿ ಲೀಲಳಿಗೆ ತಿಳಿಸಿ ಹೊರಟಿದ್ದ. ಪರಿಸ್ಥಿತಿ ಎಂದಿನಂತೆ ಸಹಜವಾಗಿರುವಂತೆ ಕಾಣುತ್ತಿದ್ದರೂ-ಅಂದರೆ ವರಾಂಡದ ಕಂಬಿಗಳ ಮೇಲೆ ಬಣ್ಣ ಬಣ್ಣದ ಸೀರೆಗಳನ್ನು ಒಣ ಹಾಕಿದ್ದುದು, ಹೆಂಗಸರು ತಮ್ಮ ಮನೆಯ ಮುಂದಿನ ತುಳಸಿಗೆ ನೀರು ಹಾಕುತ್ತಿದ್ದುದು, ಪೇಟೆಯಲ್ಲಿ ಹೆಂಗಸರು ತಮ್ಮ ಮುಂದೆ ಎಲೆಗಳನ್ನು ಹರಡಿ, ಅವುಗಳ ಮೇಲೆ ಹೂಗಳನ್ನು, ಬಾಳೆಯನ್ನೂ ಓರಣವಾಗಿ ಜೋಡಿಸುತ್ತಿದ್ದುದು ಕಂಡುಬಂದರೂ ವಾತಾವರಣದಲ್ಲಿ ಏನೋ ಹೊಸತು ಕಾಣುತ್ತಿತ್ತು. ಉತ್ಸಾಹವಿಲ್ಲದ ಜಡತೆಯ ಸ್ಥಾನವನ್ನು ಅಸಮಾಧಾನ ಮತ್ತು ಕೋಪ ಆವರಿಸಿತ್ತು.

ಈ ಸ್ಪಷ್ಟ ಹಾಗೂ ಬಲವಾದ ವಿಚಾರದಿಂದಾಗಿ ಗುಡಿಯ ಆವರಣದ ಮುಂದೆ ಜನರ ದೊಡ್ಡ ಗುಂಪೊಂದು ಸೇರಿದ್ದುದು ಹರಿಗೆ ಆಶ್ಚರ್ಯವುಂಟುಮಾಡಲಿಲ್ಲ. ಸೋಮಾರಿ ಯುವಕರು ಮತ್ತು ಬೇರೆ ಯಾವ ಕೆಲಸವೂ ಇಲ್ಲದ ಮೀನುಗಾರರು ತೆಂಗು ಮತ್ತು ಅಡಕೆಯ ದೊಡ್ಡ ತೋಟಗಳನ್ನು ಹೊಂದಿದ್ದ ರೈತರು, ಅಲ್ಲದೆ ಹೆಂಗಸರೂ ಮತ್ತು ಹುಡುಗಿಯರೂ ಒಟ್ಟಾಗಿ ನಿಂತಿದ್ದರು. ಗುಡಿಯ ಮೆಟ್ಟಿಲುಗಳ ಪೈಕಿ ಮೇಲಿನದರ ಮೇಲೆ ನಿಂತಿದ್ದ ಯುವಕನೊಬ್ಬನ ಮಾತನ್ನು ಕೇಳುತ್ತಿದ್ದರು.

''ನಮ್ಮೊಡನೆ ಸೇರಬೇಕೆಂದು ನಿಮ್ಮನ್ನು ಕೇಳಲು ನಾನು ಅಲಿಬಾಗ್‌ನಿಂದ ಬಂದಿದ್ದೇನೆ. ಇದು ನಮಗೆಲ್ಲರಿಗೂ ಕಳವಳಕಾರಿ ವಿಷಯವಾಗಿದೆ. ರೇವಾಸ್‌ನಿಂದ ಅಲಿಬಾಗ್‌ನವರೆಗೆ ಕರಾವಳಿಯುದ್ದಕ್ಕೂ ಇರುವ ಹದಿನಾಲ್ಕು ಗ್ರಾಮಗಳಲ್ಲಿ ವಾಸಿಸುತ್ತಿರುವ ನಮ್ಮಲ್ಲಿ ಪ್ರತಿಯೊಬ್ಬರಿಗೂ ಹೆದರಿಕೆಯುಂಟಾಗಿದೆ. ನಮ್ಮ ಕುಟುಂಬಗಳಿಗಾಗಿ ನಾವೆಲ್ಲಿ ತೆಂಗಿನಕಾಯಿ ಮತ್ತು ಒಳ್ಳೆಯ ಅಕ್ಕಿಯನ್ನು ಬೆಳೆಯುತ್ತಿದ್ದೇವೆಯೋ ಅಲ್ಲಿ ಅವರು ತಮ್ಮ ಕಾರ್ಖಾನೆಗಳನ್ನು ಕಟ್ಟಲು ಅಪೇಕ್ಷಿಸುತ್ತಿದ್ದಾರೆ. ತಮ್ಮ ಕಾರ್ಖಾನೆಗಳು ಎದ್ದೇಳಲು ಸಾಧ್ಯವಾಗುವಂತೆ, ನಮ್ಮ ಫಸಲನ್ನೆಲ್ಲಾ ನಾಶಪಡಿಸಲಾಗುವುದು. ಅವರ ಕಾರ್ಖಾನೆಯಲ್ಲಿನ ಎಲ್ಲ ಕಚಡಾ ವಸ್ತುಗಳನ್ನು ಅಂದರೆ ರಸಗೊಬ್ಬರವನ್ನು ಉತ್ಪಾದಿಸುವಾಗ, ಕೊಚ್ಚೆ ನೀರಿನ ಪ್ರವಾಹವೇ ಹರಿದು ಬರುತ್ತದೆ. ಅದನ್ನು ಹೊರಹಾಕಬೇಕು- ಈ ಎಲ್ಲವನ್ನೂ ಸಮುದ್ರದೊಳಗೆ ಸುರಿಯಲಾಗುವುದು. ಅವು ಸುತ್ತಲಿನ ಮೈಲಿಗಟ್ಟಲೆ ಇರುವ ಪ್ರದೇಶದಲ್ಲಿನ ಮೀನುಗಳನ್ನು ನಾಶಪಡಿಸುತ್ತವೆ. ನಮ್ಮ ಜಮೀನಿಲ್ಲದೆ, ಕಡಲಿಲ್ಲದೆ ನಾವು ಜೀವಿಸುವುದಾದರೂ ಎಂತು?'' ಅವನು ತನ್ನ ಕೈಗಳನ್ನು ಬೀಸುತ್ತಾ ಗಟ್ಟಿಯಾದ ಸ್ವರದಲ್ಲಿ ಪ್ರಶ್ನಿಸಿ, ಅವರನ್ನು ಇಕ್ಕಟ್ಟಿನಲ್ಲಿ ಸಿಕ್ಕಿಸಿದ.

''ನಾವು ಜೀವಿಸುವುದೆಂತು?'' ಅವರೆಲ್ಲಾ ಒಕ್ಕೊರಲಿನಿಂದ ಮರು ಪ್ರಶ್ನಿಸಿದರು. ''ಹೇಗೆ?'' ಹರಿಯೂ ತನಗರಿವಿಲ್ಲದಂತೆ ಕೂಗಿದ. ತನ್ನ ಈ ಗಟ್ಟಿಯಾದ ಧ್ವನಿಯಿಂದ ಅವನಿಗೇ ಅಚ್ಚರಿಯಾಯಿತು.

''ನಿಮ್ಮನ್ನು ಸಮಾಧಾನಗೊಳಿಸಲು, ಅವರು ತಮ್ಮ ಜನರನ್ನು ಕಳಿಸುತ್ತಾರೆ. ಆ ಜನ ಸುಳ್ಳು ಆಶ್ವಾಸನೆಗಳಿಂದ ಸಮಾಧಾನ ಹೇಳುತ್ತಾರೆ. ನಿಮಗೆ ಕೆಲಸ ಸಿಗುವುದೆಂದು ತಿಳಿಸುತ್ತಾರೆ. ನಾನು ಸ್ಪಷ್ಟವಾಗಿ ಹೇಳುತ್ತೇನೆ, ಕೇಳಿ, ನಮ್ಮೆಲ್ಲರಿಗೂ ಅವರು ಕೆಲಸಗಳನ್ನು ಕೊಡಲಾರರು. ಶಿಕ್ಷಿತ ಇಂಜಿನಿಯರ್‌ಗಳು ಮತ್ತು ಸರ್ಕಾರಿ ಕಾಲೇಜುಗಳಲ್ಲಿ ಪದವಿ ಪಡೆದವರು ಕಾರ್ಖಾನೆಗಳನ್ನು ನಿರ್ವಹಿಸುತ್ತಾರೆ. ಯಾವಾಗಲೂ ಶಾಲೆಗೆ ಹೋಗದೆಯೇ

ಇತರರಿಗಾಗಿ ಆಹಾರವನ್ನು ಉತ್ಪಾದಿಸಲು ನಮ್ಮ ಜೀವನವನ್ನೇ ಸವೆಸುತ್ತಿರುವ ಮುಗ್ಧರಾದ ನಮ್ಮಲ್ಲಿ ಕೆಲವರಿಗೆ ಮಾತ್ರ ಕೆಲವು ಹುದ್ದೆಗಳನ್ನು ಕೊಡಬಹುದು. ಕಸ ಗುಡಿಸುವಂತಹ, ಕೂಲಿಗಳಂತಹ ಅತ್ಯಂತ ಕಡಿಮೆ ವೇತನದ ಕೆಲವು ಕೀಳು ಹುದ್ದೆಗಳನ್ನು ಮಾತ್ರ ಅವರು ನಮಗೆ ಕೊಡಬಹುದು. ಹೌದು, ನಮಗೆ ಸಿಗುವುದು ಅಂತಹ ಕೆಲಸಗಳು ಮಾತ್ರ. ಆದರೆ ಇಂಜಿನಿಯರ್‌ಗಳಿಗೆ ಒಳ್ಳೆಯ ವೇತನ ಸಿಗುತ್ತದೆ, ವಾಸಿಸಲು ಒಳ್ಳೆಯ ಮನೆಗಳು ಸಿಗುತ್ತವೆ. ಕಾರ್ಖಾನೆಗಳಿಗೆ ಐನೂರು ಎಕರೆ ಜಮೀನಿನ ಅಗತ್ಯ ಮಾತ್ರ ಇದೆಯೆಂದೂ, ವಸತಿಗಳ ಕಾಲನಿಗಳನ್ನು ಕಟ್ಟಲು ಹಾಗೂ ದೊಡ್ಡ ಕಾರ್ಖಾನೆಗಳ ಸುತ್ತ ಮುತ್ತ ಬರುವ ಸಣ್ಣ ಕಾರ್ಖಾನೆಗಳನ್ನು ನಿರ್ಮಿಸಲು ಸಾವಿರಾರು ಎಕರೆಗಳಷ್ಟು ನಮ್ಮ ಅತ್ಯುತ್ತಮ ಜಮೀನನ್ನು, ಮಹಾರಾಷ್ಟ್ರದಲ್ಲೇ ಅತ್ಯಂತ ಫಲವತ್ತಾದ ಭೂಮಿಯನ್ನು, ನಮ್ಮಿಂದ ಕಸಿದುಕೊಳ್ಳುತ್ತಾರೆ.''

''ನಮ್ಮ ತೆಂಗಿನ ಮರಗಳನ್ನು ಕಡಿದು ಹಾಕುತ್ತಾರೆ. ಕಡಲ ಮೀನುಗಳನ್ನು ಕೊಂದು ಹಾಕುತ್ತಾರೆ ತಮಗೆ ಉಪಯೋಗವಿಲ್ಲದ ನಮ್ಮನ್ನು ಹೊರ ಹಾಕುತ್ತಾರೆ. ಈ ರೀತಿ ಆಗುವುದಕ್ಕೆ ನಾವು ಅವಕಾಶ ಕೊಡಬೇಕೆ?'' ಅವನು ಗಟ್ಟಿಯಾಗಿ ಕೇಳಿದ.

''ಇಲ್ಲ, ಇಲ್ಲ, ಇಲ್ಲ'' ಜನ ಅಷ್ಟೇ ಗಟ್ಟಿಯಾಗಿ ಪ್ರತಿಧ್ವನಿಸಿದರು, ''ಹೀಗಾಗುವುದಕ್ಕೆ ನಾವು ಬಿಡುವುದಿಲ್ಲ, ನಾವು ಬಿಡುವುದಿಲ್ಲ.''

''ಹಾಗಿದ್ದಲ್ಲಿ ಮುಂಬೈಗೆ ನಮ್ಮೊಡನೆ ಬನ್ನಿ. ಮುಖ್ಯಮಂತ್ರಿ ಸಾಹೇಬರನ್ನು ಕಂಡು, ಅವರ ಯೋಜನೆಗಳ ಬಗ್ಗೆ ನಮ್ಮ ಅನಿಸಿಕೆಯನ್ನು ತಿಳಿಸೋಣ. ನಾವು ಅಲಿಬಾಗ್‌ನ ಜಿಲ್ಲಾ ಕಮಿಷನರ್ ಜೊತೆ ಈಗಾಗಲೇ ಮಾತನಾಡಿದ್ದೇವೆ. ಆದರೆ ಅವರು ನಮಗಾಗಿ ಏನೂ ಮಾಡಿಲ್ಲ. ಮಂತ್ರಿ ಸಾಹೇಬರೊಬ್ಬರು ಬಂದು,ನಮ್ಮೊಡನೆ ಮಾತನಾಡುವರೆಂದು ಹೇಳಲಾಯಿತು. ನಿಜವೆಂದರೆ, ನಾವು ಕಾದುಕೊಂಡು ನಿಂತಿದ್ದನ್ನು ಆತ ನೋಡಿದಾಗ, ಹೆದರಿ, ತಮ್ಮ ಕಾರೊಳಗೆ ಕುಳಿತು ಮುಂಬೈಗೆ ಪರಾರಿಯಾದರು, ನಮ್ಮನ್ನು ವಿಚಾರಿಸಿಕೊಳ್ಳಲು ಪೋಲಿಸರನ್ನು ಬಿಟ್ಟರು. ಪೋಲಿಸರು ತಮ್ಮ ಲಾಠಿಗಳ ನೆರವಿನಿಂದ ನಮ್ಮನ್ನು ಹೊರಹಾಕಿದರು. ಇಂತಹ ವರ್ತನೆಯನ್ನು ನಾವು ಸಹಿಸಲಾಗುವುದಿಲ್ಲ. ಪೋಲಿಸ್ ರಾಜ್ಯ ನಮಗೆ ಬೇಕಿಲ್ಲ'' ತನ್ನ ಉದ್ದನೆಯ ಕೂದಲು ಭುಜದ ಮೇಲೆ ಹಾರಾಡುತ್ತಿದ್ದಾಗ, ಅವನು ತನ್ನ ಕೈಗಳನ್ನು ಆಕಾಶದತ್ತ ಎತ್ತಿ ಗರ್ಜಿಸಿದ.

''ಪೋಲಿಸ್ ರಾಜ್ಯ ಬೇಕಿಲ್ಲ! ಪೋಲಿಸ್ ರಾಜ್ಯ ಬೇಕಿಲ್ಲ!'' ಎಂದು ಸಭಿಕರು ಹೇಳಿದರು. ಹರಿಯೂ ಉತ್ಸಾಹದಿಂದ ಆ ಮಾತುಗಳನ್ನೇ ಉಚ್ಚರಿಸುತ್ತಾ ತನ್ನ ಮುಂದೆ ನಿಂತಿದ್ದ ಹುಡುಗನೊಬ್ಬನ ಬೆನ್ನು ಬಡಿಯುತ್ತಿದ್ದ.

''ನಾವು ಈಗ ನೇರವಾಗಿ ಮುಖ್ಯಮಂತ್ರಿಯವರಲ್ಲಿಗೆ ಹೋಗೋಣ. ಅವರು ಹೊರಗೆ ಬಂದು ನಮ್ಮ ಮಾತು ಕೇಳದಿದ್ದಲ್ಲಿ, ಮುಂಬೈನಲ್ಲಿ ಅವರ ಕಛೇರಿಗೇ ಹೋಗಿ ನಮ್ಮ ಮಾತು ಕೇಳುವಂತೆ ಮಾಡೋಣ'' ಯುವಕ ಮತ್ತೆ ಗರ್ಜಿಸಿದ, ''ಯಾರು ನನ್ನೊಡನೆ ಬರುತ್ತೀರಿ? ನೀವು ಬರುತ್ತೀರಾ?''

''ಖಂಡಿತ, ಖಂಡಿತ, ಖಂಡಿತ'' ಇಡೀ ಗುಂಪೇ ಕೂಗಿತು. ಅಲಿಬಾಗ್‌ನ ಆಚೆ ಎಂದೂ ಹೋಗದಿದ್ದ, ಬಸ್ ಇಲ್ಲವೆ ದೋಣಿ ಶುಲ್ಕಕ್ಕಾಗಿ ಜೇಬಿನಲ್ಲಿ ಒಂದು ಬಿಡಿ ಕಾಸೂ ಇಲ್ಲದ ಹೆಂಗಸರು ಮತ್ತು ಮಕ್ಕಳೂ ಸಹ ಈ ಕೂಗಿನಲ್ಲಿ ಪಾಲ್ಗೊಂಡಿದ್ದರು.

''ಹಾಗಿದ್ದಲ್ಲಿ ನಾಳೆ ಮುಂಜಾನೆ ರೇವಾಸ್‌ನಲ್ಲಿ ಹಡಗುಕಟ್ಟೆಯಲ್ಲಿ ನನ್ನನ್ನು ಕಾಣಿರಿ. ಮೀನು ದೋಣಿಗಳಲ್ಲಿ ನಾವು ಹೋಗೋಣ. ಮುಂಬೈಗೆ ಯಾನ ಮಾಡೋಣ. ಮಂತ್ರಿ ಸಾಹೇಬರನ್ನು ಅವರ ಕಛೇರಿಯಲ್ಲಿ ಕಾಣೋಣ, ನಮ್ಮ ಮಾತು ಅವರ ಕಿವಿಗೆ ಬೀಳುವಂತೆ ಮಾಡೋಣ. ನಾವು ಬರುವುದನ್ನು ನೋಡಿದಾಗ ಅವರು ಭಯಗೊಳ್ಳುತ್ತಾರೆ. ಜಮೀನನ್ನು ಕಸಿದುಕೊಳ್ಳದಂತೆ, ನಮ್ಮ ಕಡಲನ್ನು ನಮ್ಮಿಂದ ತೆಗೆದುಕೊಳ್ಳದಂತೆ ಅವರಿಗೆ ಹೇಳೋಣ. ಭೂಮಿ ನಮ್ಮದು! ನಮ್ಮದು!''

''ನಮ್ಮದು! ನಮ್ಮದು! ನಮ್ಮದು!'' ಗಾಳಿಯಲ್ಲಿ ತೆಂಗಿನ ಮರಗಳು ತೂಗಾಡುವಂತೆ, ಕಡಲ ಮೇಲೆ ನೌಕಾಪಡೆಗಳು ಹಾರಾಡುವಂತೆ, ಎಲ್ಲರೂ ತಮ್ಮ ಕೈಗಳನ್ನು ಮೇಲೆತ್ತಿ ಬೀಸಿದರು.

* * *

ಅಂತೂ ಹರಿ ಅಂಗಡಿಯನ್ನು ತಲುಪಿದ. ಅಲಿಬಾಗ್‌ನ ಮಂಜುಗಡ್ಡೆಯ ಕಾರ್ಖಾನೆಯೊಂದು ಮೀನುಗಾರರಿಗೆ ಮಾರಾಟ ಮಾಡುವ ಸಲುವಾಗಿ ಕೆಲವು ಸಲ ಮಂಜುಗಡ್ಡೆಯನ್ನು ಈ ಅಂಗಡಿಗೆ ಕಳಿಸುತ್ತಿತ್ತು. ಆದರೆ ಇಂದು ಅದಿನ್ನೂ ಬಂದಿರಲಿಲ್ಲ. ಏಕೆ ತಡವಾಗಿದೆ? ರಸಗೊಬ್ಬರ ಕಾರ್ಖಾನೆಯ ನಿರ್ಮಾಣದ ವಿರುದ್ಧ ಚಳವಳಿ ಹೂಡಿರುವ ರೈತರು ಮತ್ತು ಮೀನುಗಾರರ ಬೃಹತ್ ಪ್ರದೇಶವೊಂದು ಹೆದ್ದಾರಿ ಸಂಚಾರವನ್ನು ತಡೆದಿರುವುದೇ ಇದಕ್ಕೆ ಕಾರಣವೆಂದು ಅವನಿಗೆ ಎಲ್ಲ ವಿಷಯವೂ ಗೊತ್ತು. ಆದರೆ, ಅವನಿಗೆ ಇಂದು ಮಂಜುಗಡ್ಡೆಯ ಅಗತ್ಯವಿದೆ. ಅವನಿಗೆ ಇಂದು ಮಾಡಲು ಬೇರೇನೂ ಕೆಲಸವಿಲ್ಲದ್ದರಿಂದ ಮಂಜುಗಡ್ಡೆಗಾಗಿ ಕಾಯುತ್ತಾ ಸಮೀಪದ ದಾಸವಾಳದ ಗಿಡಗಳ ಪೊದೆಯೊಂದರ ಪಕ್ಕದಲ್ಲಿ ಕುಳಿತ. ಅಲ್ಲಿನ ನೆರಳು ಮತ್ತು ಖಾಲಿ ಅಂಗಡಿಯ ಸುತ್ತಮುತ್ತಲ ಶಾಂತತೆಯು ಅವನಿಗೆ ನೆಮ್ಮದಿಯ ವಿಷಯವಾಗಿತ್ತು. ತಾನು ಏಕಾಂಗಿಯಾಗಿ ಯಾವ ಅಡ್ಡಿ ಆತಂಕವಿಲ್ಲದೆ ಚಿಂತಿಸುವುದು ಅವಶ್ಯಕವೆಂದು ಅವನಿಗನಿಸಿತ್ತು.

ಬೆಳಗ್ಗೆ ಮನೆಯನ್ನು ಬಿಟ್ಟಾಗಿನಿಂದ-ಏಕೆ, ವಾಸ್ತವಾಗಿ ಅದಕ್ಕೂ ಮುಂಚೆ ಹಿಂದಲ ರಾತ್ರಿಯಿಂದ ಅವನ ಸೋದರಿಯರು ಅವನನ್ನು ಏನೋ ಕೇಳಲು ತವಕಿಸುತ್ತಿರುವಂತೆ ಅನಿಸಿತ್ತು. ಆದರೆ ಅವರು ಏನನ್ನೂ ಕೇಳಿರಲಿಲ್ಲ. ಗುಂಪುಗಳಿಂದ ತಾನು ತಳ್ಳಲ್ಪಡುತ್ತಿದ್ದೇನೆ ಮತ್ತು ಈಗ ಈ ದಿಕ್ಕಿನಲ್ಲಿ ನೂಕಲ್ಪಟ್ಟು ಇಲ್ಲಿದ್ದೇನೆ ಎಂದು ಅವನಿಗೆ ಭಾಸವಾಯಿತು. ಈಗ ಯಾವ ಮಾರ್ಗವನ್ನು ಆರಿಸಬೇಕೆಂಬುದು ಅವನಿಗೆ ಗೊತ್ತಾಗುತ್ತಿಲ್ಲ.

ಅಂದು ಬೆಳಿಗ್ಗೆ, ಮರಳ ದಂಡೆಯಲ್ಲಿ ನಗರದ ಕಾವಲುಗಾರ ಮತ್ತು ಬಿಜುವಿನೊಡನೆ ನಡೆದ ಸಂಭಾಷಣೆಯಿಂದಾಗಿ, ಬಿಜುವಿನಲ್ಲಿ ಒಂದು ಕೆಲಸ ಕೇಳಬೇಕೆಂಬ ಅವನ ಉದ್ದೇಶಕ್ಕೆ ಭಂಗವಾಗಿತ್ತು. ಅವರ ಸಂಭಾಷಣೆಯ ಸಮಯದಲ್ಲಿ ವ್ಯಂಗ್ಯವಾಗಿ ಮಾತನಾಡುತ್ತಿದ್ದ ಆ ಕಾವಲುಗಾರ, ವೃದ್ಧನೂ, ಮುಂಗೋಪಿಯೂ ಆಗಿದ್ದ ಬಿಜುವಿಗಿಂತಲೂ ಮತ್ತು ದೋಣಿಯ ಮೇಲಿದ್ದ ಆ ಎಲ್ಲ ಗವಾರ ಕೆಲಸಗಾರರಿಗಿಂತಲೂ ಹಾಗೂ ಶಾಲೆಯನ್ನು ಬಿಟ್ಟು ಮಾಡಲೇನೂ ಕೆಲಸವಿಲ್ಲದೆ ಸುತ್ತ ನಿಂತು ಹಾಸ್ಯ ಮಾಡುತ್ತಾ ನಗುತ್ತಾ ನಿಂತಿದ್ದ ಪಡ್ಡೆ ಹುಡುಗರಿಗಿಂತಲೂ ಹೆಚ್ಚು ಬುದ್ಧಿವಂತನೂ, ನಿಪುಣನೂ ಆಗಿದ್ದು ಸಮಂಜಸ ರೀತಿಯಲ್ಲಿ ಮಾತನಾಡುತ್ತಿದ್ದನೆಂಬುದು ಹರಿಗೆ ಗೊತ್ತಾಗಿತ್ತು. ಬಿಜುವಿನಲ್ಲಿ ಕೆಲಸ ಕೇಳಬೇಕೆಂಬ

ಅಭಿಪ್ರಾಯವನ್ನೇ ಅವನು ತೋರೆದ. ಪಡ್ಡೆಗಳು, ಸೋಮಾರಿಗಳು ಮತ್ತು ಹಳ್ಳಿ ಹುಡುಗರ ಪಕ್ಷಕ್ಕಿಂತ ನಗರದ ಆ ಮನುಷ್ಯನ ಪಕ್ಷ ಸೇರುವುದು ಒಳಿತೆಂದು ಭಾವಿಸಿದ. ಕಾವಲುಗಾರನ ಮಾತುಗಳಲ್ಲಿದ್ದ ವಿವೇಚನೆ ಮತ್ತು ವಾದಸರಣಿ ಸರಿಯೆನಿಸಿದರೂ, ಅವನು ಮಾತನಾಡಿದ ರೀತಿ ಅವನಿಗೆ ನೋವುಂಟು ಮಾಡಿತ್ತು ಮತ್ತು ಅವನಿಗೆ ವಿರುದ್ಧವಾಗಿ ತಿರುಗಲು ಪ್ರೇರೇಪಿಸಿತ್ತು.

ಅಲಿಬಾಗ್‌ನ ಯುವಕನ-ಅವನ ಹೆಸರು ಅವಾರ್‌ಕರ್ ಎಂದೂ, ಕಳೆದ ಚುನಾವಣೆಯಲ್ಲಿ ತಾವೇ ಅವನನ್ನು ಮಹಾರಾಷ್ಟ್ರ ವಿಧಾನ ಸಭೆಯ ಸದಸ್ಯನನ್ನಾಗಿ ಆರಿಸಿದ್ದಾಗಿಯೂ ಯಾರೋ ಹರಿಗೆ ಹೇಳಿದ್ದರು-ಪ್ರಭಾವಶಾಲಿ ಭಾಷಣವನ್ನು ಕೇಳಿದ ನಂತರ, ತನ್ನಲ್ಲಿ ಜಮೀನು ಅಥವಾ ದೋಣಿ ಇಲ್ಲದಿದ್ದಾಗ್ಯೂ ತನ್ನ ಸಹ ಗ್ರಾಮಸ್ಥ-ರೊಡನೆ ಭುಜಕ್ಕೆ ಭುಜ ಕೊಟ್ಟು ನಿಂತು, ಸಾಂಪ್ರದಾಯಿಕ ರೀತ್ಯ ತಮ್ಮ ಜೀವನವನ್ನು ನಿರ್ವಹಿಸುತ್ತಿರುವ ರೈತರು ಮತ್ತು ಮೀನುಗಾರರ ಹಕ್ಕುಗಳನ್ನು ರಕ್ಷಿಸಲು ಹೋರಾ-ಡಬೇಕೆಂದು ಹರಿ ಭಾವಿಸಿದ.

ತಾನು ಈಗೇನು ಮಾಡಬೇಕು? ತಾನೂ ಗ್ರಾಮಸ್ಥರ ಜೊತೆ ಸೇರಿ ಮುಂಬೈಗೆ ಹೋಗಿ ತಮ್ಮ ಜಮೀನು ಮತ್ತು ಕಸುಬನ್ನು ಕಸಿದುಕೊಳ್ಳುವುದರ ವಿರುದ್ಧ ಪ್ರತಿಭಟನೆಯಲ್ಲಿ ಸೇರಬೇಕೇ? ಇಲ್ಲವೆ ಸರ್ಕಾರ ಮತ್ತು ಕಾರ್ಖಾನೆಯ ಪರ ಸೇರಿ, ದೂರದ ನಗರದಿಂದ ತಮಗಾಗಿ ಬರುತ್ತಿರುವ ನೂತನ ಮತ್ತು ವಿಭಿನ್ನ ರೀತಿಯ ಕೆಲಸಕ್ಕಾಗಿ ಪ್ರಯತ್ನಿಸಬೇಕೆ? ಈ ಪ್ರಶ್ನೆಗಳು ಅವನ ಮನಸ್ಸನ್ನು ಕಲಕುತ್ತಿದ್ದಾಗ, ಮುಂಬೈಗೆ ಹೋಗುವ ಆಲೋಚನೆಯೇ ಅವನಿಗೆ ಹೆಚ್ಚು ಉತ್ತೇಜಕವಾಗಿ ಕಂಡಿತು. ಇತರ ಗ್ರಾಮಸ್ಥರ ಜೊತೆ ಸೇರಿ ತನ್ನ ಜಮೀನಿಗಾಗಿ ಹೋರಾಡುವ ಭಾವನೆಗೆ ಆಕರ್ಷಿತನಾದ್ದು ಒಂದು ಅಂಶವಾದರೆ, ಅಂತೂ ಕಡೆಗೆ ಮುಂಬೈಗೆ ಹೋಗುವ ಅವಕಾಶ ಸಿಗುವುದು ಮತ್ತೊಂದು ಅಂಶವಾಗಿತ್ತು. ದೀರ್ಘಕಾಲದಿಂದ ತಾನು ಹಂಬಲಿಸುತ್ತಿದ್ದ ಆ ನಗರಕ್ಕೆ ಹೋಗುವ ಅವಕಾಶ ಈಗ ಅವನಿಗೆ ಲಭಿಸಿದೆ. ಯಾವುದೇ ಸ್ಥಳಕ್ಕೂ ಎಂದೂ ಹೋಗಿರದೆ, ಹಾಗೂ ಕೈಯಲ್ಲಿ ಬಿಡಿಗಾಸೂ ಇಲ್ಲದೆ ಈ ಹುಡುಗ ಅಂತಹ ಸಾಹಸ ಕೈಗೊಳ್ಳುವಷ್ಟು ಧೈರ್ಯಶಾಲಿಯಾಗುತ್ತಾನೆಯೆ?

ನೆರಳಲ್ಲಿ ತಲೆಬಗ್ಗಿಸಿಕೊಂಡು ಕುಳಿತು, ಕಡ್ಡಿಯೊಂದರಿಂದ ದೂಳಿನಲ್ಲಿ ಚಿತ್ರ ಬಿಡಿಸುತ್ತಿದ್ದಾಗ, ಲಾರಿ ಬಂದಿತು. ಗೋಣಿ ಚೀಲದಲ್ಲಿ ಸುತ್ತಿದ್ದ ಮಂಜುಗಡ್ಡೆಯ ದೊಡ್ಡ ತುಂಡನ್ನೂ, ಜೊತೆಗೆ ಚಿಮಣಿಎಣ್ಣೆ, ಸಕ್ಕರೆ, ಕಾಕಂಬಿ, ಗೋಧಿ ಮುಂತಾದ ದಿನಸಿಗಳನ್ನೂ ಅದು ತಂದಿತ್ತು. ಹರಿ ಆತುರಾತುರವಾಗಿ ಎದ್ದು ಮಂಜಿನಗಡ್ಡೆಯ ತುಂಡಿನ ಪಕ್ಕದಲ್ಲಿ ನಿಂತ. ತನ್ನ ಐಸ್-ಬಾಕ್ಸ್‌ಗೆ ಹಿಡಿಸುವ ರೀತಿಯಲ್ಲಿ ಅಂಗಡಿಯವನು ಮಂಜುಗಡ್ಡೆಯನ್ನು ಅತ್ತಿತ್ತ ಕೊಚ್ಚಿದ. ಹರಿ ತನ್ನಲ್ಲಿದ್ದ ಹರಕು ಬಟ್ಟೆಯಲ್ಲಿ ಆ ಚೂರುಗಳನ್ನು ಆರಿಸಿ ಇಟ್ಟುಕೊಂಡು ಅಂಗಡಿಯವನಿಗೆ ಕೋಪ ಬರದಂತೆ, ದುಡ್ಡು ಕೊಟ್ಟು, ಸಣ್ಣ ಚೂರೊಂದನ್ನು ಕೊಂಡು, ಅದು ಕರಗುವ ಮುನ್ನವೇ ಮನೆ ಸೇರಲು ಶೀಘ್ರವಾಗಿ ಮನೆಯತ್ತ ಹೊರಟ. ಕಡಲ ದಂಡೆಯ ಮೇಲೆ ನಡೆದು ಹೋದ. ತನ್ನ ತಾಯಿಗೆ ಮತ್ತು ಲೀಲಳಿಗೆ ಏನನ್ನೋ ತೆಗೆದುಕೊಂಡು ಹೋಗುತ್ತಿರುವ ಸಂತೋಷ

ಅವನಿಗಾಯಿತು. ಸ್ವಲ್ಪ ಸಮಯ ಚಿಂತೆಯೂ ದೂರವಾಯಿತು.

* * *

ಅವನು ಕೊರಕಲ ಸಮೀಪ ಬಂದಾಗ ಏನೋ ಅನರ್ಥವಾಗಿದೆಯೆಂಬ ಭಾವನೆ ಅವನಿಗುಂಟಾಯಿತು. ಸ್ತಬ್ಧವಾಗಿದ್ದ ಮನೆಯಲ್ಲಿ ತನ್ನ ಸೋದರಿಯರ ಅಳು ಸ್ಪಷ್ಟವಾಗಿ ಕೇಳಿಸಿತು. ಬಹುಶಃ ತನ್ನ ತಾಯಿ... ಕಾಯಿಲೆ ಬಿದ್ದಿದ್ದ ತನ್ನ ತಾಯಿ... ಹರಿ ಓಡಿದ.

''ಲೀಲ!'' ಅವನು ಕೂಗಿದ, ''ಲೀಲ! ಏನಾಯಿತು?''

ಬಾಗಿಲ ಬಳಿ ನಿಂತಿದ್ದ ಅವಳು ಬಾಗಿಲಿಗೆ ತಲೆಯಿಟ್ಟು ಅಳುತ್ತಿದ್ದಳು, ಆದರೆ ತನ್ನ ತಂಗಿಯರಷ್ಟು ಜೋರಾಗಿ ಅಲ್ಲ. ಆದರೂ ಮೆಲ್ಲನೆಯ ಅವಳ ಅಳು ಹೃದಯ ವಿದ್ರಾವಕವಾಗಿತ್ತು. ಅವನು ಧಾವಿಸಿ ಹೋಗಿ, ಅವಳ ಕೈ ಹಿಡಿದು ಕೇಳಿದ, ''ಅಮ್ಮ? ಅಮ್ಮನೆ? ಇಗೋ, ಅವಳಿಗಾಗಿ ಮಂಜುಗಡ್ಡೆ...''

ಅಲ್ಲವೆನ್ನುವಂತೆ ಲೀಲ ತಲೆಯಾಡಿಸಿ, ತನ್ನ ಕಣ್ಣುಗಳನ್ನು ಮುಚ್ಚಿಕೊಂಡು ಗುಡಿಸಿಲ ಮೂಲೆಯತ್ತ ಕೈತೋರಿಸಿದಳು. ಅವನು ಒಳಗೆ ಹೋದ. ಅವನ ಕಾಲುಗಳು ನಡುಗುತ್ತಿದ್ದವು. ತನ್ನಕ್ಕ ತೋರಿಸಿದ ಕಡೆ ನೋಡಿದ. ಅಲ್ಲಿ ಪಿಂಟೊ ಕಾಣಿಸಿತು. ಅದು ನೆಲದ ಮೇಲೆ ಕಾಲು ಚಾಚಿ ಬಿದ್ದಿತ್ತು. ಕಡಲ ದಂಡೆಯಲ್ಲಿ ಬಿದ್ದ ಹಲಗೆಯಂತೆ ಅದು ಗಡುಸಾಗಿತ್ತು. ಅದರ ಕೂದಲು ಹೊಳಪನ್ನು ಕಳೆದುಕೊಂಡಿತ್ತು. ಅದರ ಕಣ್ಣುಗಳು ತೆರೆದಿದ್ದವು, ಆದರೆ ನಿಸ್ತೇಜವಾಗಿದ್ದವು. ಅವನು ನಾಯಿಯ ಪಕ್ಕದಲ್ಲಿ ಮಂಡಿಯೂರಿ ಕುಳಿತ. ಅದನ್ನೇ ದಿಟ್ಟಿಸಿ ನೋಡಿದ. ಆದರೆ, ಮುಟ್ಟುವ ಧೈರ್ಯ ಬರಲಿಲ್ಲ.

ಬೇಲ ಮತ್ತು ಕಮಲ ಬಂದು ಅವನಿಗೆ ಆತುಕೊಂಡರು. ತಮ್ಮ ಅಳು ಮುಖಗಳನ್ನು ಅವನ ಭುಜಕ್ಕೆ ಬಡಿಯುತ್ತಾ, ಅವನ ಕೈಗಳನ್ನು ಎಳೆಯುತ್ತಿದ್ದರು.

''ಇದಕ್ಕೆ ಏನಾಯಿತು?'' ಹರಿ ಮೆತ್ತಗೆ ಕೇಳಿದ, ''ಬೆಳಿಗ್ಗೆ ಇದು ಚೆನ್ನಾಗಿ ಇತ್ತಲ್ಲ.''

ಲೀಲ ಅಳುತ್ತಾ ಬಂದು ಅವನ ಹಿಂದೆ ನಿಂತಳು, ''ಅದಕ್ಕೆ ವಿಷ ಹಾಕಿದ್ದಾರೆ. ಪಿಂಟೊ ಹಠಾತ್ತನೆ ಅಸ್ವಸ್ಥವಾಯಿತು... ಇಲ್ಲಿ, ಮನೆಯ ಮುಂದೆ ಕಕ್ಕಲಾರಂಭಿಸಿತು. ರಕ್ತ... ಅದರ ವಾಂತಿಯಲ್ಲಿ ರಕ್ತ... ನಂತರ ಅದು ಕೆಳಗೆ ಬಿದ್ದು ಸತ್ತುಹೋಯಿತು. ಅದು ವಿಷ... ನನಗೆ ಗೊತ್ತು'' ದುಃಖ ಮತ್ತು ಭಯದಿಂದ ಲೀಲ ರೋದಿಸಿದಳು.

''ಪಿಂಟೊವಿಗೆ ಯಾರು ವಿಷ ಹಾಕುತ್ತಾರೆ?'' ತನ್ನ ಕೈಲಿದ್ದ ಮಂಜುಗಡ್ಡೆಯ ತುಂಡನ್ನು ಕೆಳಗೆ ಹಾಕುತ್ತಾ, ಹರಿ ದಿಗ್ಭ್ರಮೆಯಿಂದ ಕೇಳಿದ. ಅದು ಇನ್ನೂ ಸ್ವಲ್ಪ ಉಸಿರಾಡುತ್ತಿರ-ಬಹುದೇನೋ, ಅದರ ದೇಹದಲ್ಲಿ ಇನ್ನೂ ಸ್ವಲ್ಪ ಜೀವವಿರಬಹುದೇನೋ ಎಂದು ಪರೀಕ್ಷಿಸುವಂತೆ ಒದ್ದೆಯಾದ ಮತ್ತು ನಿಸ್ತೇಜವಾದ ಅದರ ಕೂದಲ ಮೇಲೆ ಕೈಯಾಡಿಸಿದ.

''ಯಾರೆಂದು ನನಗೆ ಗೊತ್ತು'' ಬೇಲ ಹೇಳಿದಳು, ''ಅವನೇ... ಆ ಕೆಟ್ಟ ಮುದುಕ... ಅಲ್ಲಿ ವಾಸಿಸುವ ಆ ಕುಡುಕ'' ಎಂದು ತಮ್ಮ ನೆರೆಯ ಜಮೀನಿನತ್ತ ಕೈ ತೋರಿಸಿದಳು.

''ಹೌದು ಅವನೇ.. ಅವನೇ ನಮಗೆ ಬೆದರಿಕೆ ಹಾಕಿದ್ದ'' ಲೀಲ ದುಃಖದಿಂದ ಹೇಳಿದಳು, ''ನಮಗೆ ಶಿಕ್ಷಿಸುವುದಾಗಿ ಅವನು ಹೇಳಿದ್ದ. ಪಿಂಟೊವನ್ನು ಸಾಯಿಸುವುದಾಗಿ ಅವನು ಹೇಳಿದ್ದ.''

''ಏಕಂತೆ?''ಹರಿ ಕೋಪದಿಂದ ಕೇಳಿದ. ಈಗ ಅವನೂ ಮೆತ್ತಗೆ ಅಳಲಾರಂಭಿಸಿದ್ದ.

"ನಮ್ಮ ಪಿಂಟೊವನ್ನು ಅವನು ಏಕೆ ಸಾಯಿಸಿದ?"

"ಅವನು ನಮ್ಮನ್ನು ದ್ವೇಷಿಸುತ್ತಾನೆ" ಬೇಲ ಮತ್ತು ಕಮಲ ಅಳುತ್ತಾ ಹೇಳಿದರು.

"ಅವನು ನಮಗೆ ಶಿಕ್ಷಿಸುವುದಾಗಿ ಹೇಳಿದ್ದ" ಲೀಲ ನೆನಪಿಗೆ ತಂದುಕೊಳ್ಳುತ್ತಾ ಹೇಳಿದಳು, "ಸ್ವಲ್ಪ ಹೆಂಡಕ್ಕಾಗಿ ಅಪ್ಪ ದುಡ್ಡುಕೊಟ್ಟಿರಲಿಲ್ಲವಂತೆ. ಅಪ್ಪ ತನಗೆ ಹಣ ಕೊಡಬೇಕಾಗಿದೆಯೆಂದೂ ಸಾಲಗಾರನೆಂದೂ ಅವನು ಹೇಳಿದ್ದ."

"ಸಾಲ, ಸಾಲ, ಸಾಲ" ಹರಿ ಹಲ್ಲು ಕಡಿಯುತ್ತಾ ಹೇಳಿದ, "ಹೆಂಡದಿಂದಾಗಿ ಅಪ್ಪ ಸದಾ ಸಾಲದಲ್ಲಿರುತ್ತಾನೆ." ಅವನು ಎದ್ದು ಸತ್ತ ನಾಯಿಯನ್ನೂ, ಅಳುತ್ತಿದ್ದ ಸೋದರಿಯ-ರನ್ನೂ ಬಿಟ್ಟು ಹೊರಗೆ ನಡೆದ. ತಾನು ದೂರ ಹೋಗಬೇಕು. ತಾನು ರೇವಾಸ್‌ಗೆ ಹೋಗಬೇಕು, ಮುಂಬೈಗೆ ಹೋಗಬೇಕು. ಈ ದುಃಖತಪ್ತ ಮನೆಯನ್ನೂ, ಹೆದರಿರುವ ಸೋದರಿಯರನ್ನೂ, ಅಸ್ವಸ್ಥಳಾದ ತಾಯಿಯನ್ನೂ ಮತ್ತು ಕುಡುಕ ತಂದೆಯನ್ನೂ ಬಿಟ್ಟು ಹೋಗಬೇಕು. ಎಂದೂ ವಾಪಸ್ ಬರಬಾರದು. ಅವರನ್ನೆಲ್ಲಾ ತೊರೆದು ಓಡಬೇಕು. ತನಗಾದಷ್ಟು ದೂರ, ಬಹುದೂರ ಓಡಿ ಹೋಗಬೇಕು.

# 5

ಮಾರುದಿನ ಬೆಳಿಗ್ಗೆ, ಸೂರ್ಯೋದಯದೊಂದಿಗೇ ಬಿಜುವಿನ ದೋಣಿಯನ್ನು ಕಡಲಿಗೆ ಬಿಡಲಾಗುತ್ತದೆಂಬುದು ಹರಿಗೆ ಗೊತ್ತಿರಲಿಲ್ಲ. ಅದನ್ನು ನೋಡುವ ಸಲುವಾಗಿ, ಹಸಿರು-ಮರಗಳ ಹಿಂದೆ ಮರೆಯಾಗಿದ್ದ ತಮ್ಮ ಗುಡಿಸಿಲುಗಳಿಂದ ಬಂದ ಹಳ್ಳಿಗರು, ಫಳಫಳನೆ ಹೊಳೆಯುತ್ತಿದ್ದ ಬಿಳಿ ಮರಳ ದಂಡೆಯಲ್ಲಿ ಜಮಾಯಿಸಿದ್ದರು. ದೋಣಿಯ ಮೇಲೆ ಬಾವುಟಗಳ ಮತ್ತು ಭಿತ್ತಿಪಟಗಳ ಸಮೂಹವನ್ನೇ ಬಿಜುವಿನ ಹೆಂಡತಿ ಹಾರಿಸಿದ್ದಳು. ಕಡುಗೆಂಪು, ಕಡುನೀಲಿ ಮತ್ತು ಹಸಿರು ಬಣ್ಣದ ತನ್ನ ಹಳೆಯ ಸೀರೆಗಳನ್ನು ಕತ್ತರಿಸಿ, ಉದ್ದನೆಯ ಭಿತ್ತಿಪಟಗಳನ್ನು ತಯಾರಿಸಿದ್ದಳು. ಅಂತೆಯೇ ಕಾವಿ, ಕಡುಗೆಂಪು ಮತ್ತು ನೀಲಿ ಬಣ್ಣಗಳ ಸೀರೆಯ ತುಂಡುಗಳನ್ನು ಒಟ್ಟಿಗೆ ಹೊಲಿದು ಅವುಗಳಿಂದ ಬಾವುಟಗಳನ್ನೂ ನಕ್ಷತ್ರಗಳನ್ನೂ ಹೂಗಳ ವಿನ್ಯಾಸಗಳನ್ನೂ ರಚಿಸಿದ್ದಳು. ಹೊಸದಾಗಿ ಬಣ್ಣದಲ್ಲಿ ಬರೆದಿದ್ದ ನಾಮಫಲಕವನ್ನು ಉಜ್ವಲ ನೀಲಿ ಮತ್ತು ಕಡುಗೆಂಪು ಬಣ್ಣಗಳ ಕ್ಯಾಬಿನ್ನಿನ ಗೋಡೆಯ ಮೇಲೆ ನೇತುಹಾಕಲಾಗಿತ್ತು. ಬಿಜು, ತನ್ನ ಮಡಚು-ಕುರ್ಚಿಯ ಮೇಲೆ ವಿಜೃಂಭಣೆಯಿಂದ ಕುಳಿತಿದ್ದ. ಹೆಮ್ಮೆಯಿಂದ ಉಬ್ಬಿಹೋಗಿದ್ದ ತನ್ನ ಎದೆಯ ಮೇಲೆ ಕೈಗಳನ್ನು ಕಟ್ಟಿಕೊಂಡಿದ್ದ.

ಹಿಂದಿನ ಸಂಜೆಯೇ ದೋಣಿ ಕಟ್ಟಿದವರು ಎರಡು ಎತ್ತು-ಯಂತ್ರಗಳನ್ನು ಮರಳಿನೊಳಗೆ ಹೂತಿದ್ದರು. ದೋಣಿ ಮತ್ತು ಎತ್ತು-ಯಂತ್ರಗಳ ನಡುವೆ ಬಲವಾದ ಹಗ್ಗಗಳನ್ನು ಬಿಗಿಯಲಾಗಿತ್ತು. ಅಂದು ಬೆಳಿಗ್ಗೆ ದೋಣಿಯಿಂದ ಕಡಲ ತೀರದವರೆಗೆ ತೆಂಗಿನ ಮರದ ಎರಡು ಕಾಂಡಗಳನ್ನು ಹಾಕಲಾಗಿತ್ತು. ದೋಣಿ ಸುಲಭವಾಗಿ ಜಾರುವಂತೆ ಮಾಡಲು ಒಬ್ಬ ಮನುಷ್ಯ ಡಬ್ಬದ ತುಂಬ ಇದ್ದ ಕಪ್ಪು ಎಣ್ಣೆಯನ್ನು ಆ ಕಾಂಡಗಳಿಗೆ ಬಳಿಯುತ್ತಿದ್ದ. ದೋಣಿ ಕಡಲಿನಲ್ಲಿ ಇಳಿದ ಕೂಡಲೇ ಸುತ್ತಮುತ್ತಲಿದ್ದವರಿಗೆ ಹಂಚಲು, ಬಿಜುವಿನ ಹೆಂಡತಿ ಮತ್ತು ಮಗಳು, ತಟ್ಟೆಯಲ್ಲಿ ಸಿಹಿ ತಿಂಡಿಯನ್ನು ಹಿಡಿದು ನಿಂತಿದ್ದರು. ಕಪ್ಪು ಮತ್ತು ಬಿಳಿ ಬಣ್ಣಗಳಲ್ಲಿ ಎರಡು ದೊಡ್ಡ ಕಣ್ಣುಗಳನ್ನು ಬರೆದಿದ್ದ ದೋಣಿಯ ಮೂತಿಯ ಬಳಿ ಈಡುಗಾಯಿ ಒಡೆಯಲು ಬಿಜುವಿನ ಹೆಂಡತಿ, ತೆಂಗಿನ ಕಾಯಿ ಹಿಡಿದು ಮುಂದೆ ಬಂದಳು. ಎಲ್ಲರ ಕೂಗು ಮತ್ತು ಹರ್ಷಗಳ ಮಧ್ಯೆ ಆ ಈಡುಗಾಯಿ ಒಡೆದು ಚೂರು ಚೂರಾಯಿತು.

ಆಗ ದೋಣಿಯನ್ನು ಸ್ವಲ್ಪ ವಾಲಿಸಿ, ಎಣ್ಣೆ ಸವರಿದ ಮರದ ಕಾಂಡಗಳ ಮೇಲೆ ಅದನ್ನು ಜಾರಿಸಲಾಯಿತು. ಎತ್ತು-ಯಂತ್ರಗಳ ಹೊರಗೆ, ಕೈಗಳಂತೆ ಕಾಣುತ್ತಿದ್ದ ಹಲವಾರು ಬೊಂಬುಗಳನ್ನು ಹಿಡಿದು, ಬೆವರಿಳಿಯುತ್ತಿದ್ದ ದೃಢಕಾಯರಾದ ಕೆಲಸಗಾರರು, ಅದನ್ನು ತಿರುಗಿಸುತ್ತಾ ಹಗ್ಗಗಳನ್ನು ಉತ್ಸಾಹದಿಂದ ಬಿಚ್ಚಲಾರಂಭಿಸಿದರು. ಈಗ ಯಾವ ಹಗ್ಗದ

ತಡೆಯೂ ಇಲ್ಲದ ದೋಣಿಯು, ಎಣ್ಣೆ ಸವರಿದ ದಿಮ್ಮಿಗಳ ಮೇಲೆ ತತ್ತರಿಸಿ, ಮುಂದೆ ಸಾಗುತ್ತಾ ಅಪಾಯಕಾರಿ ರೀತಿಯಲ್ಲಿ ಒಂದು ಪಾರ್ಶ್ವಕ್ಕೆ ವಾಲಿದ್ದರಿಂದ, ತಮ್ಮ ಪ್ರಾಣವುಳಿಸಿಕೊಳ್ಳಲು ಎಲ್ಲರೂ ಹಗ್ಗಗಳನ್ನು ಅಲ್ಲಲ್ಲೇ ಎಸೆದು ಪಲಾಯನ ಮಾಡಿದರು. ಕುಡುಕನಂತೆ ವಾಲಾಡು-ತ್ತಿದ್ದ ದೋಣಿ ಒಂದು ಪಕ್ಕಕ್ಕೆ ಮಗುಚಿಕೊಂಡು ಮರಳ ಮೇಲೆ ಬಿದ್ದಿತು.

ಬಿಜುವಿನ ಮುಖದ ಮೇಲಿದ್ದ ಮಂದಹಾಸ ಅಳಿಸಿ ಹೋಗಿ, ಅದರ ಸ್ಥಾನವನ್ನು ಕಡುಗಪ್ಪಿನ ಛಾಯೆ ಆವರಿಸಿತು. ಅವನು ತನ್ನ ಮಡುಚು-ಕುರ್ಚಿಯಿಂದೆದ್ದು, ಆದದ್ದೇ-ನೆಂಬುದನ್ನು ನೋಡಲು ಕೂಗಾಡುತ್ತಾ ಮುಂದೆ ಬಂದ. ಅವನ ಹೆಂಡತಿ ಮತ್ತು ಮಗಳು ಸಿಹಿತಿಂಡಿ ತಟ್ಟೆಯನ್ನು ಬಲವಾಗಿ ಹಿಡಿದುಕೊಂಡು ಹತಾಶೆಯಿಂದ ಮೌನವಾಗಿ ನಿಂತಿದ್ದರು. ಸುತ್ತಲೂ ನೋಡುತ್ತಾ ನಿಂತಿದ್ದ ಹುಡುಗರು ಗಹಗಹಿಸಿ ನಗುತ್ತಾ, ಹುಯ್ಲೆಬ್ಬಿಸಿದರು. ಅಲ್ಲೇ ನಿಂತಿದ್ದ ದೋಣಿ ಕಟ್ಟುವವರೂ ಸಹ ಪೆಚ್ಚುಪೆಚ್ಚಾಗಿ ಹಲ್ಕಿರಿಯುತ್ತಿದ್ದರು. ಮುಂದೇನು ಮಾಡಬೇಕೆಂಬುದು ಯಾರಿಗೂ ಗೊತ್ತಿರಲಿಲ್ಲ.

ಬಿಜು ಕೆಲಸಗಾರರಿಗೆ ಶಾಪ ಹಾಕುತ್ತಾ, ಅವರನ್ನು ಬೈಯಲಾರಂಭಿಸಿದ, ''ಈ ಕಾರ್ಯಕ್ಕಾಗಿ ಅಲಿಬಾಗ್‌ನಿಂದ ನನ್ನ ಕೆಲಸಗಾರರನ್ನೇ ಕರೆತರಬೇಕಾಗಿತ್ತು. ಮಣ್ಣುಗೆಲಸ ಮಾಡುವ ಮೂರ್ಖರಿಗೇನು ಗೊತ್ತು, ದೋಣಿ ವಿಷಯ?''

''ನಿನ್ನ ಅಲಿಬಾಗ್ ಜನ ಇಂದು ಎಲ್ಲಿಗೆ ಹೋಗಿದ್ದಾರೆ?'' ಕೈಗಳನ್ನು ಕಟ್ಟಿಕೊಂಡು ನೋಡುತ್ತಾ ನಿಂತಿದ್ದ ಒಬ್ಬ ಕೇಳಿದ.

''ಮುಂಬೈ ದೋಣಿ ಹಿಡಿಯಲು ಅವರೆಲ್ಲಾ ಇಂದು ರೇವಾಸ್‌ಗೆ ಹೋಗಿದ್ದಾರೆ.'' ಒಬ್ಬ ಹುಡುಗ ನಗುತ್ತಾ ಹೇಳಿದ, ''ಸರ್ಕಾರ ಇಲ್ಲಿ ರಸಗೊಬ್ಬರ ಕಾರ್ಖಾನೆ ಕಟ್ಟದಂತೆ ತಡೆಯಲು ಅವರು ಪ್ರಯತ್ನಿಸುತ್ತಾರೆ. ತಮ್ಮ ಜೀವನಪರ್ಯಂತ ರೈತರಾಗಿ, ಮೀನುಗಾರ-ರಾಗಿ ಮತ್ತು ಮೂರ್ಖರಾಗಿಯೇ ಮುಂದುವರಿಯುವುದು ಅವರ ಇಚ್ಛೆ.'' ಕೆಟ್ಟದಾಗಿ ಉರುಳಿಕೊಂಡು ಬಿದ್ದಿದ್ದ ದೋಣಿಯ ಸುತ್ತಲಿನ ಅಸ್ತವ್ಯಸ್ತ ದೃಶ್ಯದತ್ತ ಕೈತೋರಿಸಿ ಗಹಗಹಿಸುತ್ತಾ ಆ ಹುಡುಗ ಮುಂದುವರಿಸಿದ, ''ಜೀವನವಿಡೀ ನಾವು ಇಲ್ಲಿರುವಂತಹ ದೋಣಿಗಳನ್ನು ಕಟ್ಟಿ, ಮುಳುಗಿ ಸಾಯುವ ಸಲುವಾಗಿ, ಅವುಗಳನ್ನು ಕಡಲಿಗೆ ಒಯ್ಯಬೇಕು.''

''ಓ, ಹಾಗೋ?'' ಬಿಜು ಅವನತ್ತ ತಿರುಗಿದ, ''ನಿನಗೆ ದೋಣಿ ಕಟ್ಟಲು ಬರುವುದಿಲ್ಲ, ಮೀನು ಹಿಡಿಯುವುದು ಗೊತ್ತಿಲ್ಲ. ಹೇಗೆ ಯಾನ ಮಾಡಬೇಕೆಂಬುದು ತಿಳಿಯದು.ನಿನಗೇನೂ ಗೊತ್ತಿಲ್ಲ - ನೀನೊಬ್ಬ ಶತ ಮೂರ್ಖ. ನಿನಗೆ ಬೇಕಾಗಿರುವುದು ಬಲವಾದ ಹೊಡೆತ ಅಷ್ಟೆ.''

''ಏಯ್ ಮುದಿಯ, ನಮಗೆ ಅದಕ್ಕಿಂತ ಒಳ್ಳೆ ವಿಷಯ ಗೊತ್ತು'' ಹುಡುಗ ಸಮಾಧಾನದಿಂದ ಉತ್ತರಿಸಿದ. ಅವನು ಹರಿಯ ಸ್ನೇಹಿತ ರಾಮು. ''ನಮಗೆ ಕಾರ್ಖಾನೆಯಲ್ಲಿ ಕೆಲಸ ಸಿಗುತ್ತೆ. ಆಗ ನಮ್ಮಲ್ಲಿ ಒಳ್ಳೆಯ ಸುರಕ್ಷಿತ ಹುದ್ದೆಯೂ, ಜೇಬು ತುಂಬ ಹಣವೂ ಇರುತ್ತದೆ. ಕೊಳೆತು ನಾರುವ ಮೀನು ಹಿಡಿಯಲು ನೀನು ಕಡಲಿನೊಡನೆ ಸೆಣಸುತ್ತಿರು. ಆಗ ನಿನಗೇ ತಿಳಿಯುತ್ತದೆ. ಚೆನ್ನಾಗಿ ಗೊತ್ತಿರುವುದು ಯಾರಿಗೆ, ನಿನಗೋ, ನಮಗೋ ಎಂಬುದು.'' ಮೆಚ್ಚುಗೆಯಿಂದ ಅವನ ಮಾತನ್ನು ಕೇಳುತ್ತಿದ್ದ ಇತರ ಎಲ್ಲ ಹುಡುಗರೂ ಆ ಮುದುಕ ಬಿಜು ಮತ್ತು ಅವನ ದೋಣಿಯನ್ನು ನೋಡಿ ನಗುತ್ತಾ, ''ಕುಂಬಳ ಬುರುಡೆ'' ಮತ್ತು ''ಖಾಲಿ ತೆಂಗಿನ ಕರಟ'' ಎಂದು ಆ ದೋಣಿಯನ್ನು ಪರಿಹಾಸ್ಯ ಮಾಡುತ್ತಿದ್ದರು.



ಬಿಜು ದಷ್ಟಪುಷ್ಟವಾದ ತನ್ನ ಕೈಗಳನ್ನೆತ್ತಿ, ''ತೊಲಗಿ, ನಾನು ದೊಣ್ಣೆಯಿಂದ ನಿಮ್ಮ ಬೆನ್ನು ಮೂಳೆ ಮುರಿಯುವ ಮುನ್ನ ಹೊರಟು ಹೋಗಿ'' ಎಂದು ಆರ್ಭಟಿಸಿದ.

ಹುಡುಗರು ನಗುತ್ತಾ ಹಿಂದಿರುಗಲಾರಂಭಿಸಿದರು. ಹುಡುಗರಲ್ಲೊಬ್ಬ ಕೇಳಿದ, ''ಹರಿ ಎಲ್ಲಿ? ಈ ತಮಾಷೆಯನ್ನು ನೋಡಲು ಅವನೇಕೆ ಬರಲಿಲ್ಲ?''

''ಗೊತ್ತಿಲ್ಲ''ರಾಮು ಹೇಳಿದ, ''ಅಲಿಬಾಗ್‌ನ ಜನರ ಜೊತೆ ಅವನೂ ರೇವಾಸ್‌ಗೆ ಹೋಗಿರಬಹುದಾ?''

''ಹಾಗೇನಾದರೂ ಹೊರಟಿದ್ದರೆ, ಅವನೊಬ್ಬ ಮೂರ್ಖ'' ಮತ್ತೊಬ್ಬ ಹೇಳಿದ.

ಹುಡುಗರು ಬೇರೆ ಬೇರೆಯಾದರು. ಕೆಲವರು ಮರಳನ್ನು ಒದೆಯುತ್ತಾ ಹೊರಟರು. ಮತ್ತೆ ಕೆಲವರು ಹಗ್ಗಗಳನ್ನು ಎಳೆದು ದೋಣಿಗೆ ಕಟ್ಟಲು ಕೆಲಸಗಾರರು ಪ್ರಯತ್ನಿಸಿ, ಸಾಧ್ಯವಾಗದೆ ಕೈಬಿಟ್ಟುದನ್ನು ನೋಡುತ್ತಾ ನಿಂತಿದ್ದರು. ''ಅಲೆಯು ಬರುವವರೆಗೆ ಕಾಯೋಣ'' ಎಂದು ಆ ಕೆಲಸಗಾರರು ಮುಖದಿಂದ ಬೆವರು ಒರೆಸಿಕೊಳ್ಳುತ್ತಾ ಮಾತನಾಡಿ-ಕೊಂಡರು. ''ಅಲೆಗಳು ದೋಣಿಯನ್ನು ನೇರವಾಗಿ ನಿಲ್ಲಿಸುತ್ತವೆ ಮತ್ತು ದೋಣಿ ತಾನೇ ತಾನಾಗಿ ಯಾನ ಪ್ರಾರಂಭಿಸುತ್ತದೆ'' ಎಂದು ಅವರು ಬಿಜುವಿಗೆ ಹೇಳಿ, ತಮಗೆ ತುಂಬ ದಣಿವಾಗಿರುವುದಾಗಿಯೂ, ತಮಗೆ ಚಹಾ ಬೇಕಾಗಿದೆಯೆಂದೂ ತಿಳಿಸಿ, ಅಲ್ಲಿಂದ ಹೊರಟು ಹೋದರು.

ಹೊಸ ಬಟ್ಟೆಗಳನ್ನು ಧರಿಸಿದ್ದ ಬಿಜು, ಅವನ ಹೆಂಡತಿ ಮತ್ತು ಮಗಳು ಮಾತ್ರ ನಿಸ್ಸಹಾಯಕರಾಗಿ ದೋಣಿಯನ್ನು ನೋಡುತ್ತಾ ಮರಳಲ್ಲಿ ನಿಂತಿದ್ದರು. ಸ್ವಲ್ಪ ಸಮಯದ ನಂತರ ಸೂರ್ಯನ ತೀಕ್ಷ್ಣ ಬಿಸಿಲು ಅವರನ್ನೂ ಅಲ್ಲಿಂದ ಓಡಿಸಿತು. ದೋಣಿಯನ್ನು ಎತ್ತಿ ನಿಲ್ಲಿಸುವಷ್ಟು ಬಲವಾದ ಅಲೆಗಳು ಬರಲಿಲ್ಲ. ಮರು ದಿನ ದೋಣಿಯನ್ನು ಎತ್ತಿ ನಿಲ್ಲಿಸಿ

ನೀರಿಗೆ ಬಿಡಲು ಜನ ಮತ್ತೆ ಪ್ರಯತ್ನಿಸಿದರು. ಆದರೆ ಅವರಿಗೆ ಉತ್ಸಾಹ, ಇಚ್ಛೆ ಮತ್ತು ಸಂಕಲ್ಪ ಭಾವನೆ ಇಲ್ಲದ್ದರಿಂದ ಅವರು ಅಂದೂ ಸಹ ವಿಫಲಗೊಂಡರು. ಕೆಲಸಗಾರರು ಪದೇ ಪದೇ ಇಂತಹ ಪ್ರಯತ್ನ ನಡೆಸಿದರು. ತಮ್ಮನ್ನು ಬಲಾತ್ಕರಿಸುತ್ತಿದ್ದಕ್ಕಾಗಿ ಅವರಿಗೆ ಬಿಜುವಿನ ಮೇಲೆ ಕೋಪ ಬಂದಿತ್ತು. ಅವರು ವಿಫಲರಾಗಿದ್ದಕ್ಕೆ ಬಿಜುವಿಗೂ ಅವರ ಮೇಲೆ ತುಂಬ ಕೋಪವಿತ್ತು. ಅಂತೂ ಒಂದು ರಾತ್ರಿ ದೋಣಿಯನ್ನು, ಕಡಲಿನಲ್ಲಿ ಅಲೆಗಳು ಬಂದು ಬಡಿಯುತ್ತಿದ್ದ ಸ್ಥಳಕ್ಕೆ ಯಾವ ಸಂಭ್ರಮವೂ ಇಲ್ಲದೆ, ಅಪಮಾನಕರ ರೀತಿಯಲ್ಲಿ ನೀರಿಗೆ ತೇಲಿ ಬಿಡಲಾಯಿತು.

ಆ ವೇಳೆಗೆ ಧುಲ್‌ನಿಂದ ಬಹು ದೂರ ಹೋಗಿದ್ದ ಹರಿ, 'ಜಲ್‌ಪರಿ' ದೋಣಿಯ ಬಗ್ಗೆ ಎಲ್ಲವನ್ನೂ ಮರೆತಿದ್ದ.

# 6

ಹರಿ ರೇವಾಸ್ ಅನ್ನು ತಲುಪಿದಾಗ ಸೂರ್ಯೋದಯವಾಗುತ್ತಿತ್ತು. ರಾತ್ರಿಯೇ ಅಲ್ಲಿ ಸೇರಿದ್ದ ಜನರು ಹಡಗುಕಟ್ಟೆಯ ಬಳಿ, ಏರಿಳಿಯುತ್ತಿದ್ದ ಸಣ್ಣ ದೋಣಿಗಳಲ್ಲಿ ಕುಳಿತುಕೊಳ್ಳುತ್ತಿದ್ದರು.

ಇಡೀ ರಾತ್ರಿಯನ್ನು ಎತ್ತಿನ ಗಾಡಿಯಲ್ಲೇ ಕಳೆದಿದ್ದ ಹರಿ. ಕೆಳಗಿಳಿದು, ಗಾಡಿಯವನಿಗೆ ಕೊಡಲು ಕೆಲವು ನಾಣ್ಯಗಳಿಗಾಗಿ ತನ್ನ ಜೇಬು ನೋಡಿದ. ಆದರೆ ಗಾಡಿಯವನು ತನ್ನ ಚಾವಟಿಯನ್ನು ಗಾಳಿಯಲ್ಲಿ ಬೀಸುತ್ತಾ, "ಹೋಗು, ಓಡು. ನೀನು ಹಿಡಿಯಬೇಕಾಗಿರುವ ದೋಣಿಗಳು ಅಲ್ಲಿವೆ. ನನ್ನದು ಬರುವುದು ಇನ್ನೂ ಸ್ವಲ್ಪ ತಡವಾಗುತ್ತದೆ. ಈ ಮಧ್ಯೆ ನಾನು ಒಂದು ಲೋಟ ಚಹಾ ಕುಡಿದು ಬರುತ್ತೇನೆ. ನನಗೇನು ಹಣ ಕೊಡಬೇಡ. ನಿನಗಾಗಿ ನಾನೇನೂ ಹೆಚ್ಚಿಗೆ ಮಾಡಿಲ್ಲ. ನಾನು ಇಲ್ಲಿಗೆ ಬರಲೇಬೇಕಾಗಿತ್ತು" ಎಂದು ಹೇಳಿ, ನಂತರ ಅವನು ಎತ್ತಿನ ಮೇಲೆ ಒಂದು ಸಲ ಚಾವಟಿಯಿಂದ ಬಾರಿಸಿದ. ಅದು ಗಾಡಿಯನ್ನು ಮುಂದಕ್ಕೆಳೆಯಿತು. ಗಾಡಿಯು ಗಡಗಡ ಶಬ್ದ ಮಾಡುತ್ತಾ, ರಸ್ತೆಯ ಪಕ್ಕದಲ್ಲಿದ್ದ ಚಹಾ ಅಂಗಡಿಯತ್ತ ಹೊರಟಿತು.

ಎತ್ತಿನ ಗಾಡಿಯ ಗಟ್ಟಿ ಹಲಗೆಯ ಮೇಲೆ ಇಡೀ ರಾತ್ರಿ ಕುಳಿತಿದ್ದ ಹರಿಯ ಮೈ ಜಡವಾಗಿತ್ತು. ರೇವಾಸ್‌ಗೆ ಬಸ್ ಹಿಡಿಯಬಹುದೆಂಬ ಆಶಯ ಅವನಿಗಿತ್ತು. ಕತ್ತಲಲ್ಲಿ, ಧುಲ್‌ನ ಬಳಿಯ ಹೆದ್ದಾರಿಯಲ್ಲಿ ನಿಂತು ಅವನು ಒಂದು ತಾಸು ಕಳೆದಿದ್ದ. ರೇವಾಸ್‌ಗೆ ಕೊನೆಯ ಬಸ್ ಹೊರಟು ಹೋಗಿರಬಹುದುದೆಂಬ ಅರಿವು ಅವನಿಗೆ ಬಂತು. ಆದ್ದರಿಂದ ಅವನು ಅಲ್ಲಿಗೆ ಬಂದ ಒಂದು ಎತ್ತಿನ ಗಾಡಿಯನ್ನು ನಿಲ್ಲಿಸಿ, ರೇವಾಸ್‌ಗೆ ಹೋಗಲು ಗಾಡಿಯಲ್ಲಿ ತನಗೆ ಸ್ಥಳ ಕೊಡಬೇಕೆಂದು ಕೋರಿದ್ದ, ಅದಕ್ಕೆ ಒಪ್ಪಿಗೆಯೂ ದೊರಕಿತ್ತು.

"ಬಾ, ಹತ್ತಿ ಕುಳಿತುಕೊ. ಬೆಳಗಾಗುವ ಮುನ್ನ ನಾನು ರೇವಾಸ್ ತಲುಪಬೇಕು. ನಮ್ಮ ಹಳ್ಳಿಗಾಗಿ ಮುಂಬೈನಿಂದ ಸರಕು-ಸಾಮಗ್ರಿಗಳನ್ನು ತರುವ ಒಬ್ಬನನ್ನು ನಾನು ಕಾಣಬೇಕು. ತನ್ನನ್ನು ಭೇಟಿಯಾಗುವಂತೆ ಅವನು ನನಗೆ ಹೇಳಿದ್ದಾನೆ. ತನ್ನ ಜಮೀನಿಗೆ ರಸಗೊಬ್ಬರ ಬೇಕು ಎಂದು ಅವನು ಹೇಳುತ್ತಾನೆ. ಅದೇನೆಂದು ನಿನಗೆ ಗೊತ್ತಾ?"

ಮಧ್ಯ ರಾತ್ರಿಯಲ್ಲಿ ಎತ್ತಿನ ಗಾಡಿಯೊಂದರಲ್ಲಿ ಈ ಅಪರಿಚಿತ ಹೆಸರು ಕೇಳಿದ ಹರಿಗೆ ಆಶ್ಚರ್ಯವಾಯಿತು. ಅದನ್ನು ವಿಚಾರಿಸುವಷ್ಟು ವಿಷಯ ಅವನಿಗೆ ತಿಳಿದಿರಲಿಲ್ಲವಾದ್ದರಿಂದ ಅವನು ಮೌನವಾಗಿ ಗಾಡಿಯೇರಿದ್ದ. ಗಾಡಿಯಂತೂ ಸಂಪೂರ್ಣವಾಗಿ ಖಾಲಿಯಾಗಿತ್ತು. ಕಿರುಗುಟ್ಟುತ್ತಾ ಅಕ್ಕಪಕ್ಕಗಳಿಗೆ ಅಲುಗಾಡುತ್ತಿದ್ದ ಹಲಗೆಗಳ ಮೇಲೆ ಒಂದು ಗೋಣಿ ಚೀಲವನ್ನೂ ಸಹ ಹಾಕಿರಲ್ಲಿ. ಗಾಡಿಯು ಮುಂದಕ್ಕೆ ಜಗ್ಗುತ್ತಿದ್ದಂತೆ ಹರಿಯೂ ಹಿಂದಕ್ಕೆ ಮುಂದಕ್ಕೆ ತೂಗಾಡುತ್ತಿದ್ದ. ಅದು ಗಡಗಡ ಸದ್ದು ಮಾಡುತ್ತಾ ಹೋಗುತ್ತಿದ್ದಾಗ, ಅವನೂ

ಅತ್ತ ಇತ್ತ ಅಲ್ಲಾಡುತ್ತಿದ್ದ. ಮಟ್ಟಸವಲ್ಲದ ಗುಬಟು-ಗಂಟುಗಳಿಂದ ಕೂಡಿದ ಹಲಗೆಗಳಿಗೆ ಮೈ ಉಜ್ಜಿ ನೋವಾಗುತ್ತಿತ್ತು. ಅವನು ಗಾಡಿಯ ಪಕ್ಕಗಳನ್ನು ಹಿಡಿದು, ಉದ್ದ ಪಟ್ಟಿಗೆ ತನ್ನ ಕಾಲನ್ನು ಒತ್ತಿ ಅತ್ತ, ಇತ್ತ ವಾಲದಂತೆ ಪ್ರಯತ್ನಿಸುತ್ತಿದ್ದ. ''ರಸಗೊಬ್ಬರ ಎಂಬುದೂ ಒಂದು ರೀತಿಯ ಗೊಬ್ಬರ ಎಂದು ನನಗನಿಸುತ್ತದೆ'' ಹರಿ ಗಾಡಿಯವನಿಗೆ ಹೇಳಿದ, ''ಸಗಣಿ ಮತ್ತು ಕೃತಕ ಗೊಬ್ಬರಕ್ಕೆ ಇದು ಭಿನ್ನವಾಗಿರುತ್ತದೆ. ಅದಕ್ಕೆ ದುಡ್ಡು ಕೊಟ್ಟು ಕೊಳ್ಳಬೇಕು.''

''ಅದು ನಿಜ. ನಮಗಂತೂ ಈಗ ಎಲ್ಲವೂ ಅಂಗಡಿಯಿಂದಲೇ ಬರಬೇಕು. ಎಲ್ಲವೂ ಸಿದ್ಧ ಪದಾರ್ಥಗಳೇ. ನೂಲನ್ನು ನೇಯುವುದು ನಿಂತುಹೋಗಿದೆ. ಮನೆಯಲ್ಲೇ ಗೋಧಿ ಬೀಸಿ ಹಿಟ್ಟು ಮಾಡುವುದಿಲ್ಲ. ನನಗಂತೂ ಒಂದೂ ಗೊತ್ತಾಗುತ್ತಿಲ್ಲ. ಈ ಹೊಸ ರೋಗವಾದರೂ ಎಂಥದೊ? ಬರೀ ದುಂದು ವೆಚ್ಚ ತಾನೆ?'' ಯಾವುದೇ ಪ್ರತಿಕ್ರಿಯೆಯಿಲ್ಲದ ಗಾಡಿಯವ, ಗೊಣಗುತ್ತಾ ಹೇಳಿದ. ಅವನ ಧ್ವನಿ ನಿದ್ರೆಯಿಂದಾಗಿ ಮೃದುವೂ ಭಾರವೂ ಆಗಿತ್ತು.

''ಬಹುಶಃ ಇಷ್ಟೇ ಸಾಕಾಗದೇನೊ'' ಹರಿ ಅವನ ಹಿಂದಿನಿಂದ ಹೇಳಿದ.

''ಸಾಲದು, ಸಾಲದು'' ಬಂಡಿಯವನು ಅವನ ಮಾತನ್ನು ಸಮ್ಮತಿಸಿದ.

''ಏನೇನೂ ಸಾಲದು. ಈಗ ಭೂಮಿಯ ಮೇಲೆ ನಾವು ತುಂಬ ಜನರಿದ್ದೇವೆ. ನಮಗೆಲ್ಲ ಸಾಕಾಗುವಷ್ಟು ಇಂಧನವಿಲ್ಲ, ಸಾಕಷ್ಟು ಆಹಾರವಿಲ್ಲ. ಸಾಕಷ್ಟು ಕೆಲಸವಿಲ್ಲ- ಅಲ್ಲದೆ, ಶಾಲೆಗಳಿಲ್ಲ, ಆಸ್ಪತ್ರೆಗಳಿಲ್ಲ, ರೈಲು-ಬಸ್‌ಗಳಿಲ್ಲ, ಮನೆಗಳಿಲ್ಲ; ಮಿತಿಮೀರಿದ ಜನ, ಸುತ್ತಮುತ್ತ ಹೋಗಲೂ ಸಾಧ್ಯವಿಲ್ಲ. ಹಿಂದೆ ಹೀಗಿರಲಿಲ್ಲ.'' ಅವನು ನಿಡುಸುಯ್ದು, ಭುಜವನ್ನು ಬಗ್ಗಿಸಿ, ತನ್ನ ಗಲ್ಲವನ್ನು ಎದೆಗೊತ್ತಿಕೊಂಡು, ಕಣ್ಮುಚ್ಚಿ ಕುಳಿತ. ಎತ್ತಿನ ಗಾಡಿ ಗದ್ದೆಗಳ ಮೂಲಕ ನೇರ ರಸ್ತೆಯಲ್ಲಿ ಹೊರಟಿತು.

ಗಾಡಿಯ ಕೆಳಗೆ ಬೆಳದಿಂಗಳ ತೊರೆಯೊಂದು ಹರಿಯುತ್ತಿದೆಯೇನೋ ಎಂಬಂತಿದ್ದ ಬಿಳಿ ದೂಳಿನ ರಸ್ತೆಯನ್ನು ಹರಿ ಸ್ವಲ್ಪ ಸಮಯ ನೋಡಿದ. ಅಕ್ಕಪಕ್ಕದ ಜಮೀನುಗಳಲ್ಲಿ ಚಳಿಗಾಲದ ಗೋಧಿಯ ಕಟಾವು ಮುಗಿದಿದ್ದು ಅವು ಬರಿದಾಗಿದ್ದವು. ಕಂಕೇಶ್ವರ ಬೆಟ್ಟಗಳ ಮೇಲ್ಮೈ ಅಂಚಿನಲ್ಲಿ ಉದಯಿಸುತ್ತಿದ್ದ ಚಂದ್ರನ ಬೆಳಕಿನಲ್ಲಿ, ಕತ್ತರಿಸಿ ಬಿಟ್ಟಿದ್ದ ಪೈರಿನ ಮೋಟುಗಳು ರೌದ್ರವಾಗಿ ಕಾಣುತ್ತಿದ್ದವು. ಗಾಡಿಯು ಸಮೀಪಿಸುತ್ತಿದ್ದಂತೆ ಇರುಳು ಹಕ್ಕಿಗಳು ಪಟಪಟ ಶಬ್ದ ಮಾಡಿಕೊಂಡು ರಸ್ತೆಯಿಂದ ಹಾರಿ ಹೋಗುತ್ತಿದ್ದವು. ಮೈದಾನಗಳಲ್ಲಿ ಹಾಕಿದ ಕಪ್ಪು ಗುಡಾರಗಳಂತೆ ಕಾಣುತ್ತಿದ್ದ ಮಾವಿನ ಮರಗಳ ಮೇಲೊ, ಇಲ್ಲವೆ ರಸ್ತೆಯ ಬದಿಯಲ್ಲಿ ಅಲ್ಲಲ್ಲಿ ಕಾಣುತ್ತಿದ್ದ, ಲಾಂದ್ರದ ಮಂದ ಬೆಳಕಿದ್ದ ಗೂಡಂಗಡಿಗಳ ಮೇಲೋ ಅವು ಹಾರಿ ಕುಳಿತುಕೊಳ್ಳುತ್ತಿದ್ದವು. ಒಂದು ಜೋಪಡಿಯಿಂದ ಹೊರಬಿದ್ದ ಒಂದು ನಾಯಿ, ಹುಚ್ಚು ಹಿಡಿದಂತೆ ಒಂದೇ ಸಮನೆ ಬೊಗಳುತ್ತಾ, ಗಾಡಿಯನ್ನು ಸ್ವಲ್ಪ ದೂರ ಹಿಂಬಾಲಿಸಿ, ಹಿಂದಿರು-ಗಿತು. ಕಿರುಗುಟ್ಟುವ ಗಾಡಿಯ ಶಬ್ದವನ್ನು ಬಿಟ್ಟು ಮತ್ತೆಲ್ಲವೂ ಶಾಂತವಾಗಿತ್ತು. ಹರಿ ಮಲಗಿ ನಿದ್ರೆಹೋದ.

ರೇವಾಸ್‌ನ ಹಡಗುಕಟ್ಟೆಯಲ್ಲಿ ಜನ ಗುಂಪುಗುಂಪಾಗಿ ಸೇರಿದ್ದುದನ್ನು ನೋಡಿ ಹರಿಗೆ ಆಶ್ಚರ್ಯವಾಯಿತು. ಇಷ್ಟೊಂದು ಜನ ಮುಂಬೈಗೆ ಹೋಗುವರೆಂದು ಅವನು ಭಾವಿಸಿರಲಿಲ್ಲ. ಅತ್ಯಂತ ಉದ್ವೇಗ ಮತ್ತು ಭಯದಿಂದ ತಾನು ನಡುಗುತ್ತಿದ್ದುದು ಅವನಿಗೆ ಗೊತ್ತಾಗಿತ್ತು.

ಎಲ್ಲ ವಯಸ್ಸಿನ ಮತ್ತು ಗಾತ್ರದ ಜನ ಹಾಗೂ ಹುಡುಗರಿದ್ದಾರೆ. ಅವರೆಲ್ಲಾ ತಮ್ಮ ಅತ್ಯಂತ ಸ್ವಚ್ಛವಾದ ಉಡುಪು ಧರಿಸಿದ್ದಾರೆ. ಒಬ್ಬರನ್ನೊಬ್ಬರು ಕೂಗುತ್ತಾ, ಗಟ್ಟಿಯಾಗಿ ನಗುತ್ತಾ, ಗಲಾಟೆ ಮಾಡುತ್ತಿದ್ದಾರೆ. ಹಡಗುಕಟ್ಟೆಯಿಂದ ಸಮತಲದ ಕಾಫಿ ಬಣ್ಣದ ಕಡಲವರೆಗೆ ಅವರು ಗುಂಪು ಗುಂಪಾಗಿ ನಿಂತಿದ್ದಾರೆ. ಅವರನ್ನು ತುಂಬಿಸಿಕೊಳ್ಳಲು ಅಲ್ಲಿ ಲಂಗರು ಹಾಕಿರುವ ದೋಣಿಗಳು ನೀರಿನ ಅಲೆಗಳಿಂದ ಏರಿಳಿಯುತ್ತಿವೆ.

ಅಲಿಬಾಗ್‌ನವನೇ ಆದ, ಆ ಮೆರವಣಿಗೆಯ ವ್ಯವಸ್ಥಾಪಕ ಅವಾರ್‌ಕರ್ ಮೇಲಿನ ಮೆಟ್ಟಿಲ ಮೇಲೆ ನಿಂತು ಆಜ್ಞೆಗಳನ್ನು ನೀಡುತ್ತಿದ್ದಾನೆ. ಜನ ಸಾಲು ಸಾಲಾಗಿ ದೋಣಿಗಳನ್ನು ಹತ್ತುತ್ತಿದ್ದಾರೆ. ಸಾಲಿನಲ್ಲಿ ನಿಂತಿದ್ದ ಹರಿ, ದೋಣಿ ಪ್ರಯಾಣಕ್ಕಾಗಿ ಟಿಕೆಟ್‌ಗಳನ್ನು ಮಾರುತ್ತಿದ್ದ ಸ್ಥಳವನ್ನೂ, ತಮ್ಮ ಪ್ರಯಾಣದ ಕಾಲಕ್ಕೆ ಜನ ಬಾಳೆಹಣ್ಣು, ಕಿತ್ತಳೆಹಣ್ಣು ಮುಂತಾದುವನ್ನು ಕೊಳ್ಳುತ್ತಿದ್ದ ಹಣ್ಣಿನಂಗಡಿಯನ್ನೂ, ಇನ್ನೂ ಖಾಲಿಯಿದ್ದ ಬೆಂಚುಗಳನ್ನೂ ಹಡಗುಕಟ್ಟೆಯ ತುದಿಯನ್ನೂ ದಾಟಿ, ಮೆಟ್ಟಿಲುಗಳ ಸಮೀಪ ಬಂದಿದ್ದಾನೆ. ತಾನು ದೋಣಿಯಲ್ಲಿ ಕುಳಿತು ಬಹು ದಿನಗಳಾಗಿದ್ದುದರಿಂದ, ಹರಿ ಹತ್ತಲು ಸ್ವಲ್ಪ ಹಿಂದೇಟು ಹಾಕಿದ. ಆಗ ಅವಾರ್‌ಕರ್‌ನ ಕೂಗು ಅವನಿಗೆ ಕೇಳಿಸಿತು, ''ಹೂಂ, ಮುಂದೆ ಬಾ, ನಿನ್ನ ಗ್ರಾಮಕ್ಕಾಗಿ, ನಿನ್ನ ಜೀವನೋಪಾಯಕ್ಕಾಗಿ ಹೋರಾಡಲು ನಿನಗಿಷ್ಟವಿದ್ದರೆ ದೋಣಿಯನ್ನೇರಿ ಕೂರು.'' ಹರಿಯ ಅಕ್ಕಪಕ್ಕದಲ್ಲಿದ್ದ ಜನ ಅವನನ್ನು ದಬ್ಬಿಕೊಂಡು ಬಂದರು. ಇದರಿಂದ ಅವನಿಗರಿವಿಲ್ಲದಂತೆಯೇ, ಅವನನ್ನು ಎತ್ತಿ ಹಿಡಿದು ಕಾದಿದ್ದ ದೋಣಿಯೊಂದರೊಳಗೆ ಕೂಡಿಸಿದಂತಾಯಿತು.

ಸೂರ್ಯನು ಉದಯಿಸುವ ವೇಳೆಗೆ, ಮಬ್ಬಾಗಿದ್ದ ಸಮುದ್ರ ನವಿಲು ನೀಲಿ ಮತ್ತು ಉಜ್ವಲ ಹಸಿರು ಬಣ್ಣವನ್ನು ತಳೆಯಿತು. ದೂರ ತೀರದಾಚೆ ಇದ್ದ ಮುಂಬೈ ನಗರದ ಮೇಲೆ ಬಿದ್ದ ಬೆಳಕಿನಿಂದಾಗಿ, ನಗರವು, ನೀಲಿಯಾಕಾಶದ ಹಿನ್ನೆಲೆಯಲ್ಲಿ ಬಿಳಿ ಮರಳಿನ ಇಲ್ಲವೆ ಉಪ್ಪಿನ ಸೌಧದಂತೆ ಕಾಣುತ್ತಿತ್ತು. ಎಲ್ಲ ದೋಣಿಗಳೂ ತುಂಬಿದುವು. ಅಲೆಗಳ ಮೇಲೆ ಸಾಗುತ್ತಿರುವ ಡಾಲ್ಫಿನ್‌ಗಳ ಸಮೂಹದಂತೆ ಅವು ಯಾನ ಹೊರಟವು.

ರೇವಾಸ್‌ನಿಂದ ಮುಂಬೈಗೆ ಹದಿನಾಲ್ಕು ಕಿಲೋ ಮಿಟರ್‌ಗಳು. ಮಾರ್ಗದುದ್ದಕ್ಕೂ ರೈತರು ಮತ್ತು ಮೀನುಗಾರರು ದೊಡ್ಡ ದನಿಯಲ್ಲಿ ಹರಟುತ್ತಿದ್ದರು, ಕೆಲವರು ಹಾಡುತ್ತಿದ್ದರು. ಅವರುಗಳ ಧ್ವನಿ ಒಂದು ದೋಣಿಯಿಂದ ಮತ್ತೊಂದಕ್ಕೆ ಪ್ರತಿಧ್ವನಿಸುತ್ತಿತ್ತು. ಅವರೆಲ್ಲಾ ಅಮಿತ ಉತ್ಸಾಹದಿಂದಿದ್ದರು. ತಮ್ಮ ಅನುದಿನದ ಕೆಲಸವನ್ನು ತೊರೆದು, ಗ್ರಾಮವನ್ನು ಎಂದೂ ಬಿಡದಿದ್ದ ಅವರಿಗೆ ಇದೊಂದು ಅಪರೂಪದ ವಿಹಾರ ಮತ್ತು ವಿಶ್ರಾಂತಿ ದಿನದಂತಿತ್ತು. ಅವರು ಮುಂಬೈಗೆ ಹೋಗುತ್ತಿರುವ ಉದ್ದೇಶವೇನೆಂಬುದನ್ನು ನೆನಪಿಸಲು ಅವಾರ್‌ಕರ್ ಆಗಾಗ ಗಟ್ಟಿಯಾಗಿ ಮಾತನಾಡುತ್ತಿದ್ದ. ಬರುಬರುತ್ತಾ ಅವನ ಧ್ವನಿ ಕಟ್ಟುವಂತಾದಾಗ, ಹಿರಿಯ ಮೀನುಗಾರನೊಬ್ಬನು, ಧೋತಿಯ ಮೇಲೆ ಇಳಿಬಿದ್ದ ಬೆವರಿನಿಂದ ಒದ್ದೆಯಾಗಿದ್ದ ಅವಾರ್‌ಕರ್‌ನ ಷರ್ಟನ್ನು ಜಗ್ಗಿ ಎಳೆದು, ''ಕೂತುಗೊ, ಮಗ. ಸ್ವಲ್ಪ ಹೊತ್ತು ಕೂತುಕೊ. ಮುಂಬೈನಲ್ಲಿ ನೀನು ಇನ್ನೂ ಗಟ್ಟಿಯಾಗಿ ಮಾತನಾಡಬೇಕಾಗಿರುವುದರಿಂದ ನಿನ್ನ ದನಿಯನ್ನು ಕಾಪಾಡಿಕೊ. ನಾವು ಮುಂಬೈಗೆ ಹೋದ ಮೇಲೆ, ನಗರದ ಪ್ರತಿಯೊಬ್ಬನಿಗೂ ಕೇಳುವಂತೆ ಕೂಗುತ್ತೇವೆ. ಈ ಬಗ್ಗೆ ಶಂಕಿಸಬೇಡ. ಕುಳಿತುಕೊ. ನಮ್ಮ

ಈ ತಮ್ಮನಿಗೆ ಕುಡಿಯಲು ಸ್ವಲ್ಪ ಚಹಾ ಕೊಡಿ'' ಎಂದು ದೋಣಿಯಲ್ಲಿದ್ದ ಜನರಿಗೆ ಅವನು ಹೇಳಿದ. ಅವನ ಪೈಕಿ ಒಬ್ಬ ಪಿಂಗಾಣಿ ಲೋಟವನ್ನು ಮುಂದೊಡ್ಡಿದ. ಈ ಮುಂಚೆ ತುಳುಕಿ ಹೋಗಿದ್ದುದರಿಂದ, ಚಹಾ, ಲೋಟದಲ್ಲಿ ಅರ್ಧದಷ್ಟು ಮಾತ್ರ ಇತ್ತು. ಅವರು ತಮ್ಮ ಮುಖಂಡನಿಗೆ ಅದನ್ನು ನೀಡಿದರು. ಅವಾರ್‌ಕರ್ ಕೃತಜ್ಞತೆಯೊಡನೆ ಅದನ್ನು ಕುಡಿದ. ಮತ್ತೊಬ್ಬನು ಒಂದು ಕಿತ್ತಳೆ ಹಣ್ಣನ್ನು ಬಿಡಿಸಿ, ತೊಳೆಗಳನ್ನು ಚೀಪಲು ಒಂದಾಗುತ್ತ-ಲೊಂದರಂತೆ ನೀಡಿದ. ಅವಾರ್‌ಕರ್ ಅವರಿಗೆ ಆಭಾರ ಮನ್ನಿಸಿ, ಅವರ ಸಲಹೆಗಳಿಗೆ ಕಿವಿಗೊಟ್ಟ.

ಹಡಗುಕಟ್ಟೆಯಲ್ಲಿ ಚಹಾವನ್ನಾಗಲೀ, ಹಣ್ಣನ್ನಾಗಲೀ ತೆಗೆದುಕೊಳ್ಳದ ಮತ್ತು ಹಿಂದಲ ರಾತ್ರಿ ಮನೆಯಲ್ಲೂ ಊಟಮಾಡದ ಹರಿ, ದೋಣಿಯಲ್ಲಿ ಮೌನವಾಗಿ ಕುಳಿತಿದ್ದ. ಯಾರೂ ಅವನತ್ತ ಗಮನ ಹರಿಸಲಿಲ್ಲ. ಅವನ ದೋಣಿಯಲ್ಲಿ ಧುಲ್‌ನಿಂದ ಬಂದವರಾರೂ ಇರಲಿಲ್ಲ. ಕಡಲ ತೀರದುದ್ದಕ್ಕೂ ಇದ್ದ ಇತರ ಗ್ರಾಮಗಳ ಅಪರಿಚಿತರು ಅವರಲ್ಲಿದ್ದು, ಅವರಾಡುತ್ತಿದ್ದ ಮಾತುಗಳನ್ನು ಹರಿ ಕೇಳುತ್ತಾ ಕುಳಿತಿದ್ದ. ಅವನಿಗೋ ತುಂಬಾ ದಣಿವು, ಸೆಖೆ ಮತ್ತು ಬಾಯಾರಿಕೆಯಾಗಿತ್ತು. ಏನನ್ನೂ ಸರಿಯಾಗಿ ಆಲೋಚಿಸದೆಯೇ ಪ್ರಯಾಣ ಕೈಗೊಂಡ ಬಗ್ಗೆ ಅವನಿಗೆ ಹೆದರಿಕೆಯಾಗಿತ್ತು. ಮನಶ್ಶಾಂತಿಯನ್ನು ಕಳೆದುಕೊಂಡು ಉದ್ರಿಕ್ತನಾಗಿದ್ದ ಅವನು ಹಳೆಯ ಜೀವನ ವಿಧಾನದಲ್ಲಿ ಇನ್ನು ಒಂದೇ ಒಂದು ದಿನವೂ ಧುಲ್‌ನಲ್ಲಿರಲು ಇಷ್ಟಪಡದೆ ಹೊರಟು ಬಂದಿದ್ದ. ಬದಲಾವಣೆಗೆ ಕಾಲ ಬಂದಿದೆ ಎಂದು ಭಾವಿಸಿದ್ದ. ಬಹುಕಾಲದಿಂದ ತಾನು ಆಲೋಚಿಸುತ್ತಿದ್ದ ಬದಲಾವಣೆಯನ್ನು ಅವನು ಈಗ ಕಾಣಬೇಕಿತ್ತು. ಇದರಲ್ಲಿ ತಾನಿಟ್ಟಿರುವ ಹೆಜ್ಜೆ ತಪ್ಪಾಗಿದೆಯೆ?

ನಿಜ, ಈಗ ತಾನು ಹಿಂದಿರುಗುವ ಪ್ರಶ್ನೆಯೇ ಇಲ್ಲ. ಈ ಮೆರವಣಿಗೆಯಲ್ಲಿ ತಾನೀಗಾಗಲೇ ಸೇರಿರುವುದರಿಂದ, ಕಡಲಿಗೆ ಹಾರಿ ಈಜಿ ಹಿಂದಕ್ಕೆ ಹೋಗುವುದು ಸಾಧ್ಯವಿರಲಿಲ್ಲ. ಮುಂಬೈಗೆ ಹೋದನಂತರ, ತಾನು ಅಲ್ಲಿ ನೆಲೆಸಬೇಕು, ಕೆಲಸ ಮಾಡಬೇಕು, ಹಣ ಗಳಿಸಬೇಕು. ಆದರೆ ನಿಜವಾಗಿ ತಾನು ಅದಕ್ಕೆ ಸಿದ್ಧನಾಗಿದ್ದೇನೆಯೆ? ಅವನಿಗೇ ಭರವಸೆಯಿರಲಿಲ್ಲ. ತುಂಬಾ ದೂರವಾಗುತ್ತಿದ್ದ ರೇವಾಸ್‌ನ ಜವುಗು ತೀರವನ್ನು ಹರಿ ಹಿಂದಿರುಗಿ ನೋಡಿದ. ತನ್ನ ಮಂಡಿಗಳ ಮೇಲೆ ತಲೆಯಿಟ್ಟುಕೊಂಡು ನಿರಾಶೆಯಿಂದ ಕಣ್ಣುಗಳನ್ನು ಮುಚ್ಚಿದ.

''ಆ ಹುಡುಗನನ್ನು ನೋಡಿ'' ಯಾರೋ ಹೇಳಿದ್ದರು, ''ಅವನು ಯಾರೋ ಹುಡುಗ? ತಿನ್ನಲು ನಿನ್ನಲ್ಲೇನೂ ಇಲ್ಲವೆ ಮಗು? ಇಗೋ ಇದನ್ನು ಹಿಡಿ'' ಮೂಲೆಯಾಕಾರದಲ್ಲಿ ಮಡಿಚಿದ್ದ ತಣ್ಣನೆಯ ಒಣಗಿದ ಚಪಾತಿಯೊಂದನ್ನು ಅವನು ಹರಿಗೆ ನೀಡಿದ. ತನ್ನ ಗಂಟಲು ಒಣಗಿಹೋಗಿದ್ದು, ಅಗಿಯಲು ಇಲ್ಲವೆ ನುಂಗಲು ತನಗೆ ಸಾಧ್ಯವಾಗದೆಂದು ಹರಿಗೆ ಅನಿಸಿದರೂ ಅದನ್ನು ತೆಗೆದುಕೊಂಡು ನುಣ್ಣಗೆ ಅಗಿದು ತಿಂದ. ಅದು ಅವನಿಗೆ ಸ್ವಲ್ಪ ಶಕ್ತಿ ನೀಡಿತು.

ಅವನ ಜೀವನದಲ್ಲೇ ಅದು ಅತ್ಯಂತ ಶ್ರಮದ ದಿನವಾಗಿದ್ದುದರಿಂದ, ಆ ರೊಟ್ಟಿ ಅವನಿಗೆ ಅಗತ್ಯವಾಗಿತ್ತು.

* * *

ತಮ್ಮ ದೋಣಿಗಳ ಮೇಲೆ ಮತ್ತು ತೈಲಮಯ ಹಸಿರು ಅಲೆಗಳ ಮೇಲೆ ಕವಿದಂತೆ ಕಾಣುತ್ತಿದ್ದ ಮುಂಬೈ ನಗರದ ಅಸ್ಪಷ್ಟವಾದ ನೋಟ ಅವನನ್ನು ನಿಬ್ಬೆರಗುಗೊಳಿಸಿತು. ಸಸ್ಸೂನ್ ಹಡಗು ಕಟ್ಟೆಯಲ್ಲಿ ದೋಣಿಯಿಂದ ಇಳಿಯುವ ಸಮಯದಲ್ಲಿ, ಸ್ವಲ್ಪ ಕಾಲ ಅಲ್ಲೇ ನಿಂತು, ನಗರವನ್ನು ದಿಟ್ಟಿಸಿ ನೋಡಲು ಅವನು ಇಷ್ಟಪಟ್ಟ. ಆದರೆ ಮಿತಿಮೀರಿ ಜನ ತುಂಬಿದ್ದ ದೋಣಿಯಲ್ಲಿ ಕುಳಿತು ಮಾಡಿದ ದೀರ್ಘ ಪ್ರಯಾಣದಿಂದ ಕಾಲು ಜೋಮು ಹಿಡಿದು, ಮೈ ಕೈ ನೋಯುತ್ತಿದ್ದುದು ಮಾತ್ರವಲ್ಲದೆ, ಸಮಯವೂ ಇರಲಿಲ್ಲ, ನೋಡುವಷ್ಟು ವಿರಾಮವೂ ಇರಲಿಲ್ಲ. ಅವನ ಸಹ ಪ್ರಯಾಣಿಕರು ತಳ್ಳುತ್ತಾ, ನುಗ್ಗುತ್ತಾ ಮುಂದುವರಿ-ಯುತ್ತಿದ್ದುದರಿಂದ, ಅವನೂ ಅವರ ಜೊತೆಯಲ್ಲೇ ದಬ್ಬಲ್ಪಟ್ಟ. ಹಡಗುಕಟ್ಟೆಯಲ್ಲಿ ಮುಂಬೈನ ಜನ ತಳ್ಳಿಕೊಂಡು ಹೋಗುತ್ತಿದ್ದುದರಿಂದ, ಮುಂದಕ್ಕೆ ತಳ್ಳಲ್ಪಡುವ ಮುನ್ನ ಹರಿ ಹೊರಳಿ, ತನ್ನ ಕಣ್ಣುದಿಯಿಂದ ನೋಡಿದ. ಹಡಗುಕಟ್ಟೆಯಲ್ಲಿ ಲಂಗರು ಹಾಕಿದ್ದ ಆವಿ ದೋಣಿಗಳು, ದೊಡ್ಡ ಕ್ರೇನ್‌ಗಳು ಎತ್ತಿಳಿಸುತ್ತಿದ್ದ ಸರಕಿನ ಮೂಟೆಗಳು, ತಮ್ಮ ತಲೆ ಮತ್ತು ಬೆನ್ನಿನ ಮೇಲೆ ದೊಡ್ಡ ಮರದ ಪೆಟ್ಟಿಗೆಗಳು, ಪೆಠಾರಿಗಳು ಇಲ್ಲವೆ ಬುಟ್ಟಿಗಳನ್ನು ಹೊತ್ತು ಗುರುಗುಟ್ಟುತ್ತಾ, ಬೆವರು ಸುರಿಸುತ್ತಾ ಸಾಗಿದ್ದ ಬರಿಮೈ ಕೂಲಿಗಳು ಮತ್ತು ತನ್ನ ಹಳ್ಳಿಯ ಮೀನುಗಾತಿಯರಂತೆಯೇ, ಹೊಳೆಯುತ್ತಾ ಜಾರುತ್ತಿದ್ದ ಮೀನುಗಳ ಬುಟ್ಟಿಗಳನ್ನು ಹಿಡಿದು, ದೋಣಿಯಿಂದ ಪೇಟೆಗೆ ಓಡುತ್ತಿದ್ದ ಕಡುಗೆಂಪು ಮತ್ತು ಹಸಿರು ಸೀರೆಗಳನ್ನು ಕಚ್ಚೆಹಾಕಿ ಉಟ್ಟುಕೊಂಡಿದ್ದ ಹೆಂಗಸರನ್ನೂ ಹರಿ ನೋಡಿದ. ಹುಲ್ಲು, ಕೆಸರು ಮತ್ತು ಮೀನಿನ ಹುರುಪೆಗಳಿಂದಾಗಿ ಆ ಸ್ಥಳ ತುಂಬ ಜಾರುತ್ತಿತ್ತು.

ಈ ಅಸ್ತವ್ಯಸ್ತತೆಗೆ ಪುಷ್ಟಿಕೊಟ್ಟಂತೆ, ತಮಗೆ ಪರಿಚಿತವಾಗಿದ್ದ ಸಮುದ್ರ ಮತ್ತು ಮೀನಿನ ವಾಸನೆಯಿಂದ ಮಿಳಿತಗೊಂಡ ನಗರದ ವಿಚಿತ್ರ ವಾಸನೆಯೂ ಶಬ್ದವೂ-ಪರಿಚಿತವಾಗಿದ್ದ ಮೀನುಗಾರರ ದೊಡ್ಡ ಗಂಟಲಿನ ಮಾತುಗಳಲ್ಲದೆ, ಥುಲ್‌ನ ಸುತ್ತಮುತ್ತ ಕೇಳಿಬರದ ಸಾರಿಗೆ ವಾಹನಗಳ ಶಬ್ದವೂ-ಅವರಿಗೆ ಗಲಿಬಿಲಿಯುಂಟುಮಾಡಿತ್ತು.

ಹಳ್ಳಿಗರು ಬಾಗಿಲುಗಳ ಮೂಲಕ ಹೊರಬಂದು, ರಸ್ತೆಗಳ ಮೇಲಿಳಿದರು. ಭಯಾನಕ-ವಾದ ವಾಹನಗಳ ಮಧ್ಯೆ ನಿಂತರು. ಒಂದೇ ರಸ್ತೆಯಲ್ಲಿ, ಒಂದೇ ಸಮಯದಲ್ಲಿ ಇಷ್ಟೊಂದು ವಾಹನಗಳಿದ್ದುದನ್ನು ಹರಿ ತನ್ನ ಜೀವಮಾನದಲ್ಲಿ ಹಿಂದೆಂದೂ ನೋಡಿರಲಿಲ್ಲ. ಥುಲ್‌ನಲ್ಲಿ, ಆಗಾಗ ಒಂದು ಬಸ್ ಹಳ್ಳಿಯ ಮುಖ್ಯ ಹಾದಿಯಿಂದ ಹೆದ್ದಾರಿಗೆ ಸೇರುವುದನ್ನೋ ತುಂಬ ಅಪರೂಪವಾಗಿ ದೂಳು ತುಂಬಿದ ಕಾರನ್ನೋ ಅವನು ನೋಡುತ್ತಿದ್ದ. ಅವನು ಅಲಿಬಾಗ್‌ಗೆ ಹೋದಾಗ, ಮುಖ್ಯವಾಗಿ ಬೈಸಿಕಲ್‌ಗಳನ್ನೂ ಕೆಲವೊಮ್ಮೆ ಸೈಕಲ್ ರಿಕ್ಷಾಗಳನ್ನೂ, ಬಸ್ ಮತ್ತು ಲಾರಿಗಳನ್ನೂ ನೋಡುತ್ತಿದ್ದ. ಆದರೆ ಇಲ್ಲಾದರೋ ಎಲ್ಲ ವಾಹನಗಳೂ ಒಟ್ಟಿಗೆ, ಅಂದರೆ ವಿಶ್ವದ ಎಲ್ಲ ರೀತಿಯ ವಾಹನಗಳು-ಸೈಕಲ್‌ಗಳು, ರಿಕ್ಷಾಗಳು, ಕೈಗಾಡಿಗಳು, ಟಾಂಗಾಗಳು, ಬಸ್‌ಗಳು, ಕಾರ್‌ಗಳು, ಟ್ಯಾಕ್ಸಿಗಳು, ಲಾರಿಗಳು-ಮುಂಬೈನ ರಸ್ತೆಗಳಲ್ಲಿ ಜಮಾಯಿಸಿವೆಯೇನೋ ಎನಿಸುತ್ತಿತ್ತು. ಅವನ ಸುತ್ತಮುತ್ತ ಕೇಳುತ್ತಿದ್ದ ಈ ವಾಹನಗಳ ಹಾರನ್ ಶಬ್ದಗಳು, ಕಿರುಚು, ಹಠಾತ್ತನೆ ನಿಲ್ಲುವುದು, ಪಕ್ಕದಲ್ಲೇ ಆರ್ಭಟಿಸುತ್ತಾ ಹೋಗುವುದು ಇವು ಅವನಿಗೆ ದಿಗ್ಭ್ರಮೆಗೊಳಿಸಿದ್ದವು. ಹರಿ ಹೆದರಿ ಪಕ್ಕದ ಮನುಷ್ಯನ ತೋಳು ಹಿಡಿದ. ಆ ವ್ಯಕ್ತಿ ಥುಲ್‌ನ ರೈತ ಮಾಹೆ. ಅವನ ಮನಸ್ಸು ಸ್ವಲ್ಪ ಸಮಾಧಾನಗೊಂಡಿತು.

''ಜಾಗ್ರತೆ, ತಮ್ಮ. ನಿಲ್ಲಬೇಡ, ಬಾ. ನಾವು 'ಕಾಲಾಘೋಡ' ಅಂದರೆ 'ಕಪ್ಪು ಕುದುರೆ' ಎಂಬ ಸ್ಥಳಕ್ಕೆ ಹೋಗಬೇಕು'' ಏದುಸಿರು ಬಿಡುತ್ತಾ ಮಾಹೆ ಹೇಳಿದ. ಅವರಿಬ್ಬರೂ ವಾಹನಗಳನ್ನು ತಟಾಯಿಸಿಕೊಂಡು ಬೃಹದಾಕಾರದ ಕೆಂಪನೆಯ ಮಹಡಿ-ಬಸ್‌ನತ್ತ ಓಡಿದರು. ಬಸ್ ಕೀರಲು ಶಬ್ದ ಮಾಡಿ, ಅವರ ಮುಖಕ್ಕೇ ಬಡಿಯುವಂತೆ ಎದುರಾಗಿ ನಿಂತಿತು. ಚಾಲಕ ಕಿಟಕಿಯಿಂದ ಹೊರಗೆ ತಲೆಹಾಕಿ, ಅವರನ್ನು ಅವಾಚ್ಯ ಶಬ್ದಗಳಿಂದ ಬೈದ. ಅವರಿಬ್ಬರೂ ಸ್ತಂಭೀಭೂತರಾಗಿ ನಡುಗುತ್ತಾ ನಿಂತರು.

ಆಗ ಪೋಲಿಸ್ ಪ್ರತ್ಯಕ್ಷನಾದ. ಅವನು ದಂಡವನ್ನು ತಿರುಗಿಸುತ್ತಾ, ಸೀಟಿಯನ್ನು ಜೋರಾಗಿ ಊದುತ್ತಾ ಸಂಚಾರವನ್ನೇ ನಿಲ್ಲಿಸಬಲ್ಲ. ಮುಂಬೈ ಪೋಲಿಸರು ನಿಬಿಡವಾದ ರಸ್ತೆಗಳಲ್ಲಿ ಮೆರವಣಿಗೆಗಳನ್ನೂ, ಆ ತುಂಬಿದ ನಗರದಲ್ಲಿ ಅಲಿಬಾಗ್‌ನ ಮೀನುಗಾರರ ಪ್ರದರ್ಶನಗಳನ್ನೂ ಸಂಪೂರ್ಣವಾಗಿ ನಿಯಂತ್ರಿಸುವ ಸಾಮರ್ಥ್ಯವುಳ್ಳವರು.

''ಏ, ಮೂರ್ಖ, ಎಲ್ಲಿಂದ ಬಂದಿದ್ದೀ?'' ಆ ಪೋಲಿಸಿನವ ಹರಿಯನ್ನು ನೋಡಿ ಆರ್ಭಟಿಸಿದ, ''ನಿಯಂತ್ರಣ ದೀಪಗಳನ್ನು ನೋಡೇ ಇಲ್ಲವೇನು? ಕುಂಬಳಕಾಯಿ ಬೆಳೆಯುವ ಊರಿನಿಂದ ನೇರವಾಗಿ ಬಂದಿದ್ದೀ ಹೌದಾ?''

''ಅವನನ್ನು ಅಲ್ಲಿಗೇ ಅಟ್ಟಿ ಅವನು ಅಲ್ಲಿ ಕುಂಬಳಕಾಯನ್ನೇ ಬೆಳೆಯಲಿ. ಮುಂಬೈ ರಸ್ತೆಗಳಿಂದ ಹೊರಹಾಕಿ'' ಬಸ್ ಚಾಲಕ ಕೋಪದಿಂದ ಅರಚಿದ.

ಪೋಲಿಸ್‌ನವನು ನಕ್ಕು, ಬಸ್‌ಗೆ ಕಾಯುವಂತೆ ಕೈತೋರಿಸಿ, ರಸ್ತೆಯನ್ನು ದಾಟುವಂತೆ ಮೆರವಣಿಗೆಕಾರರಿಗೆ ಸೂಚಿಸಿದ.

''ನಾವು ಅಲಿಬಾಗ್‌ನ ರೈತರು ಮತ್ತು ಮೀನುಗಾರರು'' ಮುಂದೆ ಹೋಗುವ ಮುನ್ನ ಮಾಹೆ ಮೆಲ್ಲಗೆ ಹೇಳಿದ, ''ಮುಖ್ಯಮಂತ್ರಿಯವರೊಡನೆ ಮಾತನಾಡಲು ನಾವು ಬಂದಿದ್ದೇವೆ.''

''ಓ, ಹೋಗಿ ಮಾತನಾಡಿ'' ಪೋಲಿಸ್‌ನವ ಹೇಳಿದ, ''ಬೇಗ ಹೋಗಿ ಮಾತನಾಡಿ, ಅವರು ನಿಮಗಾಗಿ ಕಾಯುತ್ತಿದ್ದಾರೆ. ಅವರು, ನಿಮ್ಮಲ್ಲಿ ಪ್ರತಿಯೊಬ್ಬರಿಗೂ ಹಾರ, ಚಹಾ ಮತ್ತು ಸಿಹಿ ತಿಂಡಿಯನ್ನು ಹಿಡಿದು ಕಾಯುತಿದ್ದಾರೆ.'' ಬಸ್ ಚಾಲಕನತ್ತ ಕಣ್ ಮಿಟುಕಿಸುತ್ತಾ ಪೋಲಿಸಿನವ ಪುನಃ ಗಹಗಹಿಸಿದ. ನಂತರ ಮೆರವಣಿಗೆಕಾರರು ಮುಂದು-ಮುಂದಕ್ಕೆ ಹೋಗುವಂತೆ ಅವನು ಜೋರಾಗಿ ಸೀಟಿಯನ್ನು ಊದಿದ. ಮನನೊಂದ ಹರಿ ಮತ್ತು ಅವನ ಸಂಗಡಿಗ ಮುಂದುವರಿದರು.

''ಈ ಬಾಂಬೆವಾಲಾಗಳು ಪ್ರಪಂಚದಲ್ಲೇ ಅತ್ಯಂತ ಒರಟು ಜನ'' ಮಾಹೆ ಗೊಣಗುಟ್ಟಿದ. ಹರಿ ಒಪ್ಪಿಗೆಯಿಂದ ತಲೆದೂಗಿದ.

ಅವರಿಗೆ ಇವು ದಿನದ ಮೊದಲ ಗೇಲಿಗಳಾಗಿದ್ದವು. ನಿಗೂಢವೆನಿಸಿದ 'ಕಪ್ಪು ಕುದುರೆ'ಯತ್ತ ರಸ್ತೆಗಳ ಮೂಲಕ ನಡೆದು ಹೋದಾಗ ಅವರು ಇಂತಹ ಅನೇಕ ಗೇಲಿ ಮಾತುಗಳನ್ನು ಕೇಳಬೇಕಾಯಿತು. ಹತ್ತು-ಇಪ್ಪತ್ತು ಅಂತಸ್ತಿನ ಬೃಹದಾಕಾರದ ಕಟ್ಟಡಗಳನ್ನೂ, ದೊಡ್ಡ ದೊಡ್ಡ ಅಂಗಡಿಗಳನ್ನೂ, ತಮ್ಮ ಗುಡಿಸಿಲುಗಳಷ್ಟು ದೊಡ್ಡದಾದ ಅವುಗಳ ಕಿಟಕಿಗಳನ್ನೂ, ಕಡಲ ರಸ್ತೆಗಳಲ್ಲಿ ಒಬ್ಬರನ್ನೊಬ್ಬರು ತಳ್ಳಿಕೊಂಡು ನುಗ್ಗುತ್ತಾ ಹೋಗುತ್ತಿದ್ದ ಜನರನ್ನೂ ಹರಿ ಭಯದಿಂದಲೇ ನೋಡಿದ. 'ಕಪ್ಪು ಕುದುರೆ'ಯು ಒಂದು

ರೀತಿಯ ದೈವವಿರಬಹುದೆ? ಅವನದನ್ನು ನೋಡಲು ಇಚ್ಛಿಸಿದ. ಆದರೆ ಅವನಿಗೆ ಎಲ್ಲೆಲ್ಲೂ ಕಾಣುತ್ತಿದ್ದುದು ಜನ, ಕಟ್ಟಡಗಳು ಮತ್ತು ವಾಹನಗಳು. ಕೇಳುತ್ತಿದ್ದುದು ವಾಹನಗಳ ಹಾರನ್ ಶಬ್ದ-ದೊಡ್ಡ ಮಹಡಿ-ಬಸ್‌ಗಳು, ಟಾಕ್ಸಿಗಳು ಮತ್ತು ಕಾರ್‌ಗಳ ಘೋರ ಶಬ್ದಗಳು. ತಮ್ಮ ತಮ್ಮ ಪೇಟೆಯ ಚೀಲಗಳು, ಕೈ ಚೀಲಗಳು ಮತ್ತು ಬ್ರೀಫ್-ಕೇಸ್‌ಗಳನ್ನು ಹಿಡಿದ ಜನ, ಇವರನ್ನು ತಳ್ಳಿಕೊಂಡು ದಾಟುತ್ತಾ, ''ಇಗೋ, ನಮ್ಮನ್ನು ತಡೆಯಲು ಮತ್ತೊಂದು ಮೆರವಣಿಗೆ'' ಎಂದೋ, ''ಈಗೇಕೆ ಇಂಥ ಭಾರಿ ಘೋಷಣೆಗಳು? ನಮಗೆ ಬಸ್ ತಪ್ಪುತ್ತದೆ, ನಮಗೆ ಕೆಲಸಕ್ಕೆ ಹೊತ್ತಾಗುತ್ತದೆ, ಏ, ನನಗೆ ಅಡ್ಡಬರಬೇಡ'' ಎಂದೋ ಕೂಗುತ್ತಾ, ಗೊಣಗುತ್ತಾ ಹೋಗುತ್ತಿದ್ದರು.

ಇನ್ನೊಂದು ಮೆರವಣಿಗೆಯು, ಅವರ ಮುಂದೆಯೇ ನೇರವಾಗಿ ಹಾದು ಹೋಯಿತು. ಅದು ಹಾದು ಹೋಗುವವರೆಗೂ ಇವರು ನಿಂತು ಕಾಯುತ್ತಿದ್ದರು. ಆ ಮೆರವಣಿಗೆಯಲ್ಲಿ ಬರೀ ಹೆಂಗಸರೇ ಇದ್ದುದನ್ನು ನೋಡಿ ಹರಿ ನಿಬ್ಬೆರಗಾದ. ಅವರು ಭಿತ್ತಿಪಟಗಳನ್ನು ಹಿಡಿದಿದ್ದರು, ಮುಷ್ಟಿಯೆತ್ತಿ ಕೂಗುತ್ತಿದ್ದರು, ''ಬೆಲೆಗಳನ್ನು ಇಳಿಸಿ! ನಮಗೆ ಸಕ್ಕರೆ ಬೇಕು! ಯೋಗ್ಯಬೆಲೆ ಅಂಗಡಿಗಳಲ್ಲಿ ನಮಗೆ ಅಕ್ಕಿ ಬೇಕು,'' ಮತ್ತು ''ಸ್ವಾತಂತ್ರ್ಯ ಮತ್ತು ನ್ಯಾಯಕ್ಕಾಗಿ ಹೋರಾಡುತ್ತಿರುವ ಮಹಿಳಾ ಸಂಘ ಚಿರಾಯುವಾಗಲಿ!'' ನಂತರ ಎಲ್ಲ ಮಹಿಳೆಯರೂ ಒಕ್ಕೊರಲಿನಿಂದ ''ಜೈ'' ಎಂದು ಕೂಗಿ ಮುಂದೆ ಸಾಗುತ್ತಿದ್ದರು. ಅವರೆಲ್ಲರ ಮುಂದೆ ಇದ್ದ ವಯಸ್ಸಾದ ಬಿಳಿಕೂದಲ ಹೆಂಗಸೊಬ್ಬಳು ಮುಷ್ಟಿಯನ್ನು ಎತ್ತದೆ, ಮರದ ಲಟ್ಟಣಿಗೆ ಎತ್ತಿ ಕೈ ಆಡಿಸುತ್ತಿದ್ದಳು. ಉಳಿದವರು ಜೋರಾಗಿ ನಗುತ್ತಾ, ಉತ್ಸಾಹದಿಂದ ಅವಳಿಗೆ ಪ್ರೋತ್ಸಾಹ ಕೊಡುತ್ತಿದ್ದರು. ಕೆಲವರು ಅಡಿಗೆ ಪಾತ್ರೆಗಳನ್ನು ಹಿಡಿದು, ಸೌಟುಗಳಿಂದ ಅದನ್ನು ಬಡಿಯುತ್ತಾ ದೊಡ್ಡ ಗದ್ದಲ ಮಾಡುತ್ತಿದ್ದರು. ತಮ್ಮ ಈ ಮೆರವಣಿಗೆಯಿಂದ ಅವರೆಲ್ಲಾ ತುಂಬ ಹರ್ಷಗೊಂಡಿರುವಂತೆ ಕಾಣುತ್ತಿತ್ತು.

ಹರಿ ಮತ್ತು ಅಲಿಬಾಗ್‌ನ ಇತರ ಗ್ರಾಮಸ್ಥರು, ಈ ಮೆರವಣಿಗೆಯನ್ನು ಅಚ್ಚರಿಯಿಂದ ಬಾಯ್ತೆರೆದು ನೋಡುತ್ತಿದ್ದರು. ಅವರು ತಮ್ಮೊಡನೆ ಒಬ್ಬಳೇ ಒಬ್ಬ ಹೆಂಗಸನ್ನೂ ಕರೆ ತಂದಿರಲಿಲ್ಲ. ಅದು ಅಗತ್ಯವೆಂದೂ ಅವರು ಭಾವಿಸಿರಲಿಲ್ಲ. ತಾವು ಪುರುಷರು, ತಮ್ಮದೇ ಆದ ರೀತಿಯಲ್ಲಿ ಎಲ್ಲವನ್ನೂ ಸಮರ್ಥವಾಗಿ ನೆರವೇರಿಸುವುದಾಗಿಯೂ, ಹೆಂಗಸರಿದ್ದಲ್ಲಿ ಕೇವಲ ತೊಂದರೆಯೆಂದೂ ಅವರು ಭಾವಿಸಿದಂತಿತ್ತು. ಆದರೆ ಇಲ್ಲಿ, ಮುಂಬೈನಲ್ಲಿ, ಹೆಂಗಸರು ತಮ್ಮ ಕಾರ್ಯನಿರ್ವಹಣೆಗಾಗಿ ಪುರುಷರನ್ನೇ ನೆಚ್ಚಿಕೊಂಡಂತೆ ಕಾಣುತ್ತಿರಲಿಲ್ಲ. ತಮ್ಮ ಕೆಲಸಗಳನ್ನು ತಾವೇ ವ್ಯವಸ್ಥೆಪಡಿಸಿಕೊಳ್ಳಲು ನಿರ್ಧರಿಸಿರುವಂತೆ ತೋರುತ್ತಿತ್ತು. ಹರಿಗೆ ಇದು ಒಂದು ಅಪರೂಪದ ಹೊಸ ವಿಷಯವಾಗಿತ್ತು. ತನ್ನ ಕಡೆಯವರ ನಗು ಮತ್ತು ಹಾಸ್ಯಗಳಲ್ಲಿ ಸೇರದೆ ಅವನು ಮೌನವಾಗಿ ನಡೆದುಹೋದ. ತನ್ನ ತಾಯಿ ಮತ್ತು ಲೀಲ ಇಂತಹ ವಿಷಯವನ್ನು ಕುರಿತು ಆಲೋಚಿಸುವುದಾದರೂ ಸಾಧ್ಯವೇ ಎಂದು ಅವನು ಯೋಚಿಸಿದ.

ಈಗ ಪೋಲಿಸರು ಅವರುಗಳ ಪಕ್ಕಕ್ಕೆ ಬಂದು ತಮ್ಮ ದಂಡವನ್ನು ಆಡಿಸುತ್ತಾ, ಅವರನ್ನು ಸಾಲುಗಳಲ್ಲಿ ಹೋಗುವಂತೆ ಮಾಡಿದರು. ಇಂತಹ ಮೆರವಣಿಗೆಗಳ ಪರಿಚಯ ಪೋಲಿಸರಿಗೆ ಚೆನ್ನಾಗಿದ್ದು, ಮೆರವಣಿಗೆಕಾರರನ್ನು ನಿಯಂತ್ರಿಸಿ, ಶಿಸ್ತಿನಿಂದ ಹೋಗುವಂತೆ

ಮಾಡುವುದು ಅವರಿಗೆ ಚೆನ್ನಾಗಿ ಗೊತ್ತಿತ್ತು. ಪಾರ್ಕ್‌ಗಳು ಮತ್ತು ಮರಗಳಿಂದ ಸುತ್ತುವರಿಯಲ್ಪಟ್ಟ ಗುಮ್ಮಟಾಕಾರದ ದೊಡ್ಡ ಕಟ್ಟಡಗಳ ಸುತ್ತ ಇದ್ದ ವೃತ್ತದಲ್ಲಿ ಮೆರವಣಿಗೆಯನ್ನು ಒಯ್ಯಲಾಯಿತು. ''ನೋಡಿ, ನೋಡಿ, ಅದೇ ಮ್ಯೂಸಿಯಂ'' ಎಂದು ಯಾರೋ ಕೂಗಿದರು. ಮತ್ತಾರೋ ಉದ್ವೇಗದಿಂದ ಕೇಳಿದರು, ''ನಾವು ಅಲ್ಲಿಗೆ ಹೋಗಲು ಸಾಧ್ಯವೇ?'' ಆದರೆ ಇಲ್ಲ. ಅವರನ್ನು ದೊಡ್ಡ ಹಳೆ ಕಛೇರಿ ಕಟ್ಟಡಗಳ ನಡುವಣ ಚೌಕಕ್ಕೆ ಕರೆದೊಯ್ಯಲಾಯಿತು. ಆ ಚೌಕದ ಮಧ್ಯೆ ಖಾಲಿ ಆಧಾರ ಪೀಠವೊಂದಿತ್ತು. ''ಕಪ್ಪು ಕುದುರೆ ! ಕಪ್ಪು ಕುದುರೆ !'' ಜನ ಮಾತನಾಡಿಕೊಳ್ಳುತ್ತಿದ್ದುದನ್ನು ಹರಿ ಕೇಳಿದ. ''ಆದರೆ ಅದೆಲ್ಲಿ?'' ಹರಿ ಕೇಳಿದ. ''ಓ, ನಿನಗೆ ಗೊತ್ತಿಲ್ಲವಾ?'' ಯಾರೋ ಹೇಳಿದರು. ''ಬ್ರಿಟಿಷರು ದೇಶ ಬಿಟ್ಟು ಹೊರಟಾಗ ಅದನ್ನೂ ತೆಗೆದುಕೊಂಡು ಹೋದರು. ಸ್ವಾತಂತ್ರ್ಯದ ನಂತರ ಯಾವುದೇ ವಿದೇಶಿ ರಾಜರನ್ನೇಕೆ, ಅವರ ಕಲ್ಲಿನ ಪ್ರತಿಮೆಯನ್ನೂ ಸಹ ನೋಡಲು ಮುಂಬೈ ಜನ ಇಷ್ಟಪಡಲಿಲ್ಲ.'' ''ಓ !'' ಹರಿ ತುಂಬ ನಿರಾಶೆಯಿಂದ ಉದ್ಗಾರ ತೆಗೆದ. ತನ್ನ ಕಪ್ಪು ಕುದುರೆಯ ಮೇಲೆ ಕುಳಿತ ಚಕ್ರವರ್ತಿಯನ್ನು ನೋಡಲು ಹರಿ ಇಷ್ಟಪಟ್ಟಿದ್ದ. ಅವನು ಅಲ್ಲೇ ನಿಂತು ಖಾಲಿ ಪೀಠವನ್ನು ತದೇಕ ದೃಷ್ಟಿಯಿಂದ ನೋಡಿದ. ಪೀಠದ ಮೇಲೆ ಕಪ್ಪು ಕುದುರೆ ನಿಂತಿರುವುದನ್ನು ಊಹಿಸಿದ.

ಇತರ ಗ್ರಾಮಸ್ಥರೂ ಅಲ್ಲಿಗೆ ಬಂದು ಅವನ ಪಕ್ಕದಲ್ಲಿ ನಿಂತರು. ಅವರ ಸುತ್ತ ಮುತ್ತ ವಾಹನಗಳು ಭೋರ್ಗರೆಯುತ್ತಾ ಹೋಗುತ್ತಿದ್ದವು. ತಾವು ಇಲ್ಲಿಗೆ ಬಂದದ್ದೇಕೆ? ತಾವೀಗ ಇಲ್ಲಿ ಏನು ಮಾಡುತ್ತಿದ್ದೇವೆ? ಎಂಬ ಅರಿವು ಅವರಾರಿಗೂ ಇರಲಿಲ್ಲ.

ಪೀಠದ ಪಕ್ಕದಲ್ಲಿ ಸಣ್ಣ ವೇದಿಕೆಯೊಂದನ್ನು ಕಟ್ಟಲಾಗಿತ್ತು. ತೆಳ್ಳನೆಯ ಹಿರಿಯ ವ್ಯಕ್ತಿಯೊಬ್ಬ ಅದರ ಮೇಲೆ ಹತ್ತಿ ನಿಂತ. ಬಿಳಿ ಗಡ್ಡದ ಆ ವ್ಯಕ್ತಿಯ ಪರಿಚಯ ಅಲಿಬಾಗ್‌ನ ಯಾರಿಗೂ ಇರಲಿಲ್ಲ. ಅವನು ಧ್ವನಿವರ್ಧಕವನ್ನು ಹಿಡಿದು ಮಾತನಾಡಲಾರಂಭಿಸಿದ. ವಾಹನಗಳ ಸಂಚಾರ, ಅವುಗಳ ಹಾರನ್‌ಗಳ ಶಬ್ದ, ಚಕ್ರಗಳು ತಿರುಗುತ್ತಿದ್ದ ಶಬ್ದ–ಇವನ್ನೆಲ್ಲಾ ಕಡೆಗಣಿಸಿ ಅವನ ಕೆಲವು ಮಾತುಗಳನ್ನು ಗ್ರಹಿಸಲು ಹರಿ ಯತ್ನಿಸಿದ.

''ನಾನು ನಿಮ್ಮೊಂದಿಗೆ ಮತ್ತು ನಿಮಗಾಗಿ ಮಾತನಾಡಲು ಬಂದಿದ್ದೇನೆ. ಏಕೆಂದರೆ, ನಿಮ್ಮ ಜೀವನ ವಿಧಾನದಲ್ಲಿ ನನಗೆ ವಿಶ್ವಾಸವಿದೆ. ನಿಮ್ಮ ಹಸಿರು ಭೂಮಿ ಮತ್ತು ಸಮುದ್ರ ನಿಮಗೆಷ್ಟು ಅಮೂಲ್ಯವಾಗಿದೆಯೋ, ಅಷ್ಟೇ ನಮಗೂ ಅಮೂಲ್ಯವಾಗಿದೆ. ನಮ್ಮ ಮರಗಳು, ನಮ್ಮ ಮೀನುಗಳು, ನಮ್ಮ ದನಕರುಗಳು ಮತ್ತು ಪಕ್ಷಿಗಳನ್ನು ರಕ್ಷಿಸಬೇಕು....''

ಈತನಾರು, ಇವನೇಕೆ ಇಷ್ಟು ಭಾವೋದ್ರೇಕದಿಂದ ಮಾತನಾಡುತ್ತಿದ್ದಾನೆ ಎಂದು ಹರಿಗೆ ಆಶ್ಚರ್ಯವಾಯಿತು. ಅವನೊಬ್ಬ ನಗರದ ಮನುಷ್ಯನಂತೆ ಕಾಣುತ್ತಿದ್ದ. ನಾಜೂಕಾಗಿದ್ದ, ಸ್ವಚ್ಛವಾಗಿದ್ದ ಮತ್ತು ವಿದ್ಯಾವಂತನಂತೆ ಕಾಣುತ್ತಿದ್ದ. ಬಿಸಿಲು ಮತ್ತು ದೂಳಿನಲ್ಲಿ ದುಡಿಯುವ ಹಳ್ಳಿಯವನಂತಿರಲಿಲ್ಲ. ಆದರೂ ಅವನು ಮೀನುಗಳು, ದನಕರುಗಳು ಮತ್ತು ಮರಗಳ ಬಗ್ಗೆ ವ್ಯಾಕುಲದಿಂದ ಮತ್ತು ಅನುಕಂಪದಿಂದ ಮಾತನಾಡುತ್ತಿದ್ದಾನೆ.

ಅವನಿಗೇಕೆ ಅಂತಹ ಕಾಳಜಿ?

ಹರಿಯ ಆಲೋಚನೆಗಳು ಅವನಿಗೆ ಕೇಳಿಸಿತೇನೋ ಎಂಬಂತೆ ಆ ವ್ಯಕ್ತಿ ಉತ್ತರಿಸಿದ, ''ಮುಂಬೈನ ನಾಗರಿಕನಾದ ನಾನು ಗ್ರಾಮದ ನನ್ನ ಸೋದರರೊಡನೆ, ಅವರ ಒಳಿತಿಗಾಗಿ ಮಾತನಾಡುತ್ತಿರುವ ಬಗ್ಗೆ ನಿಮಗೆ ಆಶ್ಚರ್ಯವಾಗಬಹುದು. ನಿಮ್ಮ ಪರವಾಗಿ ಮಾತನಾಡು–

ತ್ತಿರುವ ನನ್ನಲ್ಲಿ ನಿಮಗೆ ವಿಶ್ವಾಸ ಇಲ್ಲದಿರಬಹುದು. ಒಂದು ರೀತಿಯಲ್ಲಿ ನಿಮ್ಮ ಇಂತಹ ಆಲೋಚನೆ ಸರಿಯಾದದ್ದೇ. ಏಕೆಂದರೆ ನನ್ನ ಕಾರಣಗಳು ಸ್ವಾರ್ಥದ್ದಾಗಿವೆ. ಮುಂಬೈನ ಎಲ್ಲ ನಾಗರಿಕರಿಗೂ ಇದು ಕಳವಳಕಾರಿಯಾದ ವಿಷಯವಾಗಿದೆ. ಥುಲ್-ವೈಷೆಟ್‌ನಲ್ಲಿ ಸಿದ್ಧಗೊಳ್ಳುವ ಈ ಕಾರ್ಖಾನೆಗಳು ಪ್ರಾಣಾಂತಕವಾದ ರಾಸಾಯನಿಕಗಳನ್ನು ಹೊರ-ಚೆಲ್ಲುತ್ತವೆ. ಸುತ್ತಮುತ್ತಲಿನ ಹಲವಾರು ಮೈಲಿಗಳಷ್ಟು ಪ್ರದೇಶವನ್ನು ಕಲುಷಿತಗೊಳಿಸದೆ ರಸಗೊಬ್ಬರವನ್ನು ತಯಾರಿಸುವುದು ಸಾಧ್ಯವಿಲ್ಲ. ಗಂಧಕಾಮ್ಲ, ಅಮೋನಿಯ ಮತ್ತು ದೂಳು, ದೂರ ದೂರದ ಸ್ಥಳಗಳಿಗೆ ಪಸರಿಸುತ್ತದೆ. ದೊಡ್ಡ ನಗರಗಳಿಗೆ ಐವತ್ತು ಮೈಲಿ ಫಾಸಲೆಯಲ್ಲಿ ಯಾವ ರಸಗೊಬ್ಬರ ಸ್ಥಾವರವನ್ನೂ ಸ್ಥಾಪಿಸಬಾರದೆಂದು ಸರ್ಕಾರ ನಿರ್ಬಂಧಿಸಿತ್ತು. ಆದರೆ ರೇವಾಸ್, ಮುಂಬೈನಿಂದ ಎಷ್ಟು ದೂರ ಇದೆಯೆಂಬುದು ನಿಮಗೆ ಗೊತ್ತು, ಹದಿನಾಲ್ಕು ಕಿಲೋಮೀಟರ್‌ಗಳು ಮಾತ್ರ. ಈಗಾಗಲೇ ಮುಂಬೈ ಅನೇಕ ಕೈಗಾರಿಕೆಗಳನ್ನು ಹೊಂದಿದೆ. ಅವು ಮಿತಿಮೀರಿದ್ದು ನಗರವನ್ನು ಕಲುಷಿತಗೊಳಿಸಿವೆ. ಇನ್ನೆಷ್ಟು ಪ್ರದೂಷಣೆ ನಾವು ಸಹಿಸುವುದು ಸಾಧ್ಯ? ಜಪಾನಿನಲ್ಲಿ ಜೈವಿಕ ಪಾದರಸವನ್ನು ಸಮುದ್ರದೊ-ಳಗೆ ಬಿಡಲಾಯಿತು. ಅದು ಮೀನುಗಳಿಗೆ ವಿಷವೂಡಿಸಿತು. ಅಂತಹ ಮೀನುಗಳನ್ನು ತಿಂದ ನತದೃಷ್ಟ ಜನರಿಗೇ ವಿಷ ಹಾಕಿದಂತಾಯಿತು....."

ಹರಿಗೆ ಆತನ ಮಾತುಗಳನ್ನು ಸರಿಯಾಗಿ ಆಲಿಸುವುದು ಕಷ್ಟವಾಗಿತ್ತು. ಅವನಿಗೆ ಪರಿಚಿತವಲ್ಲದ ವಾಹನದ ಶಬ್ದವು ಅವನನ್ನು ಧೃತಿಗೆಡಿಸಿತ್ತು. ಎಲ್ಲ ಕಾರುಗಳು ಮತ್ತು ಬಸ್ಸುಗಳು ತಾನು ಎಚ್ಚರದಿಂದಿರದಿದ್ದಲ್ಲಿ ತನ್ನ ಮೇಲೇ ಹರಿದು ಹೋಗಬಹುದು ಎಂದು ಅವನು ಭಾವಿಸಿದ. ಅವನ ಸುತ್ತ ಇದ್ದ ಜನ ಅವನ ಮೇಲೇ ಬೀಳುತ್ತಿದ್ದರು, ಒಬ್ಬರಿಗೊಬ್ಬರು ಮಾತನಾಡುತ್ತಿದ್ದರು. ಅಲ್ಲದೆ ಭಾಷಣಕಾರನ ಗ್ರಾಂಥಿಕ ಉಚ್ಚಾರಣೆಯನ್ನು ಅನುಸರಿಸು-ವುದೂ ಹರಿಗೆ ಕಷ್ಟವಾಗಿತ್ತು.

"ನೀವು ಬಲವಂತದಿಂದಾಗಿ ಸಾಗುವಳಿ ಮತ್ತು ಮೀನುಗಾರಿಕೆಯನ್ನು ಬಿಟ್ಟುಕೊಟ್ಟಲ್ಲಿ, ನಿಮ್ಮ ಹಳ್ಳಿಗಳನ್ನು ತೊರೆದು ಕೆಲಸ ಹುಡುಕಿಕೊಂಡು ಮುಂಬೈಗೆ ಬರಬೇಕಾಗುತ್ತದೆ" ಆ ವ್ಯಕ್ತಿ ಹೇಳುತ್ತಿದ್ದ, "ನೀವು ಈಗ ಇಲ್ಲೇ ಇರುವುದರಿಂದ ಸುತ್ತ ಮುತ್ತ ತಿರುಗಿ ನೋಡಿ. ಇನ್ನೂ ಇಪ್ಪತ್ತರಿಂದ ಐವತ್ತು ಸಾವಿರ ಜನರಿಗೆ ಈ ನಗರದಲ್ಲಿ ಜಾಗವಿದೆಯೆ? ಇಲ್ಲಿ ಬೇಕಾದಷ್ಟು ಉದ್ಯೋಗ ಮತ್ತು ಮನೆಗಳಿವೆಯೆಂದು ನೀವು ಭಾವಿಸುವಿರಾ? ಬಡವರು ಮತ್ತು ನಿರುದ್ಯೋಗಿಗಳು ಇಲ್ಲಿ ಹೇಗೆ ಬಾಳುತ್ತಿದ್ದಾರೆಂಬುದನ್ನು ಗಮನಿಸಿ. ಹಸಿರು ಭತ್ತದ ಗದ್ದೆಗಳು ಮತ್ತು ತೆಂಗಿನ ತೋಟಗಳ ನಡುವೆ ರಮ್ಯವಾದ ಗ್ರಾಮೀಣ ಜೀವನ ನಡೆಸುವುದನ್ನು ಬಿಟ್ಟು ನಗರದ ರಸ್ತೆಯ ಬದಿಗಳಲ್ಲಿ ಕುಳಿತು ಭಿಕ್ಷುಕರ ಜೀವನ ನಡೆಸಲು ನೀವು ಅಪೇಕ್ಷಿಸು-ತ್ತೀರಾ?"

ಹರಿಯ ಮೈ ನಡುಗಿತು. ಈ ಗಡ್ಡಧಾರಿ ವ್ಯಕ್ತಿಯು ನೇರವಾಗಿ ತನ್ನೊಡನೇ ಮಾತನಾಡುತ್ತಾ ತನ್ನನ್ನು ಪ್ರಶ್ನಿಸುತ್ತಿರುವನೇನೋ ಎಂದು ಅವನಿಗೆ ಭಾಸವಾಯಿತು. ಆಚ್ಚರಿಯಿಂದ ಅವನ ಬಾಯ್ತೆರೆದುಕೊಂಡಿತು. ಕೆಲಸ ಹುಡುಕಿಕೊಂಡು ತಾನಿಲ್ಲಿಗೆ ಬಂದಿರುವುದು ಅವನಿಗೆ ಹೇಗೆ ಗೊತ್ತು? ತಾನಾರಿಗೂ ಹೇಳಿಲ್ಲ. ತನ್ನ ಸ್ವಂತ ಮನಸ್ಸೇ ತನಗೆ ಸರಿಯಾಗಿ ಗೊತ್ತಿಲ್ಲ. ಈ ಭಾಷಣಕಾರನು, ತನ್ನ ಬಗ್ಗೆ ತನಗಿಂತ ಹೆಚ್ಚಾಗಿ

ತಿಳಿದಿರುವಂತೆ ತೋರುತ್ತದೆ. ''ಸೈಯದ್.... ಅವರ ಹೆಸರು ಸೈಯದ್ ಅಲಿ ಅಂತಲೋ ಏನೋ ಹೇಳುತ್ತಾರೆ'' ಮಾಹೆ ತಿಳಿಸಿದ, ''ಆತ ರಾಜಕೀಯ ಮುಖಂಡನಲ್ಲ. ನಮ್ಮನ್ನುದ್ದೇಶಿಸಿ ಮಾತನಾಡಲು ಅವರನ್ನೇಕೆ ಹಿಡಿದರೊ ಗೊತ್ತಿಲ್ಲ.''

''ಆದರೂ ಅವರು ಚೆನ್ನಾಗಿ ಮಾತನಾಡುತ್ತಾರೆ.''

ಈಗ ಆ ವ್ಯಕ್ತಿ ತಲೆಬಾಗಿಸಿ ವೇದಿಕೆಯಿಂದ ಕೆಳಗಿಳಿದ. ನಂತರ, ಮಾಸಿದ ಹತ್ತಿಯ ಬುಷ್‌ಷರ್ಟ್ ಧರಿಸಿ, ತಂತಿಯ ಕಟ್ಟಿನ ಕನ್ನಡಕ ಹಾಕಿಕೊಂಡಿದ್ದ ಸಣಕಲು ವ್ಯಕ್ತಿಯೊಬ್ಬ ಅತ್ಯಂತ ಎಚ್ಚರಿಕೆಯಿಂದ ವೇದಿಕೆಯೇರಿ ಸೈಯದ್ ಅಲಿಯ ಜಾಗಕ್ಕೆ ಬಂದ. ಅವನಿಗೆ ಧ್ವನಿವರ್ಧಕವನ್ನು ನೀಡಲಾಯಿತು. ಅವನು ಗಟ್ಟಿಯಾಗಿ ಮಾತನಾಡಲಾರಂಭಿಸಿದ. ಅವನ ಧ್ವನಿಯನ್ನು ಸರಿಯಾಗಿ ಅನುಸರಿಸುವುದು ಕಷ್ಟವಾಗಿತ್ತಲ್ಲದೆ ಅವನು ಯಾವ ವಿಷಯವನ್ನು ಕುರಿತು ಮಾತನಾಡುತ್ತಿದ್ದಾನೆಂಬುದೂ ಹರಿಗೆ ಅರ್ಥವಾಗಲಿಲ್ಲ. ಎಲ್ಲವೂ ಹೊಸತು, ಅಪರೂಪದ್ದು. ಈ ಅಪರಿಚಿತರು, ಈ ನಗರವಾಸಿಗಳು, ತನಗಿಂತ ಮಿಗಿಲಾಗಿ ಥುಲ್ ಮತ್ತು ಕಡಲ ತೀರದ ಇತರ ಮೀನುಗಾರಿಕೆ ಗ್ರಾಮಗಳ ಬಗ್ಗೆ ಹೆಚ್ಚು ವಿಷಯಗಳನ್ನು ಹೇಗೆ ಅರಿತಿದ್ದಾರೆ? ತನ್ನ ಜೀವಮಾನದಲ್ಲೇ ಹಿಂದೆಂದೂ ಅನುಭವಿಸದಂತಹ, ತಾನು ಅಜ್ಞಾನಿ ಎಂಬ ಭಾವನೆ ಹರಿಗೆ ಉಂಟಾಯಿತು.

''ನೀವು ಅಲಿಬಾಗ್‌ನಿಂದ ಬಂದಿದ್ದೀರಿ'' ಆ ವ್ಯಕ್ತಿ ಪ್ರಾರಂಭಿಸಿದ, ''ಅದು ನಮಗೆ ತೌರುಮನೆ. ಅಲ್ಲಿನ ಪವನಶಾಸ್ತ್ರ ವೀಕ್ಷಣಾಲಯದಲ್ಲಿ ಕೆಲಸ ಮಾಡುತ್ತಿರುವ ನಮಗೆ, ವಿಶ್ವದಲ್ಲೇ ಅದು ಏಕೈಕವೆನಿಸಿದ ಪ್ರಖ್ಯಾತ ಭೂ ಆಕರ್ಷಕ ವೀಕ್ಷಣಾಲಯವಾಗಿರುತ್ತದೆ. 1841 ರಲ್ಲಿ ಇಲ್ಲಿ, ಮುಂಬೈನಲ್ಲಿ ಅದನ್ನು ಸ್ಥಾಪಿಸಲಾಯಿತು. ಆ ಕೇಂದ್ರವು ನೀವು ನಿಂತಿರುವ ಸ್ಥಳಕ್ಕೆ ದೂರವೇನಿರಲಿಲ್ಲ. ಆದರೆ 1904ರಲ್ಲಿ ಅದನ್ನು ಅಲಿಬಾಗ್‌ಗೆ ವರ್ಗಾಯಿಸಲಾಯಿತು. ಮುಂಬೈನಲ್ಲಿ ಟ್ರಾಮ್ ಸೇವಾ ವ್ಯವಸ್ಥೆಯನ್ನು ವಿದ್ಯುದೀಕರಣಗೊಳಿಸಲು ಮುಂಬೈ ನಿರ್ಧರಿಸಿದ್ದರಿಂದ, ವೀಕ್ಷಣಾಲಯದಲ್ಲಿ ದೊರೆಯುವ ಅಂಕಿಅಂಶಗಳಿಗೆ ಅಡ್ಡಿಯಾಗುವುದೆಂಬ ಕಾರಣದಿಂದ ಈ ಕ್ರಮ ಕೈಗೊಳ್ಳಲಾಯಿತು....''

''ಹೂಂ?'' ಮಾಹೆ ತನ್ನ ಟೋಪಿಯೆತ್ತಿ ತಲೆ ಕೆರೆದುಕೊಳ್ಳುತ್ತಾ ಗೊಣಗುಟ್ಟಿದ, ''ಅವನು ಹೇಳುತ್ತಿರುವ ವೀಕ್ಷಣೆ-ಗೀಕ್ಷಣೆ ಅಂದರೇನು?''

''ಈಗ ಅಲಿಬಾಗ್‌ನ ಬಳಿ ರಸಗೊಬ್ಬರ ಕಾರ್ಖಾನೆಯನ್ನು ನಿರ್ಮಿಸಿದಲ್ಲಿ, ಅಕ್ಕಪಕ್ಕದ ಸ್ಥಳಗಳಿಗೆ ಬರುವ ವಿದ್ಯುತ್ ಪ್ರವಾಹವೂ ಹಾಗೂ ಬೃಹತ್ ಪ್ರಮಾಣದಲ್ಲಿ ಬರುವ ಕಬ್ಬಿಣವೂ ಆಯಸ್ಕಾಂತವೂ ವೀಕ್ಷಣಾಲಯದ ಕಾರ್ಯವನ್ನು ದೋಷಯುಕ್ತವನ್ನಾಗಿ ಮಾಡುತ್ತವೆ.''

ಹರಿ ಹುಬ್ಬು ಗಂಟಿಕ್ಕಿದ. ಅವನಿಗೆ ಏನೇನೂ ಅರ್ಥವಾಗುತ್ತಿರಲಿಲ್ಲ.

''ನಾವು ಭಾರತದ ಸರ್ವೇಕ್ಷಣಾಲಯಕ್ಕೂ ಮತ್ತು ಒ.ಎನ್.ಜಿ.ಸಿ. ಅಂದರೆ, ತೈಲ ಮತ್ತು ನೈಸರ್ಗಿಕ ಅನಿಲ ಮಂಡಳಿಗೂ ಸಮಾಚಾರಗಳಿಗೆ ಅಡ್ಡಿಯಾಗದಂತೆ ಮತ್ತು ತೊಂದರೆಯಾಗದಂತೆ ನೋಡಿಕೊಳ್ಳುವುದು ಅಗತ್ಯ. 1846 ರಿಂದ ಅದು ಅವಿಚ್ಛಿನ್ನವಾಗಿ ಕೆಲಸ ಮಾಡಿಕೊಂಡು ಬಂದಿದೆ. ಈಗ ಅದು ಕೆಲಸ ನಿಲ್ಲಿಸುವುದಕ್ಕೆ ನಾವು ಅವಕಾಶ ಕೊಡುವುದಿಲ್ಲ.'' ಅವನ ಧ್ವನಿ ಒಣಗಿತು. ಉಗುಳು ನುಂಗಿಕೊಂಡ. ದೊಡ್ಡ ಕೈವಸ್ತ್ರದಲ್ಲಿ

ಹಣೆ, ಹುಬ್ಬುಗಳನ್ನು ಒರಸಿಕೊಂಡ.

ಈ ಮನುಷ್ಯನಿಗೆ ಕಛೇರಿಯಲ್ಲಿ ಕುಳಿತು ಕೆಲಸ ಮಾಡುವುದು ಗೊತ್ತೇ ವಿನಹ, ಸಾರ್ವಜನಿಕ ಸಭೆಗಳಲ್ಲಿ ಮಾತನಾಡಲು ತಿಳಿಯದು ಎಂಬುದು ಎಲ್ಲರಿಗೂ ಗೊತ್ತಾಗುವಂತಿತ್ತು. ''ನಾವು... ನೀವು... ಎಲ್ಲರೂ ಅದರ ಬಗ್ಗೆ ಹೆಮ್ಮೆ ಪಡಬೇಕು. ಅದನ್ನು ಆಂ.. ಎಷ್ಟೇ ಕಷ್ಟವಾದರೂ ಕಾಪಾಡಿಕೊಳ್ಳಬೇಕು.'' ನಂತರ ಅವನು ಧ್ವನಿವರ್ಧಕವನ್ನು ಕೊಟ್ಟು, ಮುಗ್ಗರಿಸುತ್ತಾ ಕೆಳಗಿಳಿದು, ಗುಂಪಿನಲ್ಲಿ ಸೇರಿದ. ಸದ್ಯ, ಅವನ ಭಾಷಣ ಮುಗಿಯಿತಲ್ಲಾ ಎಂಬ ಸಮಾಧಾನದಿಂದ ಜನ ಚಪ್ಪಾಳೆ ತಟ್ಟಿದರು. ಆ ಭಾಷಣಕಾರನೂ ಸಹ ಬಿಡುಗಡೆಯಾಯಿತಲ್ಲಾ ಎಂಬಂತೆ ನೆಮ್ಮದಿಯಿಂದ ಉಸಿರ್ಗರೆದ.

''ಅಲಿಬಾಗ್‌ನಲ್ಲಿ ಈ ಸರ್ವೇಕ್ಷಣಾಲಯವನ್ನು ನೀನು ನೋಡಿದ್ದೀಯಾ?'' ಯಾರೋ ಕೇಳಿದರು, ''ಅದೆಲ್ಲಿದೆಯೆಂಬುದು ನನಗಂತೂ ಗೊತ್ತಿಲ್ಲ.''

''ಆಂ?... ಹೌದು, ಹೌದು... ಅದು ಕಡಲ ತೀರದಲ್ಲಿರುವ ಒಂದು ಚಿಕ್ಕ ಬಿಳಿಯ ಮನೆ... ಅದು, ನನಗೆ ಗೊತ್ತು'' ಒಬ್ಬ ಗಂಭೀರವಾಗಿ ಹೇಳಿದ, ''ಆದರೆ ಅದು ಅಷ್ಟು ಮಹತ್ವಪೂರ್ಣವಾದದ್ದೆಂದು ನನಗೆ ಗೊತ್ತಿರಲಿಲ್ಲ.''

''ವಿಶ್ವವಿಖ್ಯಾತವೆಂದು ಆತ ಹೇಳಿದ.''

''ಅವನು ಹಾಗೆ ಹೇಳಿದ ಮೇಲೆ ಇರಲೇಬೇಕು.''

''ಹೌದು, ಹೌದು, ತುಂಬ ಮಹತ್ವಪೂರ್ಣವಾದದ್ದು'' ಪ್ರಭಾವಿತರಾದಂತೆ ಎಲ್ಲರೂ ತಲೆಯಾಡಿಸಿದರು.

ಆದರೆ ಎತ್ತರವಾಗಿ, ದೃಢಕಾಯನಾದ ಯುವಕನೊಬ್ಬ ಹಿಂದಿನಿಂದ ಕೂಗಿ ಹೇಳಿದ, ''ಅದು ತುಂಬ ಹಳೆಯದೆಂಬ ಕಾರಣದಿಂದ ಕೆಲಸಕ್ಕೆ ಬಾರದ ಪುರಾತನ ವೀಕ್ಷಣಾಲಯವನ್ನು ರಕ್ಷಿಸಬೇಕೆ? ನಮ್ಮ ಜಮೀನುಗಳು, ನಮ್ಮ ಬೆಳೆಗಳು ಮತ್ತು ನಮ್ಮ ದೋಣಿಗಳ ಬಗ್ಗೆ ಏನು? ಈ ವಿಷಯಗಳನ್ನು ಕುರಿತು ಮಾತನಾಡಲು ನಾವು ಬಂದಿದ್ದೇವೆಯೇ ವಿನಹ, ಆ ಮನುಷ್ಯನ ದೂಳು ಹಿಡಿದ ಓಬೀರಾಯನ ಕಾಲದ ಕಛೇರಿಯ ಬಗ್ಗೆಯಾಗಲೀ ಅವನ ಕಡತಗಳ ಬಗ್ಗೆಯಾಗಲೀ ಅವನ ಕೆಲಸದ ಬಗ್ಗೆಯಾಗಲೀ ಅಲ್ಲ.''

''ಹೌದು, ಹೌದು. ಅದು ನಿಜವೇ'' ಒಬ್ಬ ಹಿರಿಯ ಅವನನ್ನು ಸಮಾಧಾನ ಪಡಿಸುತ್ತಾ ಹೇಳಿದ, ''ಇಗೋ ತಗೊ, ಈ ಬೀಡಿ ಸೇದು. ನಂತರ ನಮ್ಮ ಜಮೀನು ಮತ್ತು ದೋಣಿಗಳ ವಿಷಯವನ್ನು ಕುರಿತು ಮಾತನಾಡೋಣ.''

ಈಗ ಮೂರನೆ ವ್ಯಕ್ತಿಯೊಬ್ಬ ವೇದಿಕೆಯನ್ನು ಏರಿದ. ಅವನು ತಮ್ಮನವನೇ ಆದ ಅವಾರ್‌ಕರ್. ಬಿಸಿಲು ತಮ್ಮನ್ನು ಬಾಧಿಸುತ್ತಿದ್ದಾಗ್ಯೂ ಜನರು ಗಟ್ಟಿಯಾಗಿ ಹರ್ಷಧ್ವನಿ ಮಾಡಿದರು.

ಅವನು ಅವರ ಗ್ರಾಮಗಳ ಆಡುಭಾಷೆಯಲ್ಲಿ, ಅವರಿಗೆ ಚೆನ್ನಾಗಿ ತಿಳಿದ ವಿಷಯಗಳನ್ನೇ ಕುರಿತು ಮಾತನಾಡಿದ್ದರಿಂದ, ಅವರಿಗೆ ಪುನಃಶ್ಚೇತನ ಉಂಟಾದಂತಾಯಿತು. ಅವನು ಈ ಹಿಂದೆ ಪ್ರಸ್ತಾಪಿಸಿದ್ದ ವಿಷಯಗಳನ್ನೇ ಕುರಿತು ಮತ್ತೆ ಮಾತನಾಡಿದ-ಅವರ ಫಲವತ್ತಾದ ಭೂಮಿ, ಅವರ ಫಸಲಿನ ಶ್ರೇಷ್ಠತೆ, ಕಾರ್ಖಾನೆಗಳ ಸಲುವಾಗಿ ಅದನ್ನು ಏಕೆ ಬಿಟ್ಟು ಕೊಡಬಾರದು, ಇಲ್ಲವೆ ನಾಶಪಡಿಸಬಾರದು, ಹಣದ ಆಮಿಷಕ್ಕೆ ಇಲ್ಲವೆ ಉದ್ಯೋಗದ

ಭರವಸೆಗಳಿಗೆ ಅವರು ಏಕೆ ಬಲಿ ಬೀಳಬಾರದು, ಕಾರಣ, ಅವರಿಗೆ ಈ ಪೈಕಿ ಯಾವುದೇ ಒಂದೂ ಸಿಗುವ ಸಂಭವ ಇಲ್ಲ... ಇತ್ಯಾದಿ... ಇತ್ಯಾದಿ. ಎಲ್ಲರೂ ಅವನ ಮಾತಿಗೆ ಒಪ್ಪಿಗೆಯಿಂದ ತಲೆದೂಗಿದರು, ಮೆಚ್ಚುಗೆಯಿಂದ ಕರತಾಡನ ಮಾಡಿದರು.

''ತಾವು ನಮಗೆ ಕೊಡುವುದಾಗಿ ಹೇಳುತ್ತಿರುವ ಕ್ಷುದ್ರ ಹಣ ನಮಗೆ ಬೇಕಿಲ್ಲ ಎಂದು ಸರ್ಕಾರಕ್ಕೆ ಸ್ಪಷ್ಟಪಡಿಸಲು ನಾವು ಬಂದಿದ್ದೇವೆ... ನಮ್ಮ ಜಮೀನು, ನಮಗೆ ಮಾರಾಟ ಮಾಡಲಾಗದಷ್ಟು ಅಮೂಲ್ಯವಾಗಿದೆ. ಅವರ ಕಾರ್ಖಾನೆಗಳಲ್ಲಿ ಕೆಲಸ ಮಾಡುವ ಜೀತದಾಳುಗಳಾಗಲು ನಾವು ಸಿದ್ಧರಿಲ್ಲ. ನಾವು ಸದಾ ಸ್ವತಂತ್ರವಾಗಿ ಕೆಲಸ ಮಾಡಿ ಜೀವಿಸಿದ್ದೇವೆ. ನಾವೇ ನಮ್ಮ ಒಡೆಯರು. ನಾವೀಗ ಸಚಿವಾಲಯಕ್ಕೆ ನಡೆದು ನಮ್ಮ ಮನವಿ ಪತ್ರವನ್ನು ಮುಖ್ಯಮಂತ್ರಿಯವರಿಗೆ ಕೊಡೋಣ. ಸೋದರರೇ, ನಡೆಯಿರಿ ಮುಂದೆ ಸಾಗೋಣ'' ಆತ ತನ್ನ ಕೈಗಳನ್ನೆತ್ತಿ ಕೊನೆಯ ಮಾತುಗಳನ್ನು ಗಟ್ಟಿಯಾಗಿ ಘೋಷಿಸಿದ.

ಅಲೆಯೊಂದು ಮುನ್ನುಗ್ಗಿ ಬಂದು ಬಂಡೆಗಳಿಗೆ ಬಡಿಯುವಂತೆ, ಅವನ ಘೋಷಣೆಯು ಇಡೀ ಸಭಿಕರ ಮೇಲೆ ಮಹತ್ತರ ಪರಿಣಾಮ ಉಂಟುಮಾಡಿತು. ಹಠಾತ್ತನೆ ಗಲಿಬಿಲಿ-ಯುಂಟಾಗಿ ಜನ ಚದುರಲಾರಂಭಿಸಿದರು. ತನ್ನ ಅಕ್ಕಪಕ್ಕದಲ್ಲಿ ನಿಂತಿದ್ದ ಜನರು ಚಲಿಸಿ, ಬೇರೆ ಬೇರೆ ದಿಕ್ಕುಗಳಲ್ಲಿ ಹೋಗುತ್ತಿರುವುದನ್ನು ಹರಿ ಗಮನಿಸಿದ. ಅವನು ಮೊದಲು ಒಂದು ಗುಂಪನ್ನು ಸೇರಿದ, ನಂತರ ಮತ್ತೊಂದನ್ನು ಸೇರಿದ.ಇವರೆಲ್ಲಾ ಎಲ್ಲಿಗೆ ಹೋಗುತ್ತಿದ್ದಾರೆ, ತಾನೂ ಇವರನ್ನು ಅನುಸರಿಸಬೇಕೇ ಎಂಬುದು ಅವನಿಗೆ ಗೊತ್ತಾಗಲಿಲ್ಲ.

ದೃಢಕಾಯದ ಯುವಕನೊಬ್ಬನ ತೋಳನ್ನು ಹಿಡಿದು ಹರಿ ಕೇಳಿದ, ''ಈಗ ನಾವೆಲ್ಲಾ ಸಚಿವಾಲಯಕ್ಕೆ ನಡೆದು ಹೋಗಬೇಕಾ?''

ಅದೇ ಸಮಯಕ್ಕೆ, ಧ್ವನಿವರ್ಧಕದಿಂದ ಒಂದು ಧ್ವನಿ ಕೇಳಿ ಬಂತು, ''ಗೆಳೆಯರೇ, ದೋಣಿಗಳು ನಮಗಾಗಿ ಕಾಯುತ್ತಾ ನಿಂತಿರುವ ಸಸ್ಸೂನ್ ಹಡಗುಕಟ್ಟೆಗೆ ಹಿಂದಿರುಗಿ. ಮನವಿ ಪತ್ರದೊಡನೆ ಐವರು ರೈತರು ಮಾತ್ರ ಸಚಿವಾಲಯಕ್ಕೆ ಹೋಗುತ್ತಾರೆ. ಈ ಪೈಕಿ ನಾನೂ ಒಬ್ಬ. ಮುಖ್ಯಮಂತ್ರಿ ಸಾಹೇಬರನ್ನು ಕಂಡು ನಂತರ, ಹಡಗುಕಟ್ಟೆಯಲ್ಲಿ ನಾವು ನಿಮ್ಮನ್ನು ಸಂಧಿಸುತ್ತೇವೆ. ಒಟ್ಟಿಗೆ ವಾಪಸ್ ಹೋಗೋಣ.''

''ಇಗೋ, ನಿನ್ನ ಪ್ರಶ್ನೆಗೆ ಉತ್ತರ ದೊರಕಿತಾ?'' ಆ ಯುವಕ ಹರಿಯ ಕೈಯನ್ನು ಕೊಡವಿ ಮುನ್ನಡೆದ.

ಜನರ ಗುಂಪು ರಸ್ತೆಯಲ್ಲಿ ನಡೆದು ಕಣ್ಮರೆಯಾದದ್ದನ್ನು ಹರಿ ಅಲ್ಲೇ ನಿಂತು ನೋಡಿದ. ತನ್ನನ್ನು ಕೈಬಿಡಲಾಗಿದೆ, ತನಗಾರೂ ಗೆಳೆಯರಿಲ್ಲ ಎಂಬ ಭಾವನೆ ಅವನಿಗುಂಟಾಯಿತು. ಹಳ್ಳಿಯಿಂದಲೂ ಯಾವ ಸ್ನೇಹಿತನೂ ಬಂದಿರಲಿಲ್ಲ. ರಸಗೊಬ್ಬರ ಕಾರ್ಖಾನೆಯು ನಿರ್ಮಾಣಗೊಂಡು ತಮಗೆ ಕೆಲಸ ಲಭಿಸುವುದನ್ನು ನಿರೀಕ್ಷಿಸುತ್ತಾ ಅವರು ನೆಮ್ಮದಿಯಿಂದ ಮನೆಗಳಲ್ಲೇ ಕುಳಿತಿದ್ದಾರೆ. ಥುಲ್‌ನಿಂದ ದೂರ ಹೋಗಲು ಹಾಗೂ ಮುಂಬೈಗೆ ಹೋಗುವ ಉದ್ದೇಶದಿಂದ, ಹರಿ ತನ್ನ ಸ್ನೇಹಿತರಿಂದ ಬೇರ್ಪಟ್ಟು ಮೆರವಣಿಗೆಯಲ್ಲಿ ಸೇರಿರುವ ಎಂಬ ಭಾವನೆ ಅವನಿಗೆ ಬಂದೇ ಇರಲಿಲ್ಲ. ಅಲ್ಲದೆ, ರೈತರ ಮತ್ತು ಮೀನುಗಾರರ ಈ ಮೆರವಣಿಗೆಯಲ್ಲಿ ತನಗೆ ಪರಿಚಿತರಾರೂ ಇರಲಿಲ್ಲ, ಭೂರಹಿತ, ದೋಣಿರಹಿತ ಮತ್ತು ಉದ್ಯೋಗರಹಿತನಾದ ತನ್ನ ತಂದೆಯನ್ನು ಅವರಾರೂ ಅರಿತಿರಲಿಲ್ಲ. ತಾನು ಯಾರಿಗೂ

ಯಾರ ಸ್ನೇಹಕ್ಕೂ ಅರ್ಹನಲ್ಲ. ಇತರರು ಅವನನ್ನು ಹಿಂದೆಯೇ ಬಿಟ್ಟು ಹೋದರು. ಹರಿ ಮುಂಬೈನಲ್ಲಿ ಏಕಾಂಗಿಯಾಗಿದ್ದ.

* * *

ಆ ಪುಟ್ಟ ಗುಡಿಸಿಲಿನಲ್ಲಿ ಯಾರೂ ಮೆರವಣಿಗೆಯ ಬಗ್ಗೆಯಾಗಲಿ, ಬಿಜುವಿನ ದೋಣಿಯನ್ನು ನೀರಿನಲ್ಲಿ ತೇಲಿಬಿಡುವ ಬಗ್ಗೆಯಾಗಲಿ ಆಸಕ್ತಿ ಹೊಂದಿರಲಿಲ್ಲ. ಹರಿ ಮನೆಬಿಟ್ಟು ಓಡಿಹೋದ ಮೇಲೆ, ಆ ಹುಡುಗಿಯರು ತಾಯಿಯ ಹಾಸಿಗೆಯ ಬಳಿ ಹೋಗಿ ಸರದಿಯ ಮೇಲೆ ಇಡೀ ರಾತ್ರಿ ಅವಳ ಬದಿಯಲ್ಲಿ ಕುಳಿತು ಆಗಾಗ ಸ್ವಲ್ಪ ನೀರು ಕುಡಿಸುತ್ತಿದ್ದರು. ಹಣೆಯ ಮೇಲೆ ಒದ್ದೆ ಬಟ್ಟೆ ಹಾಕುತ್ತಿದ್ದರು. ಅರ್ಧ ನಿದ್ರಾವಸ್ಥೆಯಲ್ಲಿ-ರುತ್ತಿದ್ದ ಬೇಲ ಮತ್ತು ಕಮಲ ಮೆಲು ದನಿಯಲ್ಲಿ ಕೇಳುವರು, "ಹರಿ ಬರುವನಾ?" ಲೀಲ ಮೌನವಾಗಿ ತಲೆಯಾಡಿಸುವಳು.

ದೀರ್ಘವಾದ ಆ ರಾತ್ರಿ ಅವರೆಲ್ಲಾ ತುಂಬ ದಣಿದಿದ್ದು, ಸೂರ್ಯ ಉದಯಿಸುವ ವರೆಗೆ ಗಾಢವಾಗಿ ನಿದ್ರೆ ಹೋದರು. ಇಬ್ಬನಿ ಬಿದ್ದ ಹುಲ್ಲಿನೊಳಗೆ ನುಗ್ಗಿ ಬೊಗಳುತ್ತಾ, ಕ್ರೌಂಚಪಕ್ಷಿಗಳನ್ನು ಜವುಗು ಭೂಮಿಯತ್ತ ಅಟ್ಟಿಸಿಕೊಂಡು ಹೋಗುತ್ತಿದ್ದ ಪಿಂಟೊ ಇರಲಿಲ್ಲ. ತಾಯಿಯ ಹಾಸಿಗೆಯ ತುದಿಯ ಮೇಲೆ ತಲೆಯಿಟ್ಟುಕೊಂಡು ಲೀಲ ಸಹ ನಿದ್ದೆ ಹೋದಳು. ಅವಳಿಗೆ ಬಂಡೆ ಮತ್ತು ಕಡಲ ಬಗ್ಗೆಯಾಗಲಿ, ತಾನು ಮುಂಜಾನೆ ಮಾಡಬೇಕಾದ ಅನುದಿನದ ಪ್ರಾರ್ಥನೆಯ ಬಗ್ಗೆಯಾಗಲಿ ಮರೆತು ಹೋಗಿತ್ತು.

ಲೀಲ ಎದ್ದಾಗ ತುಂಬ ಬೆಳಕಾಗಿದ್ದದ್ದು ಕಂಡು ಹೌಹಾರಿದಳು. ಪ್ರಖರ ಬೆಳಕು, ಪಿಂಟೋವಿನ ಮೌನ ಮತ್ತು ಹರಿಯ ವಿಸ್ಮಯಕಾರಕ ಅದೃಶ್ಯವು ಅವಳಿಗೊಂದು ಆಘಾತವಾ-ಗಿತ್ತು. ಕೋಪದಿಂದ ಹೊರಟು ಹೋಗಿದ್ದ ಹರಿ ರಾತ್ರಿ ಖಂಡಿತ ಹಿಂದಿರುಗುತ್ತಾನೆಂದು ಅವಳು ಭಾವಿಸಿದ್ದಳು. ಆದರೆ ಅವನು ಸುತ್ತಮುತ್ತ ಎಲ್ಲೂ ಕಾಣುತ್ತಿರಲಿಲ್ಲ. ಲೀಲ ಸ್ವಲ್ಪ ಹುಬ್ಬು ಗಂಟಿಕ್ಕಿಕೊಂಡೇ ಎದ್ದಳು. ಬಳಿಕ ತನ್ನ ತಾಯಿಯ ಕಡೆ ತಿರುಗಿ ನೋಡಿದಳು. ಹಾಸಿಗೆಯ ಮೇಲೆ ನಿಸ್ತೇಜವಾಗಿ ಅಲ್ಲಾಡದೆ ಮಲಗಿದ್ದು, ಜ್ವರದಿಂದ ಇನ್ನೂ ಕೊರಗುತ್ತಿದ್ದ ಅವಳನ್ನು ಕಂಡು, ಲೀಲಳ ತಲೆಯಿಂದ ಇತರೆಲ್ಲಾ ಆಲೋಚನೆಗಳೂ ಮಾಯವಾದವು.

ಅವಳು ತನ್ನ ತಂಗಿಯರನ್ನು, "ಕಮಲ, ಬೇಲ" ಎಂದು ಕೂಗಿ ಎಬ್ಬಿಸಿ, ಅವರಿಗೆ ಚಹಾವನ್ನು ಕೊಟ್ಟಳು. "ಪೇಟೆಗೆ ಹೋಗಿ ಅಮ್ಮನಿಗಾಗಿ ಸ್ವಲ್ಪ ಮಂಜುಗಡ್ಡೆಯನ್ನು ತನ್ನಿ. ಹರಿ ಅಲ್ಲಿದ್ದಾನಾ ನೋಡಿ. ಗುಡಿಯಲ್ಲಿ ನಾಟಕ ನೋಡಲು ರಾತ್ರಿಯೆಲ್ಲಾ ಅವನು ಹಳ್ಳಿಯಲ್ಲೇ ಇದ್ದಿರಬಹುದು. ಅವನನ್ನು ಕರೆಯಿರಿ. ಜೊತೆಗೆ ಸ್ವಲ್ಪ ಮಂಜುಗಡ್ಡೆಯನ್ನು ತರುವಂತೆ ಅವನಿಗೆ ತಿಳಿಸಿ."

ಅಡಿಗೆ ಮನೆಯಲ್ಲಿದ್ದ ಚಿಲ್ಲರೆ ಹಣವನ್ನು ತೆಗೆದುಕೊಂಡು ಹುಡುಗಿಯರು ಕತಲ ದಂಡೆಯ ಮೇಲೆ ಓಡಿದರು. ಬಿಜುವಿನ ದೋಣಿಯನ್ನು ತೇಲಿ ಬಿಡಲು ನಡೆಯುತ್ತಿದ್ದ ಪ್ರಯತ್ನವನ್ನು ನೋಡಲು ಸಹ ಅವರು ನಿಲ್ಲಲಿಲ್ಲ. ಗ್ರಾಮಸ್ಥರಲ್ಲಿ ಬಹುತೇಕ ಮಂದಿ, ಅದರಲ್ಲಿ ಆಸಕ್ತಿಯನ್ನು ಕಳೆದುಕೊಂಡಂತೆ ತೋರುತ್ತಿತ್ತು. ಎತ್ತು-ಯಂತ್ರಗಳನ್ನು ನಿಯಂತ್ರಿಸಲು ಮತ್ತು ಹಗ್ಗಗಳನ್ನು ಎಳೆಯಲು ಬಿಜು ನೇಮಿಸಿಕೊಂಡಿದ್ದ ಕೆಲವು ಹುಡುಗರನ್ನು ಬಿಟ್ಟು ಮತ್ತಾರೂ ಇರಲಿಲ್ಲ. ಬೇಲ ಮತ್ತು ಕಮಲ, ಅತ್ತ ಇತ್ತ ನೋಡದೆ,

ಪೇಟೆಯಲ್ಲಿನ ಮಂಜುಗಡ್ಡೆ ಅಂಗಡಿಗೆ ನೇರವಾಗಿ ಹೋದರು. ಅಲ್ಲಿ ತರಕಾರಿ ಚೀಲವನ್ನು ಮನೆಗೆ ಒಯ್ಯುತ್ತಿದ್ದ ಲೀಲಳ ಗೆಳತಿ ಮಿನಾ ಸಿಕ್ಕಳು.

"ನೀವು ಕೇಳಿದ್ದಿರಾ?" ಅವಳು ಹುಡುಗಿಯರನ್ನು ಕರೆಯುತ್ತಾ ಹೇಳಿದಳು, "ಸರ್ಕಾರಕ್ಕೆ ಮನವಿ ಪತ್ರ ಸಲ್ಲಿಸಲು ಗಂಡಸರೆಲ್ಲಾ ಮುಂಬೈಗೆ ಹೊರಟಿದ್ದಾರೆ. ಅವರ ಪೈಕಿ ಹರಿಯೂ ಇದ್ದನೆಂದು ಯಾರೋ ನನಗೆ ಹೇಳಿದರು."

"ಹರಿ?" ಮಿನಾಳನ್ನೇ ನೋಡುತ್ತಾ ಹುಡುಗಿಯರು ನಿಂತರು. "ಏನು, ಹರಿ ಮುಂಬೈಗೆ ಹೋದನೆ? ಇಲ್ಲ, ಖಂಡಿತ ಇಲ್ಲ. ಅವನು ಇಲ್ಲೇ ಎಲ್ಲೋ ಇರಬೇಕು."

"ಎಲ್ಲಿ? ನಾನಂತೂ ಅವನನ್ನು ನೋಡಲಿಲ್ಲ."

"ನೀವು ಬೇಕಾದರೆ ರಾಜುವನ್ನು ಕೇಳಿ ಅವನೇ ನನಗೆ ಹೇಳಿದ್ದು."

"ಇಲ್ಲ. ಈಗ ಸಮಯವಿಲ್ಲ. ಅಮ್ಮನಿಗಾಗಿ ನಾವು ಮಂಜುಗಡ್ಡೆ ಕೊಳ್ಳಬೇಕು. ಬೇಗ ಹೋಗಬೇಕು. ಅವಳಿಗೆ ಜ್ವರ" ಎಂದು ಹೇಳಿ ಅವರು ಧಾವಿಸಿದರು.

ಅವರು ಮನೆಗೆ ಹಿಂದಿರುಗಿದಾಗ, ತಾಳೆ ಮರದ ಹಿಂದೆ ಹಳ್ಳವೊಂದನ್ನು ತೋಡಿ,



ಅದರಲ್ಲಿ ಪಿಂಟೂವನ್ನು ಹೂಳುವ ಕಾರ್ಯವನ್ನು ಲೀಲ ಮುಗಿಸಿದ್ದಳು. ಅವಳು ಮಣ್ಣು ಮುಚ್ಚಿ, ಸಮ ಮಾಡಿ, ಅದನ್ನು ತುಳಿಯುತ್ತಿದ್ದಳು. ಹಾದಿಯಲ್ಲಿ ತಂಗಿಯರು ಬರುತ್ತಿರುವ ಸದ್ದನ್ನು ಕೇಳಿದಾಗ, ಲೀಲ ಎದ್ದು ನಿಂತು, ತನ್ನ ಕೈಗಳನ್ನೂ, ಸೀರೆಯನ್ನೂ ದೂಳಿನಿಂದ ಕೊಡವಿಕೊಂಡಳು. ಲೀಲ ನಿಧಾನವಾಗಿ ಮೊಗಸಾಲೆಗೆ ಹೋಗಿ, ಅಲ್ಲಿ ಮೆಟ್ಟಲುಗಳ ಮೇಲೆ ಕುಳಿತಿದ್ದನ್ನು ಹುಡುಗಿಯರು ನೋಡಿದರು. ಅವಳು ಅಳುತ್ತಿದ್ದುದು ಅವರಿಗೆ ಗೊತ್ತಾಯಿತು. ಅವಳನ್ನು ಹೇಗೆ ಸಮಾಧಾನ ಮಾಡಬೇಕೆಂಬುದು ಅವರಿಗೆ ತಿಳಿಯದು. ತಮ್ಮ ಕಣ್ಣುಗಳಲ್ಲೂ ನೀರು ತುಂಬಿದ್ದು ಅವರ ಅರಿವಿಗೆ ಬಂತು.

ನಂತರ ಬೇಲ ಉಗುಳು ನುಂಗುತ್ತಾ ಹೇಳಿದಳು, "ಹರಿ ಮುಂಬೈಗೆ ಹೋದನೆಂದು

ಮಾನ ಹೇಳಿದಳು. ರಾಜು ಅವಳಿಗೆ ತಿಳಿಸಿದನಂತೆ.''

ಅವಳ ಮಾತು ಅರ್ಥವಾಗಲೇ ಇಲ್ಲವೇನೊ ಎಂಬಂತೆ ಲೀಲ ಮುಖಭಾವ ಮಾಡಿದಳು. ಮನೆಬಿಟ್ಟು ಓಡಿಹೋಗುವಷ್ಟು ಹರಿಗೆ ಕೋಪ ಮತ್ತು ಜಿಗುಪ್ಸೆ ಬಂದಿತ್ತೆ? ಅವಳಿಗೆ ಅದು ಅರ್ಥವಾಗಲಿಲ್ಲ. ತಾನಂತೂ ಎಂದೂ ಓಡಿ ಹೋಗುವವಳಲ್ಲ. ಅವಳು ತಲೆಯನ್ನು ಕೊಡವಿಕೊಂಡಳು. ಆ ಯೋಚನೆ ಭಯಾನಕ ಮತ್ತು ಕ್ಲಿಷ್ಟ. ಆದರೆ ನಾನು ಇಲ್ಲಿದ್ದೇನೆ. ತಂಗಿಯರು ಮತ್ತು ತಾಯಿ ನನ್ನನ್ನವಲಂಬಿಸಿದ್ದಾರೆ. ಹೇಗೋ, ಅಂತೂ ನಿಭಾಯಿಸಬೇಕು ಎಂದು ಯೋಚಿಸಿದಳು. ಯಾವ ಮಾತೂ ಆಡದೆ, ಲೀಲ ಎದ್ದು ಒಳಗೆ ಹೋದಳು. ಹರಿ ಇಲ್ಲದಿರುವುದರಿಂದ ವೈದ್ಯನನ್ನು ನೋಡಲು ತಾನೇ ಅಲಿಬಾಗ್‌ಗೆ ಹೋಗಬೇಕು, ಔಷಧಿ ತರಬೇಕು. ತಾಯಿ ಬಸ್‌ನಲ್ಲಿ ಕುಳಿತು ಪ್ರಯಾಣ ಮಾಡಲು ಆಗುವುದಿಲ್ಲವಾದ್ದರಿಂದ, ವೈದ್ಯನಿಗೆ ತಾನೇ ಎಲ್ಲವನ್ನೂ ವಿವರಿಸಿ, ಅವನ ಸಹಾಯ ಕೇಳಬೇಕು. ಹರಿ ಇದ್ದಿದ್ದರೆ ಎಲ್ಲ ಕೆಲಸಗಳೂ ಎಷ್ಟು ಸುಲಭವಾಗುತ್ತಿದ್ದವು ಎಂದು ಆಲೋಚಿಸಿ, ನಿಟ್ಟುಸಿರು ಬಿಟ್ಟಳು.

ಅಲಿಬಾಗ್‌ಗೆ ಹೋಗಲು ಅವಳು ಸಿದ್ಧವಾಗುತ್ತಿದ್ದಾಗ,ಹೊರಗಡೆ ಕೋಲಾಹಲ-ವುಂಟಾಯಿತು. ಕಿರಿದಾದ ಹಾದಿಯಲ್ಲಿ ಆರ್ಭಟಿಸಿಕೊಂಡು ಬರುತ್ತಿರುವ ಮೋಟಾರಿನ ಅಪರೂಪದ ಸದ್ದು ಕೇಳಿಸಿತು. ಹುಲ್ಲಿನ ಮೇಲೆ ಏರಿಳಿಯುತ್ತಾ ಬಂದ ಆ ಕಾರು, ಬಿಳಿಯ ಬಂಗಲೆ 'ಮೊನ್ ರಿಪೊಸ್'ಗೆ ಹೋಯಿತು.

''ಓ, ಬೇಲ, ಕಮಲ, ನೋಡಿ!''ಲೀಲ ಕೂಗಿದಳು, ''ಡಿಸಿಲ್ವಾ ಅವರು ಮುಂಬೈನಿಂದ ಬಂದಿದ್ದಾರೆ.''

# 7

ಹರಿ, ಹಲವಾರು ತಾಸುಗಳ ಕಾಲ 'ಕಪ್ಪುಕುದುರೆ'ಯ ಸುತ್ತಮುತ್ತಲೇ ಓಡಾಡುತ್ತಿದ್ದ. ಅವನಿಗೆ ಅದೊಂದೇ ಜಾಗ ಗೊತ್ತಿದ್ದರಿಂದ ಆ ಸ್ಥಳವನ್ನು ಬಿಡುವ ಧೈರ್ಯ ಅವನಿಗಿರಲಿಲ್ಲ. ಹಡಗುಕಟ್ಟೆಗೆ ಹೋಗುತ್ತಿದ್ದ ಹಲವಾರು ರಸ್ತೆಗಳಿಂದ ಗ್ರಾಮಸ್ಥರು ಹೊರಟು ಹೋಗಿದ್ದರು. ತಮ್ಮೊಡನೆ ಬರುವಂತೆ ಯಾರೂ ಅವನನ್ನು ಕರೆಯಲಿಲ್ಲ. ಅವನ ಕಡೆ ಗಮನವನ್ನೂ ನೀಡಲಿಲ್ಲ. ಅವನನ್ನು ಏಕಾಂಗಿಯಾಗಿ ಅಲ್ಲೇ ಬಿಟ್ಟು ನಿರ್ಗಮಿಸಿದ್ದರು.

ಒಂಟಿಯಾಗಿದ್ದ ಅವನಿಗೆ, ವಿಪರೀತ ಬಾಯಾರಿಕೆಯಾಗಿದೆಯೆಂಬುದು ಅರಿವಿಗೆ ಬಂದಿತು. ಆ ಚೌಕದ ಸುತ್ತ ಇದ್ದ ಬೃಹತ್ ಬಂಗಲೆಗಳ ಪೈಕಿ ಒಂದರ ಮುಂದೆ ಎಳನೀರನ್ನು ಗುಡ್ಡೆ ಹಾಕಿಕೊಂಡು ಒಬ್ಬ ಕುಳಿತಿದ್ದನ್ನು ಹರಿ ನೋಡಿದ. ತಾನು ತಂದಿದ್ದ ಸ್ವಲ್ಪ ಚಿಲ್ಲರೆ ನಾಣ್ಯ ಜೇಬಿನಲ್ಲೇ ಇದ್ದುದರಿಂದ ಹರಿ ಅವನತ್ತ ಹೋಗಿ, ''ಇದಕ್ಕೆಷ್ಟು?'' ಎಂದು ಕೇಳಿದ. ಅವನು ತೆಂಗನ್ನು ಹಿಂದೆಂದೂ ಕೊಂಡವನಲ್ಲ. ಮನೆಯಲ್ಲಾದರೆ, ತನಗೆ ಬೇಕೆನಿಸಿದಾ-ಗಲೆಲ್ಲಾ, ತೆಂಗಿನ ಮರ ಹತ್ತಿ ಇಡೀ ಗೊನೆಯನ್ನೇ ಕೆಳಗಿಳಿಸುತ್ತಿದ್ದ. ಅದರ ಬೆಲೆಯ ಅರಿವೇ ಅವನಿಗಿರಲಿಲ್ಲ. ''ಎರಡು ರೂಪಾಯಿಗಳು'' ಎಂದು ಆ ಮನುಷ್ಯ ಹೇಳಿದಾಗ, ಹರಿಗೆ ಎದೆ ದಸಕ್ಕೆಂದಿತು. ಬೆಲೆಯನ್ನು ಹೇಳಿದ ಕಪ್ಪು ಮುಖದ ಆ ಗಡಸು ವ್ಯಕ್ತಿ, ಸಿಗರೇಟು ಸೇದುತ್ತಾ ಹರಿಯ ಮುಖವನ್ನು ನೋಡಿ ನಗುತ್ತಾ ಸ್ವಲ್ಪ ಕರುಣೆಯಿಂದಲೇ ಕೇಳಿದ, ''ಏಕೆ, ಏನಾಯ್ತು? ನಗರದಲ್ಲಿ ಇದರ ಬೆಲೆ ನಿನಗೆ ಗೊತ್ತಿಲ್ಲವೇ? ಹೂಂ, ನಿನ್ನ ಮುಖ ನೋಡಿದರೆ ಗೊತ್ತಿಲ್ಲ ಅನಿಸುತ್ತದೆ. ಕಡಿಮೆ ಬೆಲೆಯದನ್ನು ನಿನಗಾಗಿ ಹುಡುಕುತ್ತೇನೆ'' ಎಂದು ಹೇಳಿ ಆ ಗುಡ್ಡೆಯನ್ನು ಕೆದಕಿ, ಸಣ್ಣ ಎಳನೀರೊಂದನ್ನು ತೆಗೆದು, ತನ್ನ ಹರಿತವಾದ ಮಚ್ಚಿನಿಂದ ಅದರ ತುದಿಯನ್ನು ಕೊಚ್ಚಿ ಹರಿಗೆ ಕೊಟ್ಟ. ಹರಿ ಎಳನೀರನ್ನು ಕುಡಿಯುತ್ತಿದ್ದ ರೀತಿಯನ್ನು ವಿನೋದದಿಂದ ನೋಡುತ್ತಾ ಅವನು ಹೇಳಿದ, ''ನಿನ್ನನ್ನು ನೋಡಿದರೆ ಇಡೀ ದಿನ ನೀನು ಏನೂ ತಿಂದಿಲ್ಲ ಮತ್ತು ಕುಡಿದಿಲ್ಲ ಎಂದು ಅನಿಸುತ್ತದೆ.''

''ಏನನ್ನೂ ಇಲ್ಲ'' ಎಂದು ಹರಿ ಒಪ್ಪಿಕೊಂಡು, ತನ್ನ ಬಾಯನ್ನು ಒರಸಿಕೊಳ್ಳುತ್ತಾ ಸಿಹಿ ಮತ್ತು ಮೃದುವಾದ ಎಳೆಯ ಕಾಯನ್ನು ಹೆರೆದುಕೊಂಡು ತಿಂದ. ''ನನಗೆ ಹಸಿವು ಮತ್ತು ಬಾಯಾರಿಕೆ.''

''ನಿನ್ನನ್ನು ನೋಡಿದರೇ ಹೇಳಬಹುದು'' ಆ ಎಳೆ ನೀರಿನವ ತಲೆ ತೂಗುತ್ತಾ ಹೇಳಿದ, ದಿನದ ಆ ಸಮಯದಲ್ಲಿ ಬೇರೆ ಯಾರೂ ಗಿರಾಕಿಗಳಿರಲಿಲ್ಲವಾದ್ದರಿಂದ ಹರಿಯೊಡನೆ ಅವನು ಹರಟಲಾರಂಭಿಸಿದ. ''ನಿಮ್ಮ ಹಳ್ಳಿಯಿಂದ ನೀನು ಓಡಿ ಬಂದಿದ್ದೀ ಅಲ್ಲವಾ?''

"ನಾನು ಮೆರವಣಿಗೆಯ ಜತೆಯಲ್ಲಿ ಬಂದೆ" ಹರಿ ಸ್ವಲ್ಪ ಹೆಮ್ಮೆಯಿಂದಲೇ ಹೇಳಿದ. "ಇದೀಗ ಇಲ್ಲಿದ್ದ ಮೆರವಣಿಗೆಯನ್ನು ನೀನು ನೋಡಿದೆಯಲ್ಲವೆ? ನಾವು ಅಲಿಬಾಗ್‌ನಿಂದ ಇಂದು ಬೆಳಿಗ್ಗೆ ಬಂದೆವು."

"ಓ, ಸರ್ಕಾರದಿಂದ ಏನನ್ನು ಕೇಳುವುದಕ್ಕಾಗಿ ಬಂದಿರಿ? ಆಹಾರ, ಅರಮನೆಗಳು, ಆಭರಣಗಳು....."

ತಮ್ಮ ಬೇಡಿಕೆಗಳನ್ನು ವಿವರಿಸಲು ಹರಿ ಯತ್ನಿಸಿದ. ಆದರೆ ಎಳನೀರು ಮಾರಾಟಗಾರನಿಗೆ ಆದರಲ್ಲಿ ಆಸಕ್ತಿ ಇದ್ದಂತೆ ತೋರಲಿಲ್ಲ. ಮತ್ತೊಂದು ಸಿಗರೇಟು ಹೊತ್ತಿಸುತ್ತಾ ಅವನು ಹೇಳಿದ, "ನಿಮಗೆ ಬೇಕಾದ್ದನ್ನೆಲ್ಲಾ ಸರ್ಕಾರಕ್ಕೆ ಬೇಡುವುದೇ ಬೇಡುವುದು. ಸರ್ಕಾರಕ್ಕೆ ಕಿವಿಗಳಿದ್ದು ನಿಮ್ಮ ಮಾತು ಅದಕ್ಕೆ ಕೇಳುವುದೆಂದು ತಿಳಿದಿದ್ದೀರಾ? ನಾನು ಹೇಳುತ್ತೇನೆ, ಕೇಳು, ಸರ್ಕಾರಕ್ಕೆ ಇರುವುದು ಬರೀ ಬಾಯಿ ಮಾತ್ರ. ಅದರಿಂದ ಅದು ಎಲ್ಲವನ್ನೂ ನುಂಗಿ ಹಾಕುತ್ತದೆ. ನಮ್ಮ ತೆರಿಗೆಗಳನ್ನು ನುಂಗುತ್ತದೆ, ನಮ್ಮ ಭೂಮಿಯನ್ನು ಕಬಳಿಸುತ್ತದೆ. ಬಡವರನ್ನೂ ಸ್ವಾಹಾ ಮಾಡುತ್ತದೆ. ನನ್ನ ಸಲಹೆಯನ್ನು ಕೇಳು, ಸರ್ಕಾರದಿಂದ ದೂರ ಇರು. ಸರ್ಕಾರದಿಂದ ಏನನ್ನೂ ಕೇಳಬೇಡ, ಅದನ್ನು ಅವಲಂಬಿಸಬೇಡ. ಸರ್ಕಾರವೇ ನಿನ್ನ ತಂದೆ ಮತ್ತು ನಿನ್ನ ತಾಯಿ ಎಂದು ಅವರು ಹೇಳುತ್ತಾರೆ. ನನಗೆ ಕೇವಲ ಆರು ವರ್ಷವಾಗಿದ್ದಾಗ ನನ್ನ ತಂದೆ ತಾಯಿ, ನನ್ನನ್ನು ಮನೆಯಿಂದ ಹೊರ ಹಾಕಿದರು. ನನಗೆ ಅವರ ಅಗತ್ಯವಿಲ್ಲ. ಈಗ ನಾನೊಬ್ಬ ಮನುಷ್ಯ. ನನ್ನ ಕಾಲ ಮೇಲೆ ನಾನೇ ನಿಂತಿದ್ದೇನೆ. ಏಯ್ ಹುಡುಗ, ಅದೇ ಅತ್ಯುತ್ತಮವಾದದ್ದು-ವಿಮೋಚನೆ ಮತ್ತು ಸ್ವಾತಂತ್ರ್ಯ. ದಯವಿಟ್ಟು ಎಂದಿಗೂ ಬೇಡಬೇಡ. ನಿನಗೇನು ಬೇಕೋ ಅದನ್ನು ದಕ್ಕಿಸಿಕೊ. ಮನುಷ್ಯನಾಗು, ಸ್ವತಂತ್ರನಾಗು."

ಹರಿ ಅವನ ಮಾತು ಕೇಳಿ ಒಪ್ಪಿಗೆಯಿಂದ ತಲೆದೂಗಿದ. ಈ ಎಳನೀರು ಮಾರುವವನು ಮೇಧಾವಿ, ಗಟ್ಟಿಗ ಮತ್ತು ಪ್ರಶಂಸಾರ್ಹ ಎಂದು ಅವನು ಭಾವಿಸಿದ. ಅವನ ಕಾಲ ಬಳಿ ಕುಳಿತು ಕಲಿಯಲು ಹರಿ ಸಿದ್ಧನಾಗಿದ್ದ. ಆದರೆ ಹರಿಗೆ ಉಪದೇಶಿಸಲು ಅವನು ಆಸಕ್ತನಾಗಿರುವಂತೆ ಕಾಣಲಿಲ್ಲ. ಅವನಿಗೆ ತಂದೆ ಮತ್ತು ತಾಯಿಯ ಅಗತ್ಯ ಇಲ್ಲದಿದ್ದಂತೆ ಶಿಷ್ಯ ಅಥವಾ ಅನುಚರನ ಅಗತ್ಯವೂ ಇರಲಿಲ್ಲ. ದೊಡ್ಡ ಕಟ್ಟಡವೊಂದರ ಮೆಟ್ಟಿಲುಗಳಿಂದ ನಗುನಗುತ್ತಾ ಇಳಿದು ಬಂದು, ಎಳನೀರಿನ ಗುಡ್ಡೆಯ ಮುಂದೆ ನಿಂತ ಯುವಕ ಮತ್ತು ಯುವತಿಯತ್ತ ಅವನು ಗಮನ ಹರಿಸಿ, ಅವರಿಗಾಗಿ ಎಳನೀರನ್ನು ಕೊಚ್ಚಲು ಪ್ರಾರಂಭಿಸಿದ. ತಮ್ಮ ಭುಜಗಳಿಗೆ ನೇತು ಹಾಕಿಕೊಂಡಿದ್ದ ಚೀಲಗಳಲ್ಲಿ ಅವರು ಹಣ ಇಟ್ಟುಕೊಂಡಿದ್ದರು. ಹರಿದ ಬಟ್ಟೆಯ ಮತ್ತು ಹಸಿದ ತಾನು ಇನ್ನು ಆ ಜಾಗ ಬಿಡುವುದು ಅಗತ್ಯವೆಂದು ಹರಿಗೆ ಅನಿಸಿತು.

ಕೊಳಕು ಗುಂಡಿಗಳು ಮತ್ತು ಕಸದ ಗುಡ್ಡೆಗಳಿಂದ ಚೆಲ್ಲಾಪಿಲ್ಲಿಯಾಗಿ ಬಿದ್ದಿದ್ದ ಹೊಲಸನ್ನು ಹುಷಾರಾಗಿ ದಾಟುತ್ತಾ, ಹರಿ ಕಾಲುಹಾದಿಯಲ್ಲಿ ಬರುತ್ತಿದ್ದಾಗ ಅವನಿಗೊಂದು ಧ್ವನಿ ಕೇಳಿಸಿತು, "ಆ ಬಿಲ್ಲುವಿನ ಮಾತು ಕೇಳಬೇಡ, ಅವನಿಂದ ದೂರವಿರು. ಅವನು ಮಹಾ ಅಪಾಯಕಾರಿ. ಹಗಲಿನಲ್ಲಿ ತೆಂಗನ್ನು ಕೊಚ್ಚಲು ಆ ಮಚ್ಚನ್ನು ಉಪಯೋಗಿಸುತ್ತಾನೆ. ರಾತ್ರಿಯ ವೇಳೆ ಅದನ್ನು...." ಯಾರೆಂದು ಹರಿ ಹೊರಳಿ ನೋಡಿದಾಗ, ಹರಿದ ಚಾಪೆಯ ಮೇಲೆ ಕುಳಿತಿದ್ದ ಭಿಕ್ಷುಕನೊಬ್ಬ ತನ್ನ ಕತ್ತಿನ ಮೇಲೆ ಕೈ ಆಡಿಸಿ, ವೀಳ್ಯದೆಲೆ ರಸದಿಂದ

ಕೆಂಪಾಗಿದ್ದ ನಾಲಗೆಯನ್ನು ಹೊರಚಾಚಿ, ತನ್ನ ಮಾತಿನ ಅರ್ಥವೇನೆಂಬುದನ್ನು ಹರಿಗೆ ಸೂಚಿಸಿದ. ಹರಿ ಬೆಚ್ಚಿಬಿದ್ದುದನ್ನು ನೋಡಿ, ಆ ಭಿಕ್ಷುಕ ತನ್ನ ಬಾಯನ್ನು ದೊಡ್ಡದಾಗಿ ತೆರೆದು ಜೋರಾಗಿ ನಗುತ್ತಿದ್ದ.

" ಏಕೆ, ನಿನಗೆ ಆಶ್ಚರ್ಯವಾಯಿತಾ? ಈ ರಸ್ತೆಯ ಬದಿ ಜೀವಿಸುವ ಜನ ಎಂಥವರೆಂಬುದು ನಿನಗೆ ತಿಳಿಯದೆ? ಪೋಲಿಸರ ಕಣ್ಣಿಗೆ ಮಣ್ಣೆರಚಲು ಇದೊಂದು ಸುರಕ್ಷಿತ ಉದ್ಯೋಗ, ಜೀವನೋಪಾಯಕ್ಕಾಗಿ. ಅದರ ಹಿಂದೆ ಇರುವುದು ಅತ್ಯಂತ ಅಪಾಯಕಾರಿ ಬದುಕು. ಕೇವಲ ಎಳನೀರಿನ ಮಾರಾಟದಿಂದ, ಇಲ್ಲವೆ ಭಿಕ್ಷೆಯಿಂದ ಒಬ್ಬ ವ್ಯಕ್ತಿ ಜೀವಿಸುವುದು ಸಾಧ್ಯವೆಂದು ನೀನು ಭಾವಿಸುತ್ತೀಯಾ? ಅದು ಖಂಡಿತ ಸಾಧ್ಯವಿಲ್ಲವೆಂದು ನಾನು ಹೇಳುತ್ತೇನೆ. ನಗರದಲ್ಲಿ ಹೇಗೆ ಬಾಳಬೇಕೆಂಬ ಬಗ್ಗೆ ಕೆಲವೊಂದು ರಹಸ್ಯಗಳು ನಿನಗೆ ಬೇಕಾದರೆ– ಅಲ್ಪ ಶುಲ್ಕಕ್ಕಾಗಿ–ನಾನು ನಿನಗೆ ತಿಳಿಸುತ್ತೇನೆ" ಭಿಕ್ಷುಕ ಕಣ್ಮಿಟುಕಿಸುತ್ತಾ ಹೇಳಿ, ಹರಿಯೂ ಕುಳಿತುಕೊಳ್ಳಲು ಸಾಧ್ಯವಾಗುವಂತೆ, ಚಾಪೆಯ ಒಂದು ಪಕ್ಕಕ್ಕೆ ಸರಿದ.

ಆದರೆ ಯಾರಿಂದಲೇ ಆಗಲಿ ಇಂತಹ ಅಪಾಯಕಾರಿ ಉಪಾಯಗಳನ್ನು ಕಲಿಯಲು ಹರಿಗೆ ಸ್ವಲ್ಪವೂ ಇಚ್ಛೆ ಇರಲಿಲ್ಲವಾದ್ದರಿಂದ, ಬೇಡವೆಂಬಂತೆ ಅವನು ತಲೆಯನ್ನು ಅಲ್ಲಾಡಿಸುತ್ತಾ ಅಲ್ಲಿಂದ ಸರಸರನೆ ಹೊರಟ. ಭಿಕ್ಷುಕನು ಜೋರಾಗಿ ನಗುತ್ತಿದ್ದುದನ್ನಾಗಲೀ, ತನ್ನ ಹರಕು ಬಟ್ಟೆಗಳ ಕೆಳಗಿದ್ದ ಒಂದು ಸೀಸೆಯನ್ನು ಎತ್ತಿ ಅದರಲ್ಲಿದ್ದ ದ್ರವವನ್ನು ತನ್ನ ಬಾಯೊಳಗೆ ಸುರಿದುಕೊಂಡದ್ದನ್ನಾಗಲೀ ಹರಿ ನೋಡಲಿಲ್ಲ. ಒಬ್ಬ ಭಿಕ್ಷುಕನಾಗಲು, ಕಳ್ಳನಾಗಲು ಇಲ್ಲವೆ ಕೊಲೆಗಡುಕನಾಗಲು ತಾನು ನಗರಕ್ಕೆ ಬಂದಿರಲಿಲ್ಲ. ಮನೆಯಿಂದ ಓಡಿಬಂದು, ಭವಿಷ್ಯವು ತನಗಾಗಿ ಏನನ್ನು ಕಾದಿರಿಸಿದೆ ಎಂಬುದನ್ನು ತಿಳಿಯುವುದು ಬಿಟ್ಟು, ನಿಜವಾಗಿ ಏತಕ್ಕಾಗಿ ತಾನು ಇಲ್ಲಿಗೆ ಬಂದಿದ್ದೇನೆ ಎಂಬುದು ಅವನಿಗೆ ಗೊತ್ತಿರಲಿಲ್ಲ.

ಅಂತೂ ತಾನೀಗ ಮುಂಬೈನಲ್ಲಿದ್ದೇನೆ. ತನ್ನ ಈ ಪ್ರಶ್ನೆಗೆ ಉತ್ತರ ಕಂಡುಕೊಳ್ಳಬೇಕು.

ಕತ್ತಲೆಯ ಪ್ರತಿ ಸ್ಥಳದಲ್ಲೂ ಕಣ್ಮರೆಸಿ ಕುಳಿತಿರುವ ಅಪಾಯಕಾರಿ ವ್ಯಕ್ತಿಗಳನ್ನೊಳಗೊಂಡ ಈ ಬೃಹತ್ ಚೌಕದ ಬಗ್ಗೆ ಅವನಿಗೆ ಭೀತಿ ಪ್ರಾರಂಭವಾಯಿತು. ಆ ಖಾಲಿ ಪೀಠವೂ ಅವನಿಗೆ ಅನಿಷ್ಟಕಾರಕವಾಗಿ ಕಂಡಿತು. ಚಕ್ರವರ್ತಿಯ ಪ್ರತಿಮೆಯ ಗೈರು ಹಾಜರಿಯು, ಹರಿಗೆ



ಒಂದು ರೀತಿಯ ಸಂದೇಶ ನೀಡುವಂತೆ ತೋರಿತು. ಅವನ ಭೀತಿಯೇ ಅವನಿಗೆ ಒಂದು ರೀತಿಯ ಧೈರ್ಯ ನೀಡಿ ಪಕ್ಕದ ಮಾರ್ಗವೊಂದರಲ್ಲಿ ಬೇಗ ಹೋಗುವಂತೆ ಮಾಡಿತು. ತಾಳೆ ಮರಗಳ ಸಾಲುಳ್ಳ ಉದ್ದನೆಯ ಮತ್ತು ದೊಡ್ಡದಾದ ಪಾರ್ಕೊಂದನ್ನು ಅವನು ನೋಡಿದ. ವಿಶ್ರಾಂತಿಗಾಗಿ ಆ ಮರಗಳ ನೆರಳಿನಲ್ಲಿ ಕುಳಿತು ಫುಟ್‌ಬಾಲ್ ಮತ್ತು ಕ್ರಿಕೆಟ್ ಆಟವನ್ನು ನೋಡುವುದೆಂದು ಅವನು ಯೋಚಿಸಿದ. ಆದರೆ ಅವನು ಪಾರ್ಕಿನ ಸಮೀಪ ಬಂದಾಗ ತನ್ನ ಮುಂದೆ ರಸ್ತೆಯ ತುದಿಯಲ್ಲಿ ಉಜ್ವಲವಾಗಿ ಮಿನುಗುತ್ತಿದ್ದ ಬೆಳಕು ಕಂಡಿತು. ಅದು ಸಮುದ್ರದಿಂದ ಬರುತ್ತಿದ್ದ ಬೆಳಕೆಂಬುದು ಅವನಿಗೆ ತಕ್ಷಣ ಗೊತ್ತಾಯಿತು. ಅವನು ಸಮುದ್ರದ ಮತ್ತು ಮೀನಿನ ಬಲವಾದ ವಾಸನೆಯನ್ನು ಆಘ್ರಾಣಿಸಿದ.

ಕೂಡಲೇ ಅವನಿಗೆ ಮನೆಯ ನೆನಪು ಬಂದಿತು. ತನಗೆ ಪರಿಚಿತವಾದಂತಹ ಏನನ್ನಾದರೂ ನೋಡಬೇಕೆಂಬ ಹಂಬಲ ಉಂಟಾಯಿತು. ಹರಿ ಪಾರ್ಕನ್ನು ಮರೆತು ತ್ವರಿತ ವಾಗಿ ಮುಂದೆ ಸಾಗಿದ. ಅವನು ಸಮುದ್ರದ ಬಳಿ ಬಂದಾಗ, ಕೊಲ್ಲಿಯ ಸುತ್ತ ಬಾಗಿದ್ದ ಮಾರ್ಗವು ರಭಸದಿಂದ ಎರಗಿದಂತೆ ಕಾಣುತಿತ್ತು. ಅದು, ಹರಿ ಹಿಂದೆಂದೂ ನೋಡದಿದ್ದಂತಹ ಅತ್ಯದ್ಭುತ ದೃಶ್ಯವಾಗಿತ್ತು. ಆ ಮಾರ್ಗದ ಮತ್ತೊಂದು ಕಡೆ ಮೆರಗು ಕೊಟ್ಟ ಲೋಹದಂತೆ ಫಳಫಳನೆ ಹೊಳೆಯುತ್ತಿದ್ದ, ಶಾಂತವಾಗಿದ್ದ ಸಮುದ್ರವನ್ನು ತದೇಕ ಚಿತ್ತದಿಂದ ನೋಡಲಾರಂಭಿಸಿದ. ಅಲ್ಲಿ ದೋಣಿಗಳಾಗಲೀ, ಮೀನುಗಾರರಾಗಲೀ ಇರಲಿಲ್ಲ. ಆದರೆ ಆ ಮಾರ್ಗದಲ್ಲೂ ಸಮುದ್ರದ ತೀರದುದ್ದಕ್ಕೂ ವಾಹನಗಳು ಭಾರಿ ಸದ್ದಿನೊಡನೆ ಸತತವಾಗಿ ಸಂಚರಿಸುತ್ತಿದ್ದವು.

ಹರಿ ಸಮುದ್ರ ಮತ್ತು ಕಟ್ಟಡಗಳ ನಡುವೆ ನಡೆದು, ಜನ ಸಮೂಹ ಮತ್ತು ಅಂಗಡಿಗಳಿಂದ ತುಂಬಿದ ಚಿಕ್ಕ ಮರಳು ದಂಡೆಯನ್ನು ತಲುಪಿದ. ಬಣ್ಣ ಬಣ್ಣದ ಪಾನೀಯಗಳು, ಎಳನೀರು ಮತ್ತು ತಿನಿಸುಗಳನ್ನು ಆ ಅಂಗಡಿಗಳಲ್ಲಿ ಮಾರಾಟ ಮಾಡಲಾಗುತ್ತಿತ್ತು. ಆ ಪ್ರದೇಶವನ್ನು ಸಮುದ್ರದ ದಂಡೆ ಅನ್ನುವುದಕ್ಕಿಂತ ದೊಡ್ಡ ಸಂತೆಯ ಮೈದಾನ ಅನ್ನಬಹುದಾಗಿತ್ತು. ಇದೀಗ ಸಂತೆಯೊಂದು ಪ್ರಾರಂಭವಾಗಿದೆಯೇನೊ ಎಂದು ಭಾಸವಾಗುತ್ತಿತ್ತು. ರಸ್ತೆ ಬದಿಯ ಅಂಗಡಿಗಳು, ಉದ್ದನೆಯ ಬೊಂಬುಗಳಿಗೆ ಸಿಕ್ಕಿಸಿದ ಬಲೂನ್‌ಗಳು, ಹೂಮಾಲೆಗಳು, ಪ್ಲಾಸ್ಟಿಕ್‌ನ ಆಟಿಕೆಗಳು ಮತ್ತು ನಿಯತಕಾಲಿಕ ಪತ್ರಿಕೆಗಳನ್ನು ಮಾರುತ್ತಿದ್ದವು. ಮಕ್ಕಳು ಉಲ್ಲಾಸ-ಸಂಭ್ರಮದೊಡನೆ, ಸಮುದ್ರದತ್ತ ಮರಳಿನ ಮೇಲೆ ಓಡುತ್ತಿದ್ದರು. ಅಂಗಡಿಗಳ ಸುತ್ತ ಜನ ಗುಂಪುಗುಂಪಾಗಿ ಸೇರಿದ್ದರು. ಹರಿ, ತನ್ನ ಮನೆಯಲ್ಲಿ ಹಿಂದೆಂದೂ ನೋಡದಿದ್ದಂತಹ, ವಿಚಿತ್ರವಾದ ಆಹಾರ ಪದಾರ್ಥಗಳನ್ನು ಅವರು ತಿನ್ನುತ್ತಿದ್ದರು. ಅವನು ಒಂದೆಡೆ ನಿಂತು ತದೇಕಚಿತ್ತದಿಂದ ಇದನ್ನೆಲ್ಲಾ ನೋಡುತ್ತಿದ್ದಾಗ, ಒಂದು ಕಾರು ಅವನ ಹಿಂದೆಯೇ ಬಂದು ನಿಂತಿತು. ಶ್ರೀಮಂತ ಕುಟುಂಬವೊಂದರ ಜನ ಹರ್ಷದಿಂದ ಕೂಗಾಡುತ್ತಾ, ಅದರೊಳಗಿನಿಂದ ಥಟ್ಟನೆ ಹೊರಬಂದರು. ಮಕ್ಕಳು ಹೊಳಪಿನ ಉಡುಪುಗಳನ್ನು ಧರಿಸಿದ್ದರು, ಸ್ತ್ರೀಯರು ಸೊಗಸಾದ ಸೀರೆಗಳನ್ನು ಉಟ್ಟಿದ್ದರು. ಪುರುಷರು ನಗುತ್ತಾ ತಿಂಡಿಪದಾರ್ಥಗಳು ಮತ್ತು ಆಟಿಕೆಗಳನ್ನು ಕೊಳ್ಳಲು, ಆ ಹೆಂಗಸರು, ಮಕ್ಕಳನ್ನು ಅಂಗಡಿಗಳತ್ತ ಕರೆದೊಯ್ದರು. ಅವರುಗಳನ್ನು ನೋಡಿದಾಗ ಹರಿಗೆ, ತನಗೆ ಕೆಲಸ ಕೊಡುವುದಾಗಿ ಹೇಳಿದ್ದ ಡಿಸಿಲ್ವಾ ಅವರ ವಿಳಾಸವಿದ್ದ ಒಂದು ಚೀಟಿ ತನ್ನ ಜೇಬಿನಲ್ಲಿರುವುದು ನೆನಪಿಗೆ ಬಂದಿತು. ಮುಂಬೈ ನಗರದಲ್ಲಿನ ಒಂದು ವಿಳಾಸ ಹಾಗೂ ತನಗೆ ತಿಳಿದ ಜನ

ಅಲ್ಲಿರುವುದು ನೆನಪಿಗೆ ಬಂದಾಗ ಹರಿಗೆ ತುಂಬ ನೆಮ್ಮದಿಯೆನಿಸಿತು. ಬಹುಶಃ ಆ ಜನರು ಸಮುದ್ರದ ಹಿತವಾದ ಮತ್ತು ಉಲ್ಲಾಸದಾಯಕವಾದ ಅಲೆಯಂತೆ ತನಗೆ ಸಹಾಯ ಮಾಡ-ಬಹುದು ಎಂಬ ಭಾವನೆ ಅವನಿಗುಂಟಾಯಿತು.

ಸಮೀಪದಲ್ಲೇ ಇದ್ದ ಅಂಗಡಿಯವನ ಬಳಿಗೆ ಹರಿ ಬಂದ. ಆ ಅಂಗಡಿಯವನು ತನ್ನ ಸುತ್ತ ಮುತ್ತಿಕೊಂಡಿದ್ದ ಮಕ್ಕಳಿಗೆ ವಿವಿಧ ಬಣ್ಣಗಳ ಮತ್ತು ಗುಲಾಬಿ, ಬಾಳೆ, ಕಿತ್ತಳೆ, ನಿಂಬೆ ಮೊದಲಾದವುಗಳ ಸುವಾಸನೆಯ ದ್ರವವನ್ನು ಮಂಜುಗಡ್ಡೆಯ ಉಂಡೆಗಳಿಗೆ ಬೆರೆಸಿ ಕೊಡುತ್ತಿದ್ದ. ಕಾಗದದಲ್ಲಿನ ವಿಳಾಸ ಗೊತ್ತೇ? ಎಂದು ಹರಿ ಅವನನ್ನು ಕೇಳಿದ.

''ಓಹೋ!'' ತನ್ನ ಚಿಕ್ಕ ಬಿಳಿಯ ಟೋಪಿಯಡಿಯಲ್ಲಿದ್ದ ಕಣ್ಣುಗಳನ್ನು ತಿರುಗಿಸುತ್ತಾ, ''ಹುಡುಗ, ನಿನ್ನ ಬಳಿ ಇರುವ ವಿಳಾಸ ಭರ್ಜರಿಯಾದದ್ದು. ನೀನೆಲ್ಲೋ ಛದ್ಮವೇಷ-ಧಾರಿಯಾದ ರಾಜಕುಮಾರನಿರಬೇಕು'' ಎಂದು ಹೇಳುತ್ತಾ, ಉಜ್ವಲ ಹಸಿರು ಬಣ್ಣದ ಮಂಜಿನ ಒಂದು ಉಂಡೆಯನ್ನು ಸಮೀಪವಿದ್ದ ಮಗುವಿನ ಮುಂದೆ ಹಿಡಿದು, ಆ ಮಗು ಕೊಟ್ಟ ಚಿಲ್ಲರೆ ಹಣವನ್ನು ಜೇಬಿಗೆ ಹಾಕಿಕೊಂಡು ಹರಿಗೆ ತಿಳಿಸಿದ, ''ಆ ರಸ್ತೆಯಲ್ಲಿ ನೇರವಾಗಿ ಹೋಗು, ಅದು ಮಲಬಾರ್‌ಹಿಲ್‌ನ ಮೇಲಕ್ಕೊಯ್ಯುತ್ತದೆ. ಅಲ್ಲಿ ನಿನ್ನ ಈ ಅರಮನೆಯಿದೆ. ಅದು ಹ್ಯಾಂಗಿಂಗ್ ಗಾರ್ಡನ್ಸ್‌ಗೆ ಸಮೀಪ. ಬಹುಶಃ ಅಲ್ಲಿ ರಾಜಕುಮಾರಿಯೊಬ್ಬಳು ಹೂಮಾಲೆಯೊಡನೆ ನಿನ್ನನ್ನು ಎದುರು ನೋಡುತ್ತಿರಬಹುದು'' ಎಂದು ಗಹಗಹಿಸುತ್ತ ಕಣ್ಮಿಟುಕಿಸಿದ.

ಹರಿಗೆ ಅವನ ನಗುವಾಗಲೀ, ಕುಚೋದ್ಯವಾಗಲೀ ಇಷ್ಟವಾಗಲಿಲ್ಲ. ಅವನು ಆದಷ್ಟು ಗಾಂಭೀರ್ಯದಿಂದಲೇ ನಡೆದು ಹೋದ. ಅವನ ಮುಖ, ಎಂದಿನಂತೆ, ಗಂಭೀರವಾಗಿಯೇ ಇತ್ತು. ಆವನ ಮನಸ್ಸು ಮಾತ್ರ ಉಲ್ಲಾಸದಿಂದ ಮುದಗೊಂಡಿತ್ತು.

ಆ ಮನುಷ್ಯ ತಿಳಿಸಿದಂತೆ ರಸ್ತೆ ಬೆಟ್ಟದ ಮೇಲೇರಿ ಹೋಗುತ್ತಿತ್ತು. ರಸ್ತೆಯ ಇಕ್ಕೆಲಗಳಲ್ಲೂ ದೊಡ್ಡ ಸೌಧಗಳಿದ್ದವು. ಅದರಾಚೆ ಮರಗಳು ಮತ್ತು ಪಾರ್ಕೊಂದರ ಮಾಳಿಗೆಗಳ ಉಪವನಗಳಿದ್ದವು. ನಗರ ಅವನು ಊಹಿಸಲೂ ಆಗದಷ್ಟು ದೊಡ್ಡದೂ, ವೈಭವಯುತವೂ ಆಗಿತ್ತು. ತನ್ನನ್ನು ಅರಿತ ಜನರಿರುವ ಮನೆಯೊಂದು ಅಲ್ಲಿದೆಯೆಂದು ನಂಬುವುದೇ ಅವನಿಗೆ ಕಷ್ಟವಾಗಿತ್ತು.

* * *

ಆದರೆ ಅವನ ಆಸೆ ಬಹುಕಾಲ ಉಳಿಯಲಿಲ್ಲ. ಸಂಜೆಯಾಗಿತ್ತು. ಗುಲಾಬಿ ಬಣ್ಣದ ಸೂರ್ಯ ಕೊಲ್ಲಿಯಲ್ಲಿ ಕೆಳಗಿಳಿಯುತ್ತಿದ್ದ. ಸಮುದ್ರದ ಒಂದು ದ್ವೀಪದ ಮೇಲೆ ಕಟ್ಟಿದ್ದ ಮುಂಬೈ ನಗರದ ಮೇಲೆ ಕತ್ತಲೆ ಆವರಿಸುತ್ತಿತ್ತು. ಹರಿ, ಬೆಟ್ಟವನ್ನು ಏರುತ್ತಿದ್ದಂತೆ ವಿದ್ಯುದ್ದೀಪಗಳು ಬೆಳಗಿದವು. ಆಕಾಶದ ಹಿನ್ನೆಲೆಯಲ್ಲಿ, ನಕ್ಷತ್ರಗಳ ಬೆಳಕನ್ನು ಮೀರಿ, ಇಡೀ ಬೆಟ್ಟವೇ ಆಭರಣಗಳ ದೊಡ್ಡ ಗುಡ್ಡದಂತೆ ಪ್ರಕಾಶಮಾನವಾಯಿತು. ಅವನು ಹಿಂದಿರುಗಿ ಕೆಳಗೆ ನೋಡಿದ. ಬೆಟ್ಟದಿಂದ ಕೆಳಗಿಳಿದು ಕೊಲ್ಲಿಯ ಸುತ್ತ ಹೋಗಿದ್ದ ಮಾರ್ಗದ ಇಕ್ಕೆಲಗಳಲ್ಲೂ ದೀಪಗಳು ಬೆಳಗುತ್ತಿದ್ದವು. ಇದು ತಾನು ಹಿಂದೆ ಕೇಳಿದ್ದಂತಹ ಪ್ರಖ್ಯಾತ ''ಸಾಮ್ರಾಜ್ಞಿಯ ಹಾರವೇ?'' ಇರಬೇಕೆಂದು ಹರಿ ಭಾವಿಸಿದ. ಎವೆಯಿಕ್ಕದೆ ಅವನು ನೋಡುತ್ತಿದ್ದಾಗ, ಅವನ ತಲೆಯ ಮೇಲಿದ್ದ ನಿಯೊನ್ ಜಾಹಿರಾತುಗಳು, ಹಸಿರು, ನೀಲಿ

ಮತ್ತು ಕಿತ್ತಳೆ ಬಣ್ಣಗಳಲ್ಲಿ ಹತ್ತಿ ಆರುತ್ತಿದ್ದವು. ಉದ್ವೇಗ ಮತ್ತು ಭಯದಿಂದ ಅವನ ಎದೆ ಕಂಪಿಸುತ್ತಿತ್ತು.

ತಾನು ಹುಡುಕುತ್ತಿದ್ದ ಮನೆ ಸಿಕ್ಕಿದಾಗ ಆಗಲೇ ರಾತ್ರಿಯಾಗಿತ್ತು. ಆದರೆ ಕತ್ತಲಿರಲಿಲ್ಲ. ರಸ್ತೆಯುದ್ದಕ್ಕೂ ಇದ್ದ ದೀಪಗಳಿಂದಾಗಿ, ಪ್ರತಿ ಕಟ್ಟಡದ ಕಿಟಿಕಿಗಳಿಂದ ಹೊರಬರುತ್ತಿದ್ದ ನೂರಾರು ದೀಪಗಳ ಬೆಳಕಿನಂತೆಯೇ ಇತ್ತು. ತನ್ನ ಜೀವಮಾನದಲ್ಲೆಲ್ಲಾ ಅವನು ಅಷ್ಟೊಂದು ದೀಪಗಳನ್ನು ನೋಡಿರಲಿಲ್ಲ. 'ಸೀಬರ್ಡ್' ಎಂಬ ಹೆಸರಿನ ಎತ್ತರವಾದ ಬಿಳಿಯ ಕಟ್ಟಡದ ಪ್ರವೇಶ ದ್ವಾರದಲ್ಲಿ ಹೋಗುತ್ತಿದ್ದಾಗ, ಎಲ್ಲೆಲ್ಲೂ ಕತ್ತಲಿದ್ದು, ತಾನು ಅಡಗಿಕೊಂಡು ಯಾರಿಗೂ ಕಾಣದಂತಾಗಬಾರದೇ ಎಂದು ಹರಿಗೆ ಅನಿಸಿತ್ತು.

ಆ ಕಟ್ಟಡದಲ್ಲಿ ತನಗೆ ತಿಳಿದ ಕುಟುಂಬವು ಮಾತ್ರ ವಾಸಿಸುತ್ತಿದೆ ಎಂದು ಹರಿ ಭಾವಿಸಿದ್ದ. ಆದರೆ ಬಸ್ ನಿಲ್ದಾಣದಲ್ಲಿ, ಇಲ್ಲವೆ ಬಂದರು ಕಟ್ಟೆಯಲ್ಲಿರುವಂತೆ, ಆ ಕಟ್ಟಡ ಅಪರಿಚಿತ ಜನರಿಂದ ತುಂಬಿತ್ತು. ಒಳ ಬಾಗಿಲಿನಲ್ಲಿ ಒಬ್ಬ ನಿಂತಿದ್ದ. ಅವನು ಜನರನ್ನು ಒಳಗೆ ಕರೆದುಕೊಳ್ಳುತ್ತಿದ್ದ ಮತ್ತು ಬಾಗಿಲನ್ನು ಮುಚ್ಚುತ್ತಿದ್ದ. ಕೂಡಲೇ ಅವರು ಕಣ್ಮರೆಯಾಗುತ್ತಿದ್ದರು. ನಂತರ ಹಠಾತ್ತನೆ ಬಾಗಿಲು ತೆರೆದುಕೊಳ್ಳುತ್ತಿತ್ತು. ಸಂಪೂರ್ಣವಾಗಿ ಬೇರೆ ಜನರ ತಂಡವು ಹೊರಗೆ ಬರುತ್ತಿತ್ತು. ಅದೇನೆಂಬುದು ಹರಿಗೆ ಸ್ವಲ್ಪವೂ ಅರ್ಥವಾಗಲಿಲ್ಲ. ಆದರೂ, ತನಗೆ ತಿಳಿದ ಕುಟುಂಬ ಅಲ್ಲಿ ವಾಸಿಸುತ್ತಿದೆಯೇ ಎಂದು ಹರಿ ಆ ಮನುಷ್ಯನನ್ನು ಕೇಳಿದಾಗ, ''ಒಳಗೆ ಬಾ, ಹತ್ತನೇ ಅಂತಸ್ತು'' ಎಂದು ಅವನು ಹೇಳಿದ. ಇತರ ಹತ್ತು ಹನ್ನೆರಡು ಜನರ ಜೊತೆ ಅವನು ಒಳಗೆ ತಳ್ಳಲ್ಪಟ್ಟ ನಂತರ ಬಾಗಿಲು ಮುಚ್ಚಿಕೊಂಡಿತು. ಗೋಡೆಯಲ್ಲಿದ್ದ ಒಂದು ಗುಂಡಿಯನ್ನು ಆ ಮನುಷ್ಯ ಒತ್ತಿದ. ಕೂಡಲೇ ಆ ಪುಟ್ಟ ಮರದ ಪೆಟ್ಟಿಗೆಯು ಥಟ್ಟನೆ ಮೇಲೇರಿತು. ದಿಗ್ಭ್ರಾಂತನಾದ ಹರಿ ಚೇತರಿಸಿಕೊಳ್ಳುವ ಮುನ್ನವೇ ಅದು ನಿಂತಿತು, ಬಾಗಿಲು ಧಡಾರನೆ ತೆರೆದುಕೊಂಡಿತು. ಆ ಮನುಷ್ಯ ಹರಿಯನ್ನು ಹೊರಗೆ ಹೋಗುವಂತೆ ಕೈಯಾಡಿಸಿ, 'ನೂರ ಎರಡು' ಅಂದ. ಬಾಗಿಲು ಮುಚ್ಚಿಕೊಂಡು ಕಣ್ಮರೆಯಾಯಿತು.

ಹರಿ, ಈಗ ಕಟ್ಟಡದ ಮಧ್ಯಭಾಗದಲ್ಲಿದ್ದ. ಅವನು ಕತ್ತು ತಿರುಗಿಸಿದ. ಆದರೆ ಯಾರೂ ಇರಲಿಲ್ಲ. ಮುಚ್ಚಿದ ಬಾಗಿಲು ಮಾತ್ರ ಕಾಣಸಿತು. ಮನೆಯ ಸಂಖ್ಯೆಗಳನ್ನು ನೋಡಲು ಬಾಗಿಲುಗಳ ಸಮೀಪ ಹೋದ. ಅಂತಿಮವಾಗಿ '102' ಎಂದು ಕಂಚಿನ ಅಕ್ಷರಗಳಲ್ಲಿ ಬರೆದಿದ್ದ ಬಾಗಿಲನ್ನು ಕಂಡ. ಅಲ್ಲಿ ಸ್ವಲ್ಪ ಸಮಯದ ನಂತರ ಬಿಳಿ ಶರಾಯಿ ಮತ್ತು ಕುತ್ತಿಗೆ ಪಟ್ಟಿಯುಳ್ಳ, ಬಿಳಿ ಕೋಟು ಧರಿಸಿದ್ದ ಉದ್ದನೆಯ ಮನುಷ್ಯ ಬಾಗಿಲು ತೆರೆದು, ''ಏ, ಹೆಡ್ಡ, ಏಕೆ ಬಾಗಿಲು ಬಡಿಯುತ್ತಿದ್ದೀ, ಅಲ್ಲಿ ಗಂಟೆಯಿರುವುದು ಕಾಣದೇ?'' ಎಂದು ರೇಗಿದ.

ಬಾಗಿಲ ಮೇಲಿನ ಹಾಸು ಮರದ ಮೇಲೆ ಗಂಟೆ ನೇತಾಡುತ್ತಿದೆಯೇನೋ, ಎಂದು ಹರಿ ತಲೆಯೆತ್ತಿ ನೋಡಿದ. ಆದರೆ ಅಲ್ಲೇನೂ ಇರಲಿಲ್ಲ. ಮೆತ್ತಗೆ ''ಇಲ್ಲ'' ಎಂದು ಹೇಳಿ, ''ಗಂಟೆಯೆಲ್ಲಿ?'' ಎಂದು ಕೇಳಿದ.

''ಇಲ್ಲಿ ನೋಡು, ಕತ್ತೆ'' ಅವನು ಕೋಪದಿಂದ ಹೇಳಿ, ಬಾಗಿಲ ಚೌಕಟ್ಟಿನ ಪಕ್ಕದಲ್ಲಿದ್ದ ಬಿಳಿಯ ಗುಂಡಿಯೊಂದನ್ನು ತನ್ನ ಬೆರಳಿನಿಂದ ಒತ್ತಿದ. ಕೂಡಲೇ ಕೀರಲು ಧ್ವನಿಯಲ್ಲಿ ದೊಡ್ಡ ಸದ್ದಾಯಿತು- ''ನೀನ್ಯಾರು ಮತ್ತು ನಿನಗೇನು ಬೇಕು?''

''ನಾನು ಸಾಹೇಬರನ್ನು ನೋಡಬೇಕು'' ಹರಿ ಮೆತ್ತಗೆ ಹೇಳಿದ. ಆ ಮನುಷ್ಯನ ಹಿಂದೆ, ಚೆನ್ನಾಗಿ ಬೆಳಗುತ್ತಿದ್ದ ಕೊಠಡಿಯನ್ನು ದಿಟ್ಟಿಸಿ ನೋಡಿದ. ನೆಲದ ಮೇಲೆ ರತ್ನಗಂಬಳಿ ಹಾಸಲಾಗಿತ್ತು. ದೊಡ್ಡ ಪೀಠೋಪಕರಣಗಳಿದ್ದವು. ಸೊಗಸಾದ ಚಿತ್ರಗಳನ್ನು ಗೋಡೆಗಳಿಗೆ ನೇತುಹಾಕಲಾಗಿತ್ತು. ದೊಡ್ಡ ಕನ್ನಡಿಗಳಿದ್ದವು, ಹೂದಾನಿಗಳಿದ್ದವು. ಕೊಳೆಯಾದ ತನ್ನ ಕಾಲುಗಳು ಮತ್ತು ದೂಳಿನಿಂದ ತುಂಬಿದ ಪಾದರಕ್ಷೆಗಳ ಬಗ್ಗೆ ಅವನಿಗೆ ಕಸಿವಿಸಿಯಾಯಿತು. ಅಂತಹ ಸುವ್ಯವಸ್ಥಿತ ಕೊಠಡಿಯೊಳಗೆ ತಾನು ಕಾಲಿಡುವುದಾದರೂ ಎಂತು, ಎಂದು ಹರಿ ಚಿಂತಿಸಿದ.

ಆದರೆ ಅವನನ್ನು ಒಳಗೆ ಸೇರಿಸುವ ಯೋಚನೆ ಬಾಗಿಲ ಬಳಿ ಇದ್ದ ಮನುಷ್ಯನಿಗೇನೂ ಇರಲಿಲ್ಲ.

''ಏನು, ಸಾಹೇಬರೇ? ಅವರನ್ನು ಭೇಟಿಯಾಗಲು ಯಾರು ನಿನ್ನನ್ನು ಕಳಿಸಿದರು? ನಿನ್ನಲ್ಲಿ ಪತ್ರವಿದೆಯಾ?''

ಹರಿ ತನ್ನ ಜೇಬಿನಿಂದ ಕಾಗದದ ಚೂರನ್ನು ತೆಗೆದ.''ಇಗೋ ಇಲ್ಲಿ ಅವರ ಹೆಸರು ಮತ್ತು ವಿಳಾಸವಿದೆ.''

''ಇದನ್ನು ನಿನಗಾರು ಕೊಟ್ಟರು?''

''ಅವರೇ ನನಗೆ ಕೊಟ್ಟರು.''

''ಸುಳ್ಳು ಬೊಗಳಬೇಡ.''

''ಇದು ನಿಜ. ಅವರು ಥುಲ್‌ಗೆ ಬಂದಿದ್ದಾಗ ನಾನು ಅವರ ಕಾರನ್ನು ತೊಳೆದು ಸ್ವಚ್ಛ-ಪಡಿಸುತ್ತಿದ್ದೆ. ನಾನು ಮುಂಬೈಗೆ ಬಂದಾಗ, ತಮ್ಮನ್ನು ಕಾಣುವಂತೆ ಅವರು ಹೇಳಿದ್ದರು.''

''ಥುಲ್?'' ಅವನು ಹುಬ್ಬು ಗಂಟಿಕ್ಕಿದ. ಆ ಹೆಸರು ಪರಿಚಿತವಾಗಿರುವುದು ಅವನ ಮನಸ್ಸಿಗೆ ಬಂದಿತು. ಹರಿ ಆಶ್ಚರ್ಯದಿಂದ ಅವನ ಮುಖ ನೋಡಿದ. ಆದರೆ ಅವನು ಆಡಿದ ಮಾತು ಅವನಿಗೆ ಮತ್ತೊಂದು ಪೆಟ್ಟಾಗಿತ್ತು.

''ಸಾಹೇಬರು ಇಲ್ಲಿಲ್ಲ. ನೀನು ಎಲ್ಲಿಂದ ಬಂದಿದ್ದೀಯೋ ಆ ಥುಲ್‌ಗೇ ಅವರು ಹೋಗಿದ್ದಾರೆ. ಇಂದು ಬೆಳಿಗ್ಗೆ ಹೊರಟರು. ತಮ್ಮ ಬೇಸಿಗೆ ವಿರಾಮಕ್ಕಾಗಿ ಅವರೆಲ್ಲಾ ಹೋಗಿದ್ದಾರೆ. ಅವರು ವಾಪಸ್ ಬಂದ ನಂತರ ಸಾಹೇಬರು ವಿದೇಶಕ್ಕೆ ಹೋಗುತ್ತಾರೆ. ಅವರು ದೊಡ್ಡ ವಾಣಿಜ್ಯೋದ್ಯಮಿ, ನಿನಗೆ ಗೊತ್ತಿಲ್ಲವಾ? ಅವರಿಗೆ ಇಂಗ್ಲೆಂಡ್‌ನಲ್ಲಿ, ಅಮೆರಿಕಾದಲ್ಲಿ ವಾಣಿಜ್ಯ ವಹಿವಾಟಿದೆ. ಇನ್ನೊಂದು ತಿಂಗಳು ಅವರು ವಾಪಸ್ ಬರುವುದಿಲ್ಲ. ನೀನು ಥುಲ್‌ನಿಂದ ಬಂದಿದ್ದೀ ಅಲ್ಲವೇ? ಅಡಿಗೆಯವ ಮತ್ತು ಆಯಾ ಆ ಸ್ಥಳದ ಬಗ್ಗೆ ಹೇಳಿದರು. ಅದೊಂದು ಜಂಗ್ಲಿ ಪ್ರದೇಶವಂತೆ. ಇರಲಿ, ಇಲ್ಲಿ ನೀನೇನು ಮಾಡುತ್ತಿದ್ದೀ?''

''ನಾನು ಕೆಲಸ ಹುಡುಕುತ್ತಿದ್ದೇನೆ'' ಹರಿ ಮೆತ್ತಗೆ ಹೇಳಿದ, ''ನಾನು ಇಲ್ಲೇ ಇರಲು ಇಷ್ಟಪಡುತ್ತೇನೆ.''

ಹರಿಯ ಮಾತು ಆ ಮನುಷ್ಯನನ್ನು ರೇಗಿಸಿತಲ್ಲದೆ, ಸ್ವಲ್ಪ ದಿಗಿಲನ್ನೂ ಉಂಟು ಮಾಡಿತು. ''ಹೋಗು, ಹೊರಟು ಹೋಗು'' ಅವನು ಜೋರಾಗಿ ಹೇಳಿದ, ''ಇಲ್ಲಿ ನಿನಗಾಗಿ ಯಾವ ಕೆಲಸವೂ ಇಲ್ಲ. ಸಾಹೇಬರಲ್ಲಿ ಈಗಾಗಲೇ ಬೇಕಾದಷ್ಟು ಸೇವಕರಿದ್ದಾರೆ. ಅವರಿಗೆ ಈಗ ಇನ್ನೊಬ್ಬನ ಅಗತ್ಯವಿಲ್ಲ. ಅದರಲ್ಲೂ ಥುಲ್‌ನಿಂದ ಬಂದ ಹುಡುಗನಂತೂ ಖಂಡಿತ

ಬೇಡ. ಹೂಂ, ಹೊರಡು, ಇಲ್ಲಿ ಯಾವ ಕೆಲಸವೂ ಇಲ್ಲ. ಇಲ್ಲಿ ನಿನಗೆ ತಂಗಲು ಸ್ಥಳವೂ ಇಲ್ಲ'' ಅವನು ಒರಟಾಗಿ ಪದೇ ಪದೇ ಹೇಳಿ, ಹಿಂದು ಹಿಂದಕ್ಕೆ ಹೆಜ್ಜೆ ಹಾಕಿ ಬಾಗಿಲನ್ನು ಗಟ್ಟಿಯಾಗಿ ಮುಚ್ಚಿದ.

ಹರಿ, ಮತ್ತೇನೂ ಮಾಡುವಂತಿರಲಿಲ್ಲ. ಗುಂಡಿಯನ್ನೊತ್ತಿ ಜೋರಾಗಿ ಗಂಟೆಯ ಶಬ್ದ ಮಾಡಲು, ಇಲ್ಲವೆ ಬಾಗಿಲನ್ನು ಮತ್ತೆ ಬಡಿಯಲು ಅವನಿಗೆ ಧೈರ್ಯವಿರಲಿಲ್ಲ. ನಿರ್ಭಾಗ್ಯ-ನಂತೆ ಅವನು ದುರುಗುಟ್ಟಿಕೊಂಡು ಬಾಗಿಲನ್ನೇ ನೋಡುತ್ತಾ ನಿಂತ. ಮುಂದೇನು ಮಾಡುವುದು? ರಾತ್ರಿಯನ್ನು ಎಲ್ಲಿ ಕಳೆಯುವುದು? ಅದೇ ಸಮಯಕ್ಕೆ ಚಲಿಸುವ ಸಣ್ಣ ಪೆಟ್ಟಿಗೆ ಅಲ್ಲಿಗೆ ಬಂತು, ಥಟ್ಟನೆ ಬಾಗಿಲು ತೆರೆದುಕೊಂಡಿತು. ಅದರೊಳಗಿದ್ದ ಮನುಷ್ಯ ಕೂಗಿದ, ''ಕೆಳಗೆ ಬರುತ್ತೀರಾ? ಯಾರಾದರೂ ಕೆಳಗೆ ಬರುತ್ತೀರೇನು?''ಹರಿ, ಹಿಂದಿರುಗಿ ಆ ಪೆಟ್ಟಿಗೆಯೊಳಗೆ ಹೋದ. ಅದು ಅತ್ಯಂತ ವೇಗವಾಗಿ ಕೆಳಗಿಳಿದು, ಜನರಿಂದ ತುಂಬಿದ್ದ ಪ್ರಕಾಶಮಾನವಾಗಿದ್ದ ಹಜಾರಕ್ಕೆ ಅವನನ್ನು ಕರೆತಂದಿತು.

ಹರಿ, ಪುನಃ ಅಲ್ಲೇ ನಿಂತ. ಮುಂದೆಲ್ಲಿ ಹೋಗುವುದು? ಈ ಭಯಾನಕ, ಮೈತ್ರಿರಹಿತ ಸ್ಥಳಕ್ಕೆ ಯಾಕಾದರೂ ಬಂದೆನೋ ಅನಿಸಿತು. ಆಗ, ಬಾಗಿಲ ಬಳಿ ಎತ್ತರದ ಸ್ಟೂಲ್ ಮೇಲೆ ಕುಳಿತಿದ್ದ ವ್ಯಕ್ತಿ ಹರಿಯನ್ನು ಕರೆದ, ''ನಿನಗೇನು ಬೇಕು? ಯಾರನ್ನು ನೋಡಲು ಬಂದಿದ್ದೆ?''

''ಅವರು ಅಲ್ಲಿಲ್ಲ'' ಹರಿ ತಲೆಯಾಡಿಸುತ್ತಾ ಹೇಳಿದ, ''ಅವರು ಹೊರಟು ಹೋಗಿದ್ದಾರೆ-102ನೇ ನಂಬರಿನ ಮನೆಯವರು.''

ಆ ಮನುಷ್ಯ ಇವನತ್ತ ಮತ್ತೆ ಗಮನ ನೀಡಲಿಲ್ಲ. ಅಲ್ಲಿಗೆ ಬಂದು ಹೋಗುತ್ತಿದ್ದವರೊ-ಡನೆ ಮಾತನಾಡುತ್ತಿದ್ದ. ಮಹಡಿಯ ಮೆಟ್ಟಲುಗಳ ಮೇಲೆ ಬೆಣಚುಕಲ್ಲುಗಳಿಂದ ಆಟವಾಡುತ್ತಿದ್ದ ಮಕ್ಕಳನ್ನು ಗದರಿಸಿದ. ಅಲ್ಲಿಗೆ ಬಂದವರು ಆ ಕಲ್ಲುಗಳ ಮೇಲೆ ಕಾಲಿಟ್ಟು ಎಡುವುತ್ತಿದ್ದರು. ಬೇರೆಡೆಗೆ ಹೋಗಿ ಆಟವಾಡುವಂತೆ ಅವನು ಆ ಮಕ್ಕಳಿಗೆ ಕೂಗಿ ಹೇಳುತ್ತಿದ್ದ. ಆದರೆ ಅವನ ಕಣ್ಣುಗಳು ಸ್ನೇಹಪೂರ್ವಕವಾಗಿ ಮಿನುಗುತ್ತಿದ್ದುದನ್ನು ನೋಡಿದ ಹುಡುಗರು ಗಟ್ಟಿಯಾಗಿ ನಕ್ಕುಬಿಡುತ್ತಿದ್ದರು. ತುಂಬ ಹೊತ್ತಾದ ಮೇಲೆ ಹಜಾರವು ಹೆಚ್ಚು ಕಡಿಮೆ ಖಾಲಿಯಾದಾಗ, ಮೂಲೆಯೊಂದರಲ್ಲಿ ಇನ್ನೂ ನಿಂತಿದ್ದ ಹರಿಯನ್ನು ನೋಡಿ, ಅವನು ಅಲ್ಲಿಗೆ ಬಂದ.

''ಏನು, ಹೋಗಲು ನಿನಗೆ ಯಾವ ಸ್ಥಳವೂ ಇಲ್ಲವಾ?''

ಹರಿ ಮಾತನಾಡದೆ ಇಲ್ಲವೆಂಬಂತೆ ತಲೆಯಾಡಿಸಿದ. ಅವನಿಗೆ ತುಂಬ ದಣಿವು, ಹಸಿವು ಮತ್ತು ನಿತ್ರಾಣ ಉಂಟಾಗಿತ್ತು. ಅಲ್ಲಿಂದ ಕದಲಲು ಇಲ್ಲವೆ ಮಾತನಾಡಲು ಸಹ ಅವನಿಗೆ ಹೆದರಿಕೆಯಾಗಿತ್ತು.

''ಓ!'' ಚಿಂತಾಮಗ್ನನಾಗಿ ಹರಿಯನ್ನೇ ನೋಡುತ್ತಾ ಅವನು ಹೇಳಿದ, ''ನೀನೇನು ಮಾಡಬೇಕೆಂಬುದನ್ನು ಹೇಳುತ್ತೇನೆ. '' ಅನಿರೀಕ್ಷಿತವಾದ ಸ್ನೇಹಪರ ಧ್ವನಿಯಿಂದ ಅವನು ಹೇಳಿದ, ''ಇನ್ನೊಂದು ಅರ್ಧಗಂಟೆಯಲ್ಲಿ ರಾತ್ರಿಯ ಪಾಳಿಯ ಕೆಲಸಗಾರ ಬರುತ್ತಾನೆ. ಅವನಿಗೆ ನಾನು ಕೆಲಸ ವಹಿಸಿಕೊಟ್ಟರೆ, ನನ್ನ ಇಂದಿನ ಕೆಲಸ ಮುಗಿದಂತಾಗುತ್ತದೆ. ನಂತರ ನಾನು ವಾಸಿಸುತ್ತಿರುವ ಗೊವಾಲಿಯ ಟ್ಯಾಂಕ್‌ಗೆ ಹೋಗುತ್ತೇನೆ. ನನ್ನ ಸ್ನೇಹಿತನೊಬ್ಬನ ಬಳಿಗೆ ನಿನ್ನನ್ನು ಕರೆದೊಯ್ಯುತ್ತೇನೆ. ಅವನು ನಿನಗೆ ಊಟಕೊಡುತ್ತಾನೆ. ನಿನಗೆ ಹಸಿವಾಗಿದೆ,

ಅಲ್ಲವಾ?''

ಹರಿ, ಅವನನ್ನೇ ಬಿರುಗಣ್ಣಿನಿಂದ ನೋಡುತ್ತಿದ್ದ. ಒಬ್ಬ ವ್ಯಕ್ತಿ ಇಷ್ಟು ಸಹೃದಯಿ ಮತ್ತು ಸಹಾಯಕನಾಗಬಹುದೆಂದು ನಂಬುವುದು ಅವನಿಗೆ ಕಷ್ಟವಾಗಿತ್ತು. ಆ ವ್ಯಕ್ತಿ ಹರಿಯ ಭುಜದ ಮೇಲೆ ಕೈಯಿಟ್ಟು ತಟ್ಟಿ ಹೇಳಿದ, ''ಸ್ವಲ್ಪ ಹೊತ್ತು ತಡಿ.''

ಅವನ ಹೆಸರು ಹೀರಾಲಾಲ್. ಅವನು ಹನ್ನೆರಡು ವರ್ಷಗಳಿಂದ 'ಸೀಬರ್ಡ್'ನಲ್ಲಿ ಕಾವಲುಗಾರನಾಗಿದ್ದಾನೆ. ಅಂದು ರಾತ್ರಿ ಬೆಟ್ಟದಿಂದ ಕೆಳಗಿಳಿದು ಹೋಗುತ್ತಿದ್ದಾಗ ಅವನು ಹರಿಗೆ ತನ್ನ ಈ ವಿಷಯ ತಿಳಿಸಿದ. ಅವರು ರಸ್ತೆಗಳನ್ನು ದಾಟುತ್ತಾ, ವಾಹನ ಸಂಚಾರವನ್ನು ತಟಾಯಿಸಿಕೊಂಡು ಹೋಗುತ್ತಾ, ದೊಡ್ಡ ಅಂಗಡಿಗಳು ಮತ್ತು ರೆಸ್ಟೋರೆಂಟ್‌ಗಳನ್ನು ಹಾದು ಹೋಗುತ್ತಾ, ಬೆಟ್ಟದ ಬುಡಕ್ಕೆ ಬಂದರು. ಅಲ್ಲಿ ಚಿಕ್ಕ ಹೊಲಸು ತುಂಬಿದ ಅಂಗಡಿಯ ಸಾಲುಗಳಿದ್ದವು. ಹೀರಾಲಾಲ್‌ನ ಗೆಳೆಯ ಜಗು, ಅವುಗಳ ಪೈಕಿ ಅಗ್ಗವಾದ ಒಂದು ರೆಸ್ಟೋರೆಂಟ್ ನಡೆಸುತ್ತಿದ್ದ. ಜಗು, ಹರಿಗೆ ಅಗ್ಗವಾದ ಊಟ ಕೊಡುತ್ತಾನೆ ಮತ್ತು ಆ ರಾತ್ರಿ ಮಲಗಲು ಸ್ಥಳ ಕೊಡುತ್ತಾನೆ. ''ನಾನು ಪ್ರತಿ ದಿನ ರಾತ್ರಿ ಇತ್ತ ಕಡೆಯೇ ಬರುತ್ತೇನೆ. ನಾಳೆ ಬಂದು ನಿನ್ನನ್ನು ಕಾಣುತ್ತೇನೆ'' ಎಂದು ಹೀರಾಲಾಲ್, ಹರಿಗೆ ವಿದಾಯ ಹೇಳಿ ಹೊರಟು ಹೋದ.

ಅಲ್ಯೂಮಿನಿಯಂ ತಟ್ಟೆಗಳಲ್ಲಿ ಚಪಾತಿ ಮತ್ತು ಕಾಳುಗಳ ಪಲ್ಯವನ್ನು ತನ್ನ ಗಿರಾಕಿಗಳಿಗೆ ನೀಡುತ್ತಿದ್ದ ಜಗು, ಹರಿಯನ್ನು ನೋಡಿ, ಯಾವ ಮಾತೂ ಆಡದೆ, ಒಂದು ತಟ್ಟೆಯಲ್ಲಿ ಅವನಿಗೆ ಊಟವನ್ನು ನೀಡಿದ. 'ಸೀಬರ್ಡ್' ಕಾವಲುಗಾರನಷ್ಟು ಚೆನ್ನಾಗಿ ಉಡುಪು ಧರಿಸಿದ್ದಾಗಲೀ ಅಥವಾ ಅವನಷ್ಟು ಒಳ್ಳೆಯ ಸ್ವಭಾವದವನಂತಾಗಲೀ ಜಗು ಕಾಣಲಿಲ್ಲ. ನಿಜವಾಗಿ ಹೇಳಬೇಕೆಂದರೆ, ಜಗು ಸರಿಯಾಗಿ ಬಟ್ಟೆಯನ್ನೇ ಧರಿಸಿರಲಿಲ್ಲ. ಕೊಳೆಯಾದ ಲುಂಗಿಯನ್ನು ಸೊಂಟಕ್ಕೆ ಸುತ್ತಿಕೊಂಡಿದ್ದ. ಸೊಂಟದ ಮೇಲೆ ಬೆತ್ತಲೆಯಾಗಿದ್ದ ಅವನ ಮೈಯಿಂದ ಬೆವರು ಇಳಿಯುತ್ತಿತ್ತು. ಆದರೂ ಅವನೊಬ್ಬ ಧಾರಾಳ ಮನುಷ್ಯನೆಂದು ಹರಿ ಭಾವಿಸಿದ. ಹಸಿವಿನಿಂದ ಕಂಗಾಲಾಗಿದ್ದ ಹರಿ ಊಟದ ತಟ್ಟೆಯೊಡನೆ ಕುಳಿತು, ತಲೆಬಗ್ಗಿಸಿ, ಗಬಗಬನೆ ತಿನ್ನಲಾರಂಭಿಸಿದ. ಆ ದೀರ್ಘವಾದ ಮತ್ತು ದಣಿವಿನ ದಿನದಲ್ಲಿ ಇದು ಅವನ ಮೊದಲ ಊಟವಾಗಿತ್ತು. ಹರಿ ಊಟವನ್ನು ಮುಗಿಸಿ, ಚಪಾತಿಯ ಚೂರಿನಿಂದ ತಟ್ಟೆಯಲ್ಲಿನ ವ್ಯಂಜನವನ್ನು ಎಳೆಯುತ್ತಿದ್ದಾಗ, ಜಗು ಅಲ್ಲಿಗೆ ಬಂದು ಮತ್ತೊಂದು ಚಪಾತಿಯನ್ನು ಅವನ ತಟ್ಟೆಗೆ ಎಸೆದ. ತುಂಬ ಹಸಿದಿದ್ದ ಹರಿ, ಅದನ್ನೂ ತಿಂದು ಮುಗಿಸಿದ.

ಹರಿಗೆ ತನ್ನ ಮನೆಯಲ್ಲೂ ಒಳ್ಳೆಯ ಊಟ ಮಾಡಿ ಅಭ್ಯಾಸವೇನಿರಲಿಲ್ಲ. ತನ್ನ ಜೀವಮಾನದಲ್ಲೇ ಅವನು ಇಷ್ಟೊಂದು ಹಸಿವನ್ನೂ, ದಣಿವನ್ನೂ ಅನುಭವಿಸಿರಲಿಲ್ಲ.

ಕೊನೆಯ ಗಿರಾಕಿ ಹೋದ ನಂತರ ಉದ್ದನೆಯ ಮರದ ಬೆಂಚುಗಳ ಪೈಕಿ ಒಂದರ ಮೇಲೆ ಮಲಗುವಂತೆ, ಜಗು ಕೈ ತೋರಿಸಿ, ಅವನಿಗೆ ಸೂಚಿಸಿದ. ಹರಿ ಕೂಡಲೇ ಮಲಗಿದ. ಆ ಬೆಂಚು ಗಡುಸಾಗಿದ್ದರೂ, ರಸ್ತೆಯಿಂದ ಶಬ್ದ ಮತ್ತು ಬೆಳಕು ಬರುತ್ತಿದ್ದರೂ, ಮಲಗಿದೊಡನೆ ಹರಿಗೆ ಗಾಢವಾದ ನಿದ್ರೆ ಬಂತು.

# 8

ಆ ಮೊದಲ ರಾತ್ರಿ ತುಂಬ ದಣಿವು, ನಿತ್ರಾಣ ಮತ್ತು ಕಾತುರತೆಯಿಂದಾಗಿ ಹರಿಗೆ ತಾನು ಇರುವ ಜಾಗ ಎಂತಹುದೆಂಬುದು ಸರಿಯಾಗಿ ಗಮನಕ್ಕೆ ಬಂದಿರಲಿಲ್ಲ. ಮರು ದಿನ ಬೆಳಗ್ಗೆ ಎದ್ದಾಗಲೇ, ಮೊದಲ ಸಲ, ಅದು ಇರುವ ಸ್ಥಿತಿ ಅರಿವಿಗೆ ಬಂತು.

ಶ್ರೀಕೃಷ್ಣ ಖಾನಾವಳಿಯು, ಹರಿ ಹಿಂದೆಂದೂ ನೋಡದಂತಹ ಅತ್ಯಂತ ಕೊಳಕಾದ ಮತ್ತು ಅಂದಗೆಟ್ಟ ಊಟದ ಮನೆಯಾಗಿತ್ತು. ಧುಲ್‌ನಲ್ಲೂ ಮತ್ತು ಅಲಿಬಾಗ್-ರೇವಾಸ್ ಹೆದ್ದಾರಿಯಲ್ಲೂ ಇದ್ದ ಉಪಾಹಾರ ಗೃಹಗಳೂ ಸಹ ಇದಕ್ಕಿಂತ ಎಷ್ಟೋ ಪಾಲು ಚೆನ್ನಾಗಿದ್ದವು. ಮಾವಿನ ಮರ ಇಲ್ಲವೆ ತಾಳೆ ಮರದ ಕೆಳಗೆ, ಮರದ ಹಲಗೆಗಳಿಂದ ಕಟ್ಟಿರುತ್ತಿದ್ದ ಅವುಗಳಲ್ಲಿ ಹೂದಾನಿಗಳಂತೆ, ಹಳೆಯ ಖಾಲಿ ಇಂಕ್ ಬಾಟಲ್‌ಗಳೊಂದಿಗೆ ಚೆಂಡು ಇಲ್ಲವೆ ದಾಸವಾಳದ ಹೂಗಳನ್ನು ಇಟ್ಟು ಅಲಂಕರಿಸಿರಲಾಗಿರುತ್ತಿತ್ತು. ಕಪಾಟುಗಳಲ್ಲಿ ಆಕರ್ಷಕವಾಗಿ ಬಣ್ಣ ಬಣ್ಣದ ಸಿಗರೇಟ್ ಪ್ಯಾಕುಗಳನ್ನೂ, ತಂಪು ಪಾನೀಯಗಳ ಬಾಟಲಿಗಳನ್ನೂ ಜೋಡಿಸಿರಲಾಗುತ್ತಿತ್ತು. ದೇವರ ಚಿತ್ರದ ಹೊಳಪಿನ ಪಟವೊಂದನ್ನು ಗೋಡೆಗೆ ನೇತುಹಾಕಿರಲಾಗುತ್ತಿತ್ತು. ಗುನ್ನಾಂಪಟ್ಟೆಯ ಹಾರವೊಂದನ್ನು ಪಟದ ಚೌಕಟ್ಟಿಗೆ ಹಾಕಿ, ಅದರ ಮುಂದೆ ಸುವಾಸನೆಯ ಊದುಕಡ್ಡಿಗಳನ್ನು ಹಚ್ಚಿಡಲಾಗು-ತ್ತಿತ್ತು.

ಆದರೆ ಮುಂಬೈನ ಗೋವಾಲಿಯ ಟ್ಯಾಂಕಿನ ಶ್ರೀಕೃಷ್ಣ ಖಾನಾವಳಿಯಲ್ಲಿ, ಕನಿಷ್ಠ, ನಿಯತಕಾಲಿಕಗಳಲ್ಲಿ ಬರುವ ದೇವರ ಚಿತ್ರವನ್ನು ಕತ್ತರಿಸಿ, ಗೋಡೆಗೆ ಅಂಟಿಸಿರಲಿಲ್ಲ. ಅಂತಹ, ಚಿತ್ರವೊಂದಿದ್ದಾಗ್ಯೂ ಹೊಗೆಯ ಪದರುಗಳಿಂದಾಗಿ ಅದು ಮುಚ್ಚಿಕೊಂಡು ಹೋಗಿತ್ತೇನೊ! ಛಾವಣಿಯಲ್ಲಿ ದಪ್ಪನೆ ಜೇಡರ ಬಲೆಗಳಿದ್ದು, ಅವು ಹೊಗೆಯನ್ನು ತಡೆತಡೆದು ತಲೆಯ ಮೇಲೆ ತುಪ್ಪಳದ ಕಂಬಳಿಯೊಂದನ್ನು ನೇಯ್ದಂತಿತ್ತು. ನೆಲವೂ, ಮರದ ಮೇಜುಗಳೂ ಸಹ ಕಪ್ಪಾಗಿದ್ದವು. ಹಿಂದಲ ಕೊಠಡಿಯಲ್ಲಿ ದಿನವಿಡೀ ಉರಿಯುತ್ತಿದ್ದ ತೆರೆದ ಒಲೆಗಳಿಂದ ಬರುವ ಹೊಗೆಯನ್ನು ಇವೆಲ್ಲವೂ ಹಂಚಿಕೊಂಡಿದ್ದವು. ದೊಡ್ಡ ಅಲ್ಯೂಮಿನಿಯಂ ಬಾಂಡಲೆಯೊಂದರಲ್ಲಿ ಕಾಳುಗಳನ್ನು ಬೇಯಿಸಲಾಗುತ್ತಿತ್ತು. ಚಪಾತಿಯ ಹಿಟ್ಟನ್ನು ಕೈಯಿಂದ ತಟ್ಟಿ ಬೇಯಿಸಲಾಗುತ್ತಿತ್ತು.

ಅದು ಮುಂಬೈನಲ್ಲಿ ಬಹುಶಃ ಯಾರಿಗಾದರೂ ನಿಲುಕುವಂತಹ ಅತ್ಯಂತ ಅಗ್ಗದ ಊಟದ ಮನೆಯಾಗಿತ್ತು. ಅಲ್ಲಿ ಭಿಕ್ಷುಕನೂ ಸಹ ತನ್ನ ಊಟವನ್ನು ಕೊಳ್ಳುವುದು ಸಾಧ್ಯವಿತ್ತು. ಸಾಮಾನ್ಯವಾಗಿ ಅದರ ಗಿರಾಕಿಗಳೆಂದರೆ ಕೂಲಿಗಳು ಮತ್ತು ಭಿಕ್ಷುಕರು.

ಕಲ್ಲಿದ್ದಲ ಮೂಟೆಗಳನ್ನೂ, ಗ್ಯಾಸ್ ಸಿಲಿಂಡರ್‌ಗಳನ್ನೂ ಒಯ್ಯುತ್ತಿದ್ದ ಕೂಲಿಗಳೂ, ನಗರದಾದ್ಯಂತ, ಮರದ ಕೈಗಾಡಿಗಳಲ್ಲಿ ಸಾಮಾನುಗಳನ್ನು ಎಳೆದು ತರುತ್ತಿದ್ದಂತಹವರೂ ಅಲ್ಲಿ ಊಟ ಮಾಡುತ್ತಿದ್ದರು. ಅಂತಹ ಜನರಿಗೆ ಊಟಕ್ಕಾಗಿ ಯಾವುದೇ ನಿರ್ದಿಷ್ಟ ಸಮಯವಿರಲಿಲ್ಲ. ಬೆಳಗಾಗುವ ಮುನ್ನವೇ ಕೆಲವರು ಊಟಕ್ಕೆ ಬರುತ್ತಿದ್ದರು. ಅಂತಹವರಿಗೆ ಹಿಂದಿನ ರಾತ್ರಿ ಉಳಿದುದನ್ನೇ ಬಡಿಸಲಾಗುತ್ತಿತ್ತು. ಮಧ್ಯರಾತ್ರಿಯ ನಂತರ ಇಡೀ ಮುಂಬೈ ನಗರವೇ ದಣಿವಿನಿಂದ ನಿದ್ರೆಯಲ್ಲಿ ಮುಳುಗಿದ್ದಾಗಲೂ ಒಬ್ಬಿಬ್ಬರು ಊಟಕ್ಕೆ ಬರುತ್ತಿದ್ದರು. ಹೀಗಾಗಿ ಮಾಲೀಕನಿಗೆ ತನ್ನ ಖಾನಾವಳಿಯನ್ನು ಸ್ವಚ್ಛ ಮಾಡುವುದಕ್ಕೆ ಸಮಯವೇ ಸಿಗುತ್ತಿರಲಿಲ್ಲ. ಅದನ್ನು ಚಿತ್ರಗಳು ಮತ್ತು ಹೂಗಳಿಂದ ಅಲಂಕರಿಸಲು ದುಡ್ಡು ಸಹ ಇರಲಿಲ್ಲ.

ಜಗು ಇಡೀ ದಿನ ಕಷ್ಟಪಟ್ಟು ಕೆಲಸ ಮಾಡುತ್ತಿದ್ದ. ಅವನ ಸಹಾಯಕ್ಕಿದ್ದ ಇಬ್ಬರು ಹುಡುಗರು ದೊಡ್ಡ ತಟ್ಟೆಗಳಲ್ಲಿ ಹಿಟ್ಟನ್ನು ಕಲಸಿ, ನಾದುತ್ತಿದ್ದರು. ಹಗಲಿರುಳೂ ಉರಿಯುತ್ತಿದ್ದ ತೆರೆದ ಒಲೆಗಳಲ್ಲಿ ರೊಟ್ಟಿಗಳನ್ನು ಬೇಯಿಸುತ್ತಿದ್ದರು.

ಮರುದಿನ ಬೆಳಿಗ್ಗೆ ಹರಿ ಏನನ್ನೂ ಕೇಳದಿದ್ದರೂ ಅವನಿಗೆ ಒಂದು ಲೋಟದಲ್ಲಿ ಚಹಾವನ್ನೂ, ಸುರುಳಿ ಸುತ್ತಿದ್ದ ಒಂದು ಚಪಾತಿಯನ್ನೂ ಕೊಡಲಾಯಿತು. ಆಗ ಹರಿ ಹೇಳಿದ,



''ನೀವು ಕೊಡುತ್ತಿರುವ ಈ ಎಲ್ಲ ಊಟ-ತಿಂಡಿಗಳಿಗಾಗಿ ಕೊಡಲು ನನ್ನಲ್ಲಿ ದುಡ್ಡಿಲ್ಲ. ಇದಕ್ಕೆ ಪ್ರತಿಯಾಗಿ ನಿಮ್ಮ ಅಡುಗೆ ಮನೆಯಲ್ಲಿ ಕೆಲಸ ಮಾಡಲೆ?'' ಜಗು ಹುಬ್ಬುಗಂಟಿಕ್ಕಿ, ಕಾಲಿನಿಂದ ತಲೆಯವರೆಗೂ ಅವನನ್ನು ನೋಡಿ ನಂತರ ಹೇಳಿದ, ''ಆಗಲಿ, ಅಡುಗೆ ಮನೆಯಲ್ಲಿ ಮತ್ತೊಬ್ಬ ಹುಡುಗ ಕೆಲಸ ಮಾಡಿದರೆ ಅಡ್ಡಿಯೇನಿಲ್ಲ. ಈ ಪಾತ್ರೆಗಳನ್ನು ತೊಳೆಯುವುದ-ರೊಡನೆ ಈಗಲೇ ಕೆಲಸ ಪ್ರಾರಂಭಿಸು. ನಂತರ ನೀನೂ ಹಿಟ್ಟನ್ನು ಕಲಸಬಹುದು ಮತ್ತು ರೊಟ್ಟಿ ಮಾಡುವಲ್ಲಿ ಸಹಾಯ ಮಾಡಬಹುದು. ಇಷ್ಟವಿದ್ದರೆ, ನೀನು ಇಲ್ಲೇ ತಂಗಿದ್ದು ನಿನ್ನ ಊಟಕ್ಕಾಗಿ ಕೆಲಸ ಮಾಡಬಹುದು ಆಂ,... ಇತರ ಹುಡುಗರಂತೆಯೇ ನಿನಗೂ ದಿನಕ್ಕೆ ಒಂದು ರೂಪಾಯಿ ಕೊಡುತ್ತೇನೆ.''

ಖಾನಾವಳಿಯ ಹಿಂಭಾಗದಲ್ಲಿದ್ದ ಅಡುಗೆ ಮನೆಯಲ್ಲಿ ಕೆಲಸ ಮಾಡಲು ಹರಿ ಹೋದ. ಪಾತ್ರೆಗಳನ್ನು ತೊಳೆಯಲು, ಕಪ್ಪಾದ ತೆಂಗಿನ ಜುಂಗು ಮತ್ತು ಬೂದಿ ಬಿಟ್ಟು ಮತ್ತೇನೂ ಇರಲಿಲ್ಲ. ಅವುಗಳನ್ನೇ ಉಪಯೋಗಿಸಿಕೊಂಡು ಹರಿ ಚೆನ್ನಾಗಿ ಪಾತ್ರೆಗಳನ್ನು ತೊಳೆದ. ಆದರೆ ಊರಿನಲ್ಲಿ ತಾನು ತೊಳೆದ ಪಾತ್ರೆ ಸ್ವಚ್ಛವಾಗಿವೆಯೆಂದು ಲೀಲ ಎಂದೆಂದೂ ಒಪ್ಪುತ್ತಿರಲಿಲ್ಲ. ಅನಂತರ ದೊಡ್ಡ ತಟ್ಟೆಯಲ್ಲಿ ಹಿಟ್ಟನ್ನು ಕಲಸುವಲ್ಲಿ ಹರಿ ಇಬ್ಬರು ಹುಡುಗರಿಗೂ ಸಹಾಯ ಮಾಡಿದ. ಅದು ನಿಜವಾಗಿ ಕಷ್ಟದ ಕೆಲಸವಾಗಿತ್ತು. ಸಾಕಷ್ಟು ಆಯಾಸವನ್ನೂ, ಬೆವರನ್ನೂ ಉಂಟು ಮಾಡಿತು. ಅವರು ಕೆಲಸ ಮಾಡುವಾಗ ಒಬ್ಬರೊಡನೊಬ್ಬರು ಮಾತನಾಡಲಿಲ್ಲ. ಕೊನೆಯಲ್ಲಿ ಆ ಹುಡುಗರಿಬ್ಬರೂ ತಮ್ಮ ತಮ್ಮಲ್ಲೇ ಮಾತನಾಡಿಕೊಂಡಾಗ, ಅದು ತಮಿಳು ಎಂದು ಹರಿಗೆ ಗೊತ್ತಾಯಿತು. ತನಗೆ ತಿಳಿದಿದ್ದ ಹಿಂದಿ ಮತ್ತು ಮರಾಠಿ ಭಾಷೆಗಳು ಅವರಿಗೆ ಗೊತ್ತಿದ್ದಂತೆ ತೋರಲಿಲ್ಲ. ಹೀಗಾಗಿ ಅವರ ನಡುವೆ ಮೌನ ಆವರಿಸಿತ್ತು. ಆದರೂ ಆ ಹುಡುಗರು ಹರಿಯ ಬಗ್ಗೆ ಸ್ನೇಹದ ಸೂಚನೆಯನ್ನಾಗಲೀ, ಕುತೂಹಲವನ್ನಾಗಲೀ ತೋರಿಸಲಿಲ್ಲ. ಅವರಿಗೆ ಮಾತನಾಡ-ಲಾರದಷ್ಟು ದಣಿವಾಗಿರಬೇಕು ಅಥವಾ ದುಃಖಿತರಾಗಿರಬೇಕು. ಅವರು ಬೆಂಕಿಯನ್ನು ಸಿದ್ಧಪಡಿಸಿದ ನಂತರ, ಒಬ್ಬ ರೊಟ್ಟಿಯನ್ನು ತಟ್ಟುತ್ತಿದ್ದ, ಮತ್ತೊಬ್ಬ ಉದ್ದನೆಯ ಇಕ್ಕಳದಲ್ಲಿ ಬೆಂಕಿಯ ಮೇಲೆ ಅವನ್ನು ಬೇಯಿಸುತ್ತಿದ್ದ. ಮುಂದಿನ ಕೊಠಡಿಯಲ್ಲಿದ್ದ ಉದ್ದನೆಯ ಮೇಜುಗಳ ಮೇಲೆ ಕುಳಿತಿರುತ್ತಿದ್ದ ಗಿರಾಕಿಗಳಿಗೆ ಅವನ್ನು ಒಯ್ಯುವ ಕೆಲಸವನ್ನು ಹರಿಗೆ ವಹಿಸಿಕೊಡಲಾಯಿತು. ಆ ಸಣ್ಣ ಜಾಗದಲ್ಲಿ ಮಾಡಬೇಕಾಗಿದ್ದ ವಿಪರೀತ ಕೆಲಸ ಮತ್ತು ಕಾವಿನಿಂದಾಗಿ ಯಾರಿಗೂ ಮಾತನಾಡುವಷ್ಟು ಚೈತನ್ಯವಾಗಲೀ, ಸಮಯವಾಗಲೀ ಇರಲಿಲ್ಲ.

* * *

ಪಕ್ಕದ ಅಂಗಡಿಯ ಮನುಷ್ಯ ಹೆಚ್ಚು ಸ್ನೇಹಪರನಾಗಿರದಿದ್ದರೆ ಹರಿ ಮೌನಿಯಾಗಿಯೇ ಇದ್ದು ಬಿಡುತ್ತಿದ್ದನೇನೊ ! ಪಕ್ಕದಲ್ಲಿ ಗಡಿಯಾರಗಳ ದುರಸ್ತಿ ಅಂಗಡಿ ಇತ್ತು. ಅದರ ಬಾಗಿಲ ಮೇಲೆ 'ಡಿಂಗ್‌ಡಾಂಗ್ ವಾಚ್ ವರ್ಕ್ಸ್' ಎಂಬ ಹೆಸರಿನ ಫಲಕವನ್ನು ಹಾಕಲಾಗಿತ್ತು. ರಸ್ತೆಯ ಪಕ್ಕದಲ್ಲಿ ಇಡಲಾಗಿದ್ದ ಕಾಂಕ್ರೀಟ್‌ನ ದೊಡ್ಡ ಕಸದ ತೊಟ್ಟಿಯೊಳಗೆ ಕಚಡಾ ವಸ್ತುಗಳನ್ನು ಸುರಿಯಲು ಹರಿ ಬಂದಾಗ, ಚಿಕ್ಕ ಕಪ್ಪು ಟೋಪಿಯನ್ನು ಹಾಕಿಕೊಂಡು, ಸಣ್ಣ ಕೊಳವೆಯನ್ನು ಕಣ್ಣಿಗೆ ಸಿಕ್ಕಿಸಿಕೊಂಡು, ಚಿಕ್ಕ ಮೇಜಿನ ಮುಂದೆ ಕುಳಿತು, ಬಲಗೈಯಲ್ಲಿ ಹಿಡಿದಿದ್ದ ಪುಟ್ಟ ಗಡಿಯಾರವನ್ನು ಪರೀಕ್ಷಿಸುತ್ತಿದ್ದ ಆ ವ್ಯಕ್ತಿ ಹರಿಯನ್ನು ನೋಡಿ ನಸುನಕ್ಕ.

ಪ್ರತಿಯಾಗಿ ಹರಿಯೂ ನಕ್ಕ. 'ಕಪ್ಪು ಕುದುರೆ' ಯ ಬಳಿ ನಡೆದ ಸಭೆಯಲ್ಲಿ ತುಂಬಾ ಚೆನ್ನಾಗಿ ಮಾತನಾಡಿದ್ದ ಸೈಯದ್ ಅಲಿಯಂತೆಯೇ ಕಾಣುತ್ತಿದ್ದ ಆ ಮುದುಕನನ್ನು ನೋಡಿ, ಇವನೊಬ್ಬ ಉತ್ತಮ, ಅನುಕಂಪಶೀಲ ವ್ಯಕ್ತಿಯೆಂಬ ಹಾಗೂ ಅವನನ್ನು ನಂಬಬಹುದೆಂಬ ಭಾವನೆ ಹರಿಗೆ ಕೂಡಲೇ ಬಂದಿತು.

"ಓ, ಶ್ರೀಕೃಷ್ಣ ಖಾನಾವಳಿಗೆ ಮತ್ತೊಬ್ಬ ಹೊಸ ಹುಡುಗ" ಎಂದು ಆ ಮುದುಕ ಉದ್ಗಾರ ತೆಗೆದು, ಹರಿಯನ್ನು ಕರೆದ. ಪುಟ್ಟ ಗಡಿಯಾರವನ್ನು ಪರೀಕ್ಷಿಸುವ ಕಾರ್ಯವನ್ನೂ ಮುಂದುವರಿಸುತ್ತಾ ಅವನು ಹರಿಯೊಡನೆ ಮಾತನಾಡುತ್ತಿದ್ದ. ಹರಿ ಅಂಗಡಿಯ ಮುಂದೆ ನಿಂತು, ಗೋಡೆಗೆ ನೇತುಹಾಕಿದ್ದು, ಟಿಕ್‌ಟಿಕ್ ಶಬ್ದ ಮಾಡುತ್ತಿದ್ದ ಅನೇಕ ಗಡಿಯಾರಗಳನ್ನೂ, ಗಾಜಿನ ಬೀರುವಿನಲ್ಲಿಟ್ಟಿದ್ದ ಫಳಫಳ ಹೊಳೆಯುವ ಗಡಿಯಾರಗಳನ್ನೂ ಬಾಯ್ತೆರೆದು ನೋಡುತ್ತಿದ್ದ. "ಏನು, ನಗರಕ್ಕೆ ಹೊಸಬನೋ?" ಗಟ್ಟಿಯಾದ, ಅಸ್ಪಷ್ಟವಾದ ಧ್ವನಿಯಲ್ಲಿ ಅವನು ಕೇಳಿದ.

ಹೌದೆಂದು ಹರಿ ತಲೆಯಾಡಿಸಿದ.

"ಎಲ್ಲಿಂದ ಬಂದೆ? ಜಗುವಿನ ಹಳ್ಳಿಯಿಂದಲೊ?"

"ಆಂ, ಇಲ್ಲ. ನನಗೆ ಜಗುವಿನ ಪರಿಚಯವೇ ಇರಲಿಲ್ಲ. ಅಲಿಬಾಗ್‌ನ ಬಳಿ ಇರುವ ಥುಲ್‌ನಿಂದ ಬಂದಿದ್ದೇನೆ." ಹರಿ ಉದ್ವೇಗದಿಂದ ಮತ್ತು ಹರ್ಷದಿಂದ ಹೇಳಿದ. ತನ್ನ ಈ ವಿಳಾಸದ ಬಗ್ಗೆ ಅವನಿಗೆ ಹೆಮ್ಮೆಯೆನಿಸಿತ್ತು. 'ಕಪ್ಪು ಕುದುರೆ'ಯ ಸೈಯದ್‌ಅಲಿಗೆ ಆ ಸ್ಥಳ ಯಾವುದೆಂಬುದು ಗೊತ್ತಾಗುತ್ತಿತ್ತೇನೋ. ಆದರೆ ಈ ವೃದ್ಧನಿಗೆ ಅಲಿಬಾಗ್ ಬಗ್ಗೆ ಏನೂ ತಿಳಿಯದೆಂಬುದು ಸ್ಪಷ್ಟವಾಗಿತ್ತು. ಅವನು ಸ್ವಲ್ಪ ತಬ್ಬಿಬ್ಬಾಗಿದ್ದ. ಹೆಚ್ಚು ವಿಷಯ ತಿಳಿಯಲು ಕುತೂಹಲಿಯಾಗಿದ್ದ. ಹರಿ ಮುಂದುವರಿಸಿದ, "ಬೆಟ್ಟದ ಮೇಲಿನ ದೊಡ್ಡ ಕಟ್ಟಡದಲ್ಲಿನ ಕಾವಲುಗಾರ ಊಟಕ್ಕಾಗಿ ನನ್ನನ್ನು ಇಲ್ಲಿಗೆ ಕರೆತಂದ. ಕೆಲಸ ಮಾಡಲು ನಾನು ಇಲ್ಲೇ ಉಳಿದೆ."

"ಸಹಾಯಕ್ಕಾಗಿ ಇತರ ಜನರೂ ಜಗುವಿನ ಬಳಿಗೆ ಬರುತ್ತಾರೆ." ಆ ಮುದುಕ ತಲೆಯಾಡಿಸುತ್ತಾ, ಉದ್ದನೆಯ ಸೊಗಸಾದ ಸೂಜಿಯೊಂದನ್ನು, ಗಡಿಯಾರದ ಯಂತ್ರ ರಚನೆಯನ್ನು ಅರಿಯಲು ಒಳನೂಕಿದ. "ಜಗು ಹೆಚ್ಚು ಮಾತನಾಡದ ಮನುಷ್ಯ. ಅವನು ತನ್ನ ಬಗ್ಗೆ ಯಾರಿಗೂ ಏನೂ ಹೇಳುವುದಿಲ್ಲ. ಆದರೆ ಅನೇಕರಿಗೆ ಉಪಕಾರ ಮಾಡಿದ್ದಾನೆ. ಅವನಲ್ಲಿ ಕೆಲಸ ಮಾಡುತ್ತಿರುವ ಇಬ್ಬರು ಹುಡುಗರ ವಿಷಯವನ್ನೇ ತೆಗೆದುಕೊಳ್ಳೋಣ. ಅವರ ತಂದೆ-ತಾಯಿ ರೇಲ್ವೆ ಅಪಘಾತವೊಂದರಲ್ಲಿ ಸತ್ತರು. ಕೆಲಸ ಹುಡುಕಿಕೊಂಡು ನಗರಕ್ಕೆ ಬರುವ ಅನೇಕರಂತೆ, ಅವರೂ ರೇಲ್ವೆ ಪ್ಲಾಟ್‌ಫಾರಂನಲ್ಲಿ ವಾಸಿಸುತ್ತಿದ್ದರು. ಒಂದು ದಿನ ಪಂಪ್‌ನಿಂದ ನೀರು ತರುವ ಸಲುವಾಗಿ ಅವರು ರೇಲ್ವೆ ಕಂಬಿಗಳನ್ನು ದಾಟುತ್ತಿದ್ದಾಗ ಈ ದುರ್ಘಟನೆ ಸಂಭವಿಸಿತು. ಅಗೋ, ಅಲ್ಲೇ ಇದೆ ನೋಡು ಆ ನಿಲ್ದಾಣ. ಬೆಳಿಗ್ಗೆ ತನ್ನ ಕೆಲಸಕ್ಕಾಗಿ ಬರುತ್ತಿದ್ದಾಗ, ಜಗು ಈ ಹುಡುಗರನ್ನು ಕಂಡ ಕೂಡಲೇ ಅವರನ್ನು ನೇರವಾಗಿ ಇಲ್ಲಿಗೆ ಕರೆದುಕೊಂಡು ಬಂದ. ಅವರಿಗೆ ಆಹಾರ ಮತ್ತು ವಸತಿಯಲ್ಲದೆ, ಕೆಲಸವನ್ನು ಸಹ ಕೊಟ್ಟ."

ಈ ಕಥೆಯನ್ನು ಕೇಳಿ ಹರಿ ದಿಗ್ಭ್ರಮೆಗೊಂಡ. ಈಗ ಜಗುವಿನ ಆಶ್ರಯಕ್ಕೆ ಬಂದಿರುವ

ತಾನೂ ಸಹ ಅನಾಥನೆಂದು ಅವನು ತಪ್ಪು ತಿಳಿಯುವುದು ಹರಿಗೆ ಇಷ್ಟವಾಗಲಿಲ್ಲ. ತನಗೆ ತಂದೆ, ತಾಯಿ ಇದ್ದರು. ತಂದೆ ಕುಡುಕನಿರಬಹುದು, ತಾಯಿ ರೋಗಿಷ್ಠೆಯಾಗಿರಬಹುದು– ತನಗೊಂದು ಸರಿಯಾದ ಮನೆಯೇ ಇತ್ತು. ಆ ಯೋಚನೆ ಮನಸ್ಸಿಗೆ ಬಂದೊಡನೆಯೇ ಹರಿ, ಥಟ್ಟನೆ ಕೇಳಿದ, ''ಸ್ವಾಮಿ, ಅಂಚೆ ಕಛೇರಿ ಎಲ್ಲಿದೆಯೆಂದು ಹೇಳುವಿರಾ? ಒಂದು ಪೋಸ್ಟ್ ಕಾರ್ಡ್ ಕೊಳ್ಳಬೇಕು.''

'' ಹಾಂ, ಹಾಂ, !'' ಗಡಿಯಾರದವ ನಗುತ್ತಾ, ಕಣ್ಣಿನ ಕೊಳವೆಯ ಹಿಂದಿನಿಂದಲೇ ಕಣ್ಮಿಟುಕಿಸುತ್ತಾ, ''ಯಾರಿಗೋ ಕಾಗದ ಬರೆಯಬೇಕೆಂಬುದು ನಿನ್ನ ನೆನಪಿಗೆ ಹಠಾತ್ತನೆ ಬಂತು, ಅಲ್ಲವಾ? ಹೌದು, ನೀನು ಬರೆಯಬೇಕು, ಖಂಡಿತ ಬರೆಯಬೇಕು. ಇಗೋ ಈ ರಸ್ತೆಯಲ್ಲೇ ನೇರ ಹೋಗು. ನಿನ್ನ ಎಡಭಾಗದಲ್ಲಿ ಎಲೆಕ್ಟ್ರಿಕ್ ಸಬ್ ಸ್ಟೇಷನ್ ಇದೆ. ಅದರ ಪಕ್ಕದ್ದೇ ಅಂಚೆ ಕಛೇರಿ. ಪೋಸ್ಟ್ ಕಾರ್ಡ್ ಕೊಳ್ಳಲು ನಿನ್ನಲ್ಲಿ ಹಣವಿದೆಯೋ ಅಥವಾ ಸ್ವಲ್ಪ ಹಣವನ್ನು ಎರವಲಾಗಿ ಕೊಡಲೊ?''

ಕೃತಜ್ಞತೆಯೊಡನೆ ಆ ಹಣವನ್ನು ತೆಗೆದುಕೊಂಡು ಜಗು, ತನಗೆ ತನ್ನ ಸಂಬಳವನ್ನು ಕೊಟ್ಟ ಕೂಡಲೇ ಹಿಂದಿರುಗಿಸುವುದಾಗಿ ಹೇಳಿದ. ನಂತರ ಅಂಚೆ ಕಛೇರಿಗೆ ಹೋದ. ಕಾರ್ಡ್ ಕೊಂಡ ನಂತರ ಬರೆಯಲು ಪೆನ್ ಬೇಕಾಯಿತು. ಖಾನಾವಳಿಯ ಮಾಲೀಕನಿಗಿಂತ, ಗಡಿಯಾರದವನಲ್ಲಿ ಅದು ಇರುವ ಸಂಭವ ಹೆಚ್ಚಾಗಿದ್ದುದರಿಂದ ಅವನಲ್ಲಿಗೆ ಮತ್ತೆ ಬಂದ. ಅದು ತುಂಬಾ ಸೆಖೆಯ ನಡು ಮಧ್ಯಾಹ್ನ. ಖಾನಾವಳಿಯಲ್ಲಿ ಯಾರೂ ಇರಲಿಲ್ಲ. ಇಬ್ಬರು ಅನಾಥ ಹುಡುಗರೂ ಸಹ ಸೆಖೆ ಮತ್ತು ದಣಿವಿನಿಂದ ಮೇಜಿನ ಕೆಳಗೆ ಮಲಗಿದ್ದರು. ಡಿಂಗ್‌ಡಾಂಗ್ ವಾಚ್ ವರ್ಕ್ಸ್‌ನ ಮೆಟ್ಟಿಲುಗಳ ಮೇಲೆ ಕುಳಿತು, ವೃದ್ಧ ಗಡಿಯಾರದವ ತನಗೆ ಎರವಲಾಗಿ ಕೊಟ್ಟ ಬಾಲ್-ಪಾಯಿಂಟ್ ಪೆನ್‌ನಲ್ಲಿ ಜಾಗರೂಕತೆಯಿಂದ ಬರೆಯಲಾರಂಭಿಸಿದ:

''ಪ್ರೀತಿಯ ಅಮ್ಮ,

ನಾನು ಮುಂಬೈನಲ್ಲಿದ್ದೇನೆ. ನನಗೊಂದು ಕೆಲಸವಿದೆ. ನಾನು ಗಳಿಸಿದ್ದನ್ನು ಊರಿಗೆ ತರುತ್ತೇನೆ. ನೀನು ಕ್ಷೇಮವಾಗಿದ್ದೀಯೆಂದು ಆಶಿಸುತ್ತೇನೆ. ನಾನು ಆರೋಗ್ಯವಾಗಿದ್ದೇನೆ. ಸೋದರಿಯರಿಗೆ ನನ್ನ ನೆನಪುಗಳು.''

ಉಳಿದ ಜಾಗವನ್ನು ತುಂಬುವ ಸಲುವಾಗಿ, ದೊಡ್ಡ ಅಕ್ಷರಗಳಲ್ಲಿ ತನ್ನ ಹೆಸರನ್ನು ಬರೆದ. ಆದರೆ ತನ್ನ ವಿಳಾಸವನ್ನು ಬರೆಯಲಿಲ್ಲ. ಕಾರ್ಡ್ ಅನ್ನು ಅಂಚೆ ಡಬ್ಬಕ್ಕೆ ಹಾಕಲು ಹೊರಟ. ತಾನು ಮಾಡಬೇಕಾದ ಕರ್ತವ್ಯವನ್ನು ಈಡೇರಿಸಿದ್ದಕ್ಕಾಗಿ ಅವನಿಗೆ ಹರ್ಷವಾಗಿತ್ತು. ಆದರೆ ಮನೆಗೆ ಹಿಂದಿರುಗದೆ ಮುಂಬೈನಲ್ಲೇ ಇರುವ ಅರ್ಥವನ್ನೂ ಈ ಪತ್ರ ನೀಡುವುದು ಅವನಿಗೆ ದಿಗಿಲನ್ನೂ ಉಂಟುಮಾಡಿತ್ತು.

* * *

ಬೇಲ ಮತ್ತು ಕಮಲ ಓಡಿಬಂದು, ಲೀಲಳ ಪಕ್ಕದಲ್ಲಿ ನಿಂತು ಡಿಸಿಲ್ವಾ ಕುಟುಂಬದವರು ತಮ್ಮ ಕಾರಿನಿಂದ ಇಳಿಯುವುದನ್ನು ನೋಡಿದರು. ಅಡಿಗೆಯವನು ಆಗಲೇ ತಮ್ಮ ಗುಡಿಸಿಲಿನತ್ತಲೇ ಬರುತ್ತಿದ್ದ. ಕೊರಕಲ ಮೇಲಿದ್ದ ದಿಮ್ಮಿಯ ಮತ್ತೊಂದು ಕಡೆ ನಿಂತು ಕೂಗಲಾರಂಭಿಸಿದ. ಅವನ ಕೂಗಿಗೆ ಹೆದರಿ, ಕಲ್ಲೊಂದರ ಮೇಲೆ ಕುಳಿತಿದ್ದ ಹಳದಿ ಬಣ್ಣದ

ಮುದಿ ಕ್ರೌಂಚ ಪಕ್ಷಿಯೊಂದು, ಫರ್ವೆ ಮತ್ತು ಪೀತದಾರು ಮರಗಳತ್ತ ಹಾರಿ ಹೋಯಿತು.

''ನಿನ್ನ ತಮ್ಮ ಎಲ್ಲಿ?'' ಅಡಿಗೆಯವ ಕೇಳಿದ, ''ಮನೆಯೊಳಗೆ ಸಾಮಾನುಗಳನ್ನು ಒಯ್ಯಲು ಸಹಾಯ ಮಾಡುವಂತೆ ಅವನಿಗೆ ತಿಳಿಸಿ.''

''ಅವನು ಇಲ್ಲಿಲ್ಲ'' ಎಂದು ಹೇಳಲು ಬಾಯ್ತೆರೆದ ಲೀಲ ಮಾತನಾಡದೆ, ಕಮಲ ಮತ್ತು ಬೇಲರನ್ನು ಆ ಬಂಗಲೆಯತ್ತ ತಳ್ಳುತ್ತಾ ಮೆಲ್ಲಗೆ ಹೇಳಿದಳು, ''ಹೋಗಿ ಸಹಾಯ ಮಾಡಿ. ಅವರ ಪೆಟ್ಟಿಗೆ-ಚೀಲಗಳನ್ನು ಒಳಗೊಯ್ಯಿರಿ. ನಾನು ಈಗಲೇ ಬರುತ್ತೇನೆಂದು ತಿಳಿಸಿ.'' ತಾಯಿಗೆ ಕುಡಿಯಲು ನೀರು ಕೊಟ್ಟು, ಮತ್ತೇನಾದರೂ ಬೇಕಾ ಎಂದು ಕೇಳಲು ಲೀಲ ಒಳಗೆ ಹೋದಳು. ನಂತರ ಸೀರೆಯ ನರಿಗೆಯನ್ನು ಸೊಂಟಕ್ಕೆ ಸಿಕ್ಕಿಸಿಕೊಂಡು ಸಹಾಯ ಮಾಡಲು ಕೊರಕಲನ್ನು ದಾಟಿ ಬಂಗಲೆಗೆ ಹೋದಳು. ಅಂದು ಬೆಳಗ್ಗೆ ವೈದ್ಯಕೀಯ ಸಹಾಯ ಕೋರಲು ಅಲಿಬಾಗ್‌ಗೆ ಹೋಗಬೇಕೆಂದಿದ್ದ ಯೋಚನೆಯನ್ನು ಕೈಬಿಟ್ಟಳು. ಶ್ರೀಮಂತರೂ, ಕಾರು ಹೊಂದಿದವರೂ ಹಾಗೂ ಸಹಾಯ ಮಾಡಬಲ್ಲವರೂ ಆದ ಡಿಸಿಲ್ವಾರವರಿಂದಲೇ ಸಹಾಯ ಕೇಳಲು ನಿರ್ಧರಿಸಿದಳು. ಪ್ರಯತ್ನಿಸಿ, ಸಹಾಯ ಪಡೆಯುತ್ತೇನೆ ಎಂದು ಭಾವಿಸಿ-ದಳು.

ಬಂಗಲೆಯಲ್ಲಿ ಕಸ ಗುಡಿಸಿ ಮೂಲೆ ಮೂಲೆಗಳಲ್ಲಿದ್ದ ಜೇಡರ ಬಲೆಗಳನ್ನು ತೆಗೆದು, ಅಡಿಗೆಗಾಗಿ ಬಾವಿಯಿಂದ ನೀರು ಸೇದಿದ ನಂತರ ಸಿಡುಕು ಮುಖದಿಂದ ಅವಳ ಕೆಲಸವನ್ನೇ ನೋಡುತ್ತಿದ್ದ ಅಡಿಗೆಯವನನ್ನು ಕೇಳಿದಳು, ''ಅವರು ಇಲ್ಲಿ ಎಷ್ಟು ದಿನ ಇರುತ್ತಾರೆ?''

''ಒಂದು ಹದಿನೈದು ದಿನ ಇರುವುದಾಗಿ ಹೇಳುತ್ತಿದ್ದಾರೆ'' ಅವನು ಗೊಣಗುಟ್ಟುತ್ತಾ ಹೇಳಿದ, ''ಇದು ಅವರ ವಿಶ್ರಾಂತಿಯ ಕಾಲ. ಶಾಲೆಗಳನ್ನು ಮುಚ್ಚಲಾಗಿದೆ. ವಿದೇಶಕ್ಕೆ ಹೋಗುವ ಮುನ್ನ, ಮೊದಲು ಇಲ್ಲಿ ಹದಿನೈದು ದಿನ ಇರಲು ನಿರ್ಧರಿಸಿದರು. ಈ ಗೊಂಡಾರಣ್ಯದಲ್ಲಿ ಹೇಗೆ ನಿಭಾಯಿಸುವುದೋ, ಗೊತ್ತಾಗುತ್ತಿಲ್ಲ. ಅಂಗಡಿಗಳೆಲ್ಲಿವೆ ಎಂದು ನಾನು ಅವರನ್ನು ಕೇಳಿದೆ. ನಿನ್ನ ತಮ್ಮ ನಮಗಾಗಿ ಸಾಮಾನುಗಳನ್ನು ತಂದುಕೊಡುತ್ತಿದ್ದ. ಅವನು ಇಲ್ಲಿಲ್ಲವೆಂದು ಹೇಳುವೆ. ಬ್ರೆಡ್, ತಾಜಾ ಮೊಟ್ಟೆಗಳು ಮತ್ತು ಕಾಯಿಪಲ್ಲೆ ಎಲ್ಲಿ ಸಿಗುತ್ತವೆ? ನಾನು ಹೇಗೆ ನಿಭಾಯಿಸುತ್ತೇನೊ? ಆದರೆ ಅವರು ಖುಷಿಯಾಗಿ ಕಾಲ ಕಳೆಯುತ್ತಿರುವಾಗ ಹೇಗೋ ನಿಭಾಯಿಸಬೇಕು'' ಎಂದು ತೆಂಗಿನ ಮರದ ಕೆಳಗೆ ಹಾಕಿಕೊಂಡು ಕುಳಿತುಕೊಳ್ಳಲು ಬೆತ್ತದ ಕುರ್ಚಿಗಳನ್ನೂ, ಮೆತ್ತೆಗಳನ್ನೂ ಒಯ್ಯುತ್ತಿದ್ದ ಕುಟುಂಬದ ಸದಸ್ಯರನ್ನು ನೋಡುತ್ತಾ ಅವನು ಹೇಳಿದ. ಸಣ್ಣ ಮಕ್ಕಳು ಆಟಿಕೆಯ ಬಕೆಟ್‌ಗಳನ್ನೂ, ರಬ್ಬರ್ ಚೆಂಡುಗಳನ್ನೂ ಹಿಡಿದು ಓಡಾಡುತ್ತಿದ್ದರು.

ತನ್ನ ಹಿಮ್ಮಡಿಯ ಮೇಲೆ ಕುಳಿತಿದ್ದ ಲೀಲ, ಅಡಿಗೆಯವನನ್ನು ನೋಡುತ್ತಾ ಹೇಳಿದಳು, ''ನನ್ನ ತಂಗಿಯರು ಮತ್ತು ನಾನು ಸಹಾಯ ಮಾಡುತ್ತೇವೆ. ನಾವು ಪೇಟೆಗೆ ಹೋಗಿ, ನಿಮಗೆ ಬೇಕಾದ್ದನ್ನೆಲ್ಲಾ ತಂದು ಕೊಡುತ್ತೇವೆ. ಥುಲ್‌ನಲ್ಲೇ ಹೆಚ್ಚು ಕಡಿಮೆ ಎಲ್ಲ ಸಾಮಾನುಗಳೂ ಸಿಗುತ್ತವೆ. ಇಲ್ಲಿ ಸಿಗದ ಸಾಮಾನುಗಳನ್ನು ಕೊಳ್ಳಲು ನಿಮ್ಮ ಸಾಹೇಬರು ಕಾರ್‌ನಲ್ಲಿ ಅಲಿಬಾಗ್‌ಗೆ ಹೋಗಬಹುದು.''

''ಹೌದು, ಹಾಗೆಯೇ ಮಾಡಬೇಕು'' ಅವನು ಹೇಳಿದ, ''ಇಗೋ ಇಲ್ಲಿ ತರಕಾರಿಯಿದೆ. ಮಧ್ಯಾಹ್ನ ಊಟಕ್ಕಾಗಿ, ಅದನ್ನು ಚೆನ್ನಾಗಿ ತೊಳೆದು, ಸಿಪ್ಪೆ ತೆಗಿ. ಸಂಜೆ ನೀನು ಹೋಗಿ

ಸ್ವಲ್ಪ ಮೀನು ಕೊಂಡು ತರುತ್ತೀಯಾ? ನಾಳೆ ಬೆಳಗ್ಗೆ ಉಪಾಹಾರಕ್ಕಾಗಿ ಬ್ರೆಡ್‌ಗೇನು ಮಾಡುವುದು?''

''ಮೀನು ದೋಣಿಗಳು ಕಡಲ ದಂಡೆಗೆ ಬಂದಾಗ, ನಾನು ತಾಜಾ ಮೀನುಗಳನ್ನು ತರುತ್ತೇನೆ.'' ಲೀಲ ಆಶ್ವಾಸನೆ ನೀಡಿದಳು, ''ನಮ್ಮ ಪೇಟೆಯಲ್ಲಿ ಸ್ವಲ್ಪ ಬ್ರೆಡ್ ಸಿಗುತ್ತದೆ. ಆದರೆ ಕಾರ್ಖಾನೆಯಲ್ಲಿ ತಯಾರಾದ ನಗರದ ಬ್ರೆಡ್ ಬೇಕಾದರೆ ನಿಮ್ಮ ಸಾಹೇಬರೇ ಅಲಿಬಾಗ್‌ಗೆ ಹೋಗಿ ಕೊಳ್ಳಬೇಕಾಗುತ್ತದೆ.''

''ಹೌದು, ಹಾಗೇ ಮಾಡಬೇಕು. ನಾನು ಈಗಲೇ ಹೋಗಿ ಅವರಿಗೆ ತಿಳಿಸುತ್ತೇನೆ.'' ಎಂದು ಅಡಿಗೆಯವ ಹೇಳಿದ.

ಆದರೆ ದೀರ್ಘವಾದ ದೂಳಿನ ರಸ್ತೆಯಲ್ಲಿ ಕಾರ್ ಓಡಿಸಿ, ಇದೀಗ ಬಂದು ವಿರಮಿಸಿ-ಕೊಳ್ಳುತ್ತಿದ್ದ ಮಿ. ಡಿಸಿಲ್ವಾಗೆ, ಮತ್ತೆ ಕಾರ್‌ನಲ್ಲಿ ಕುಳಿತು ಮುಂದಿನ ಪಟ್ಟಣಕ್ಕೆ ಹೋಗುವ ಮನಸ್ಸಿರಲಿಲ್ಲ. ಅವರಾಗಲೇ ಸ್ನಾನದ ಉಡುಪು ಧರಿಸಿ, ಈಜಾಡಲು ಕಡಲ ತೀರಕ್ಕೆ ಹೊರಟಿದ್ದರು. ಈಜು ಉಡುಪುಗಳನ್ನು ಧರಿಸಿದ್ದ ಕುಟುಂಬದ ಇತರರೂ ಅಲೆಗಳ ಮೇಲೆ ಬಿದ್ದು, ನೀರನ್ನು ಚಿಮ್ಮಿಸುತ್ತಾ, ನಗುತ್ತಾ ಕಿರಿಚಾಡುತ್ತಿದ್ದರು. ಅವರ ಸುಂದರವಾದ ಹೊಂಬಣ್ಣದ ನಾಯಿ, ದಂಡೆಯಲ್ಲಿ ಜಿಗಿದಾಡುತ್ತಾ, ಬೊಗುಳುತ್ತಾ, ಮರಳನ್ನು ಚಿಮ್ಮಿಸುತ್ತಾ ತನ್ನತ್ತ ನೊರೆ ಕಾರುತ್ತಾ ಬರುತ್ತಿದ್ದ ಅಲೆಗಳಿಂದ ದೂರಕ್ಕೆ ದೌಡಾಯಿಸು-ತ್ತಿತ್ತು.

ಅಡಿಗೆಯವನು ಅವರುಗಳನ್ನು ನೋಡುತ್ತಾ ಗೊಣಗಿದ.

''ಅವರನ್ನು ನೋಡು, ಇದಕ್ಕಾಗಿಯೇನು ಅವರು ಅಷ್ಟು ದೂರದಿಂದ ಬರುವುದು? ಅವರು ಮನೆಯಲ್ಲೇ ಸುಖವಾಗಿ ಸ್ನಾನ ಮಾಡಬಹುದು. ಹೂಂ. ಹುಚ್ಚರು, ನಿಜವಾಗಿ ಹುಚ್ಚರು.''

ಮರು ದಿನ ಬ್ರೆಡ್ ಮುಗಿದು ಹೋದಾಗ ಮಿ. ಡಿಸಿಲ್ವಾ ಕಾರ್‌ನಲ್ಲಿ ಹೋಗಿ ಸಾಕಷ್ಟು ಬ್ರೆಡ್ ತರುವುದು ಅಗತ್ಯವಾಯಿತು. ಅವರು ಅಡಿಗೆಯವನಿಗೆ ಹೇಳಿದರು, ''ನಿನಗೆ ಬೇಕಾಗಿರುವುದನ್ನೆಲ್ಲಾ ತಿಳಿಸು. ನಾನು ಇಂದು ಅಲಿಬಾಗ್‌ಗೆ ಹೋಗಿ ಎಲ್ಲವನ್ನೂ ತರುತ್ತೇನೆ. ನೀನು ಪದೇ ಪದೇ ನನಗೆ ತೊಂದರೆ ಕೊಡಬೇಡ.''

ಈ ಮಾತು ಕೇಳಿದ ಲೀಲ, ಅಡಿಗೆ ಮನೆಯಿಂದ ಹೊರಗೆ ಬಂದು ಡಿಸಿಲ್ವಾರ ಮುಂದೆ ಕೈ ಮುಗಿದು ನಿಂತು ಸಂಕೋಚದಿಂದ ಕೆಳಗೆ ನೋಡುತ್ತಾ, ತನ್ನ ಮನಸ್ಸಿನಲ್ಲಿ ಮಾಡಿಕೊಂಡ ನಿರ್ಧಾರವನ್ನು ಅವರಿಗೆ ತಿಳಿಸಿದಳು, ''ಸಾಹೇಬರೇ ನನ್ನ ತಾಯಿಯನ್ನು ಅಲಿಬಾಗ್‌ನ ಆಸ್ಪತ್ರೆಗೆ ಕರೆದೊಯ್ಯಬಲ್ಲಿರಾ? ನೀವು ಕಾರಿನಲ್ಲಿ ಹೋಗುವುದಾದರೆ ಅವಳು ಮತ್ತು ನಾನು ನಿಮ್ಮ ಜೊತೆ ಬರಬಹುದೆ? ಆಕೆ ತುಂಬಾ ಅಸ್ವಸ್ಥಳಾಗಿದ್ದಾಳೆ. ಇಲ್ಲಿ ವೈದ್ಯರೂ ಇಲ್ಲ, ಆಸ್ಪತ್ರೆಯೂ ಇಲ್ಲ.''

ಮಿ. ಡಿಸಿಲ್ವಾ ಗಲಿಬಿಲಿಗೊಂಡರು. ಅವರಿಗೆ ಏನು ಹೇಳಬೇಕೆಂಬುದು ತೋಚದೆ ಸ್ವಲ್ಪ ತೊದಲಿದರು. ಅಷ್ಟರಲ್ಲೇ ಅವರ ಹೆಂಡತಿ ವರಾಂಡದಿಂದ ಧಾವಿಸಿ ಬಂದು ಲೀಲಳ ಮಾತನ್ನು ಕೇಳುತ್ತಾ ನಿಂತಳು. ''ನಿನ್ನ ತಾಯಿ ಅಸ್ವಸ್ಥಳಾಗಿದ್ದಾಳೆಂದು ನನಗೇಕೆ ಹೇಳಲಿಲ್ಲ?'' ಎಂದಳು. ''ನಾನು ಸದಾ ನನ್ನ ಜೊತೆ ಕೆಲವೊಂದು ಔಷಧಗಳನ್ನು ತರುತ್ತೇನೆ. ನಾನು

ನಿಮಗೆ ಸಹಾಯ ಮಾಡಬಹುದಿತ್ತು.''

ಲೀಲ ಅವಳತ್ತ ಕೃತಜ್ಞತೆಯಿಂದ ನೋಡಿ ಹೇಳಿದಳು, ''ನಮ್ಮ ತಾಯಿ ತುಂಬಾ ದಿನದಿಂದ ಅಸ್ವಸ್ಥಳಾಗಿದ್ದಾಳೆ. ಅವಳು ತುಂಬ ತೆಳ್ಳಗಾಗಿದ್ದು, ದುರ್ಬಲಳಾಗಿದ್ದಾಳೆ. ಅವಳಿಗಾಗಿ ಯಾವ ಔಷಧ ತರಬೇಕೆಂಬುದೂ ನನಗೆ ತಿಳಿಯದು. ವೈದ್ಯರು ಅವಳನ್ನು ಪರೀಕ್ಷಿಸಬೇಕು. ಅಲಿಬಾಗ್‌ನಲ್ಲಿ ಒಂದು ಆಸ್ಪತ್ರೆಯಿದೆ. ನೀವು ಅವಳನ್ನು ಕರೆದುಕೊಂಡು ಹೋಗಬಹುದೆಂದು ನಾನು ಯೋಚಿಸಿದೆ. ನಾನು ನಿಮ್ಮಲ್ಲಿ ಕೆಲಸ ಮಾಡುತ್ತೇನೆ. ನೀವು ನನಗೆ ಕೊಡುವ ದುಡ್ಡನ್ನು ...ಊಂ... ವೈದ್ಯರಿಗಾಗಿ ಮತ್ತು ಔಷಧಕ್ಕಾಗಿ ಕೊಡುತ್ತೇನೆ.''

''ಹೂಂ, ಇರಲಿ'' ಮಿ.ಡಿಸಿಲ್ವಾ ಸ್ವಲ್ಪ ಕೋಪದಿಂದಲೇ ಗುಡುಗಿದರು, ''ಆಗಲಿ... ಔಷಧಕ್ಕಾಗಿ ನಾವು ಹಣ ಕೊಡುತ್ತೇವೆ. ಹೋಗು, ನಿನ್ನ ತಾಯಿಯನ್ನು ಕರೆದುಕೊಂಡು ಬಾ.''

* * *

ಆ ದಿನವಂತೂ ಲೀಲಳಿಗೆ ಅತ್ಯಂತ ಭಾವೋದ್ವೇಗದ ದಿನವಾಗಿತ್ತು. ಈ ಉದ್ವೇಗದ ಜೊತೆ ದಣಿವು ಮತ್ತು ಚಿಂತೆಯಿರದಿದ್ದಲ್ಲಿ ಆ ದಿನ ಅವಳಿಗೆ ಸಂತೋಷದಾಯಕ ದಿನವಾಗುತ್ತಿತ್ತೇನೋ. ಅಲಿಬಾಗ್ ಕೇವಲ ಎರಡು ಮೈಲಿ ದೂರವಿದ್ದರೂ ಲೀಲ ಅಲ್ಲಿಗೆ ಹೋಗುವುದೇ ಅಪರೂಪವಾಗಿತ್ತು. ಮೋಟಾರ್ ಕಾರಿನಲ್ಲಂತೂ ಅವಳು ಎಂದೂ ಕುಳಿತೇ ಇರಲಿಲ್ಲ. ಆದರೂ ಅವಳು ಕಾರ್‌ನಲ್ಲಿ ಕುಳಿತಾಗ ಅವಳಿಗೆ ತನ್ನ ತಾಯಿಯದೇ ಚಿಂತೆಯಾಗಿತ್ತು. ಹಿಂದಿನ ಆಸನದಲ್ಲಿ ತಾಯಿ, ಲೀಲಳ ತೊಡೆಯ ಮೇಲೆ ತಲೆಯಿಟ್ಟುಕೊಂಡು ನರಳುತ್ತಾ ಮಲಗಿದ್ದಳು. ತುಂಬ ಕಾಂತಿಹೀನಳೂ, ಅಸ್ವಸ್ಥಳೂ ಆಗಿದ್ದ ತಾಯಿಯನ್ನು ನೋಡಿ, ಲೀಲಳಿಗೆ, ಜೀವಂತವಾಗಿ ಅವಳನ್ನು ಅಲಿಬಾಗ್‌ಗೆ ಕರೆದೊಯ್ಯುವುದು ಸಾಧ್ಯವೇ ಎಂಬ ಚಿಂತೆಯುಂಟಾಗಿತ್ತು. ತಾಯಿಯ ತಲೆಯನ್ನು ಕೈಯಲ್ಲಿ ಹಿಡಿದಿದ್ದು, ಮತ್ತೊಂದು ಕೈಯಲ್ಲಿ, ಅವಳ ಹೊದಿಕೆಯನ್ನು ಎಳೆದು ಸಿದ್ಧಪಡಿಸುತ್ತಿದ್ದ ಲೀಲಳಿಗೆ, ರಸ್ತೆಯಲ್ಲಿ ಕಿಟಿಕಿಯಾಚೆ ನೋಡುವಷ್ಟು- ಹಾದು ಹೋಗುವಾಗ ಕಾಣುವ ಮರಗಳನ್ನಾಗಲಿ ಅಥವಾ ಎತ್ತಿನ ಗಾಡಿಗಳನ್ನಾಗಲಿ, ಬಸ್ ನಿಲ್ದಾಣಗಳನ್ನಾಗಲಿ ನೋಡುವಷ್ಟು ವ್ಯವಧಾನವಿರಲಿಲ್ಲ. ಲೀಲಳ ತಾಯಿಯನ್ನು ಸರಿಯಾದ ಸಮಯಕ್ಕೆ ಆಸ್ಪತ್ರೆ ಮುಟ್ಟಿಸುವುದು ಸಾಧ್ಯವಾಗದೇನೋ ಎಂಬಂತೆ ಮಿ.ಡಿಸಿಲ್ವಾ ಅಗಲವಾದ ಮತ್ತು ನಿಶ್ಯಬ್ದವಾದ ರಸ್ತೆಯಲ್ಲಿ ಹೋಗುತ್ತಿದ್ದರು.

ಮಿ. ಡಿಸಿಲ್ವಾ ತನ್ನ ಜೊತೆ ಇರದೆ, ತನಗೆ ಸಹಾಯ ಮಾಡಿರದಿದ್ದರೆ ಏನು ಮಾಡಬೇಕೆಂದು ತಿಳಿಯದೆ ತಾನು ಅಸಹಾಯಕಳಾಗುತ್ತಿದ್ದೇನೆಂದು ಲೀಲ ಭಾವಿಸಿದಳು. ''ಇಲ್ಲೇ ಇರು. ಒಂದು ಸ್ಟ್ರೆಚರ್ ಮತ್ತು ನರ್ಸ್‌ಗಳನ್ನು ಕರೆತರುತ್ತೇನೆ. ವೈದ್ಯರೊಡನೆ ಮಾತನಾಡುತ್ತೇನೆ''ಎಂದು ಮಿ.ಡಿಸಿಲ್ವಾ ಹಿಂಭಾಗದ ಕಿಟಿಕಿಯಲ್ಲಿ ಹೇಳಿದರು. ದಾಪುಗಾಲು ಹಾಕುತ್ತಾ, ವರಾಂಡದಲ್ಲಿ ಸಂಯಮದಿಂದ ಕಾಯುತ್ತಾ ನಿಂತಿದ್ದ ಹಳ್ಳಿ ಜನರ ಸಾಲುಗಳನ್ನು ದಾಟಿ ಮುನ್ನಡೆದರು.

ಅವರು ಎಲ್ಲ ಏರ್ಪಾಡುಗಳನ್ನೂ ಮಾಡಿದರು. ಸ್ವಲ್ಪ ಸಮಯದಲ್ಲೇ ಬಿಳಿ ಸಮವಸ್ತ್ರ ಧರಿಸಿದ್ದ ಇಬ್ಬರು, ಸ್ಟ್ರೆಚರ್‌ನೊಡನೆ ಬಂದು, ಲೀಲಳ ತಾಯಿಯನ್ನು ಮೆತ್ತಗೆ ಅದರ ಮೇಲೆ ಮಲಗಿಸಿ ಒಳಗೆ ಕರೆದೊಯ್ದರು. ಶಾಲು, ಟವೆಲ್, ಬಾಚಣಿಗೆ ಮತ್ತು ಲೋಟದ ಸಣ್ಣ

ಗಂಟೆನೊಡನೆ ಲೀಲ ಅವರ ಹಿಂದೆಯೇ ಓಡಿದಳು. ಅವಳು ಮೆಟ್ಟಿಲುಗಳನ್ನು ಹತ್ತಿ, ವರಾಂಡದ ಮೂಲಕ ತನ್ನ ತಾಯಿಯನ್ನು ಕರೆದುಕೊಂಡು ಹೋದ ವಾರ್ಡಿನೊಳಗೆ ಹೋದಳು. ಅಲ್ಲಿ ಎರಡು ಸಾಲಿನಲ್ಲಿ ಹಾಸಿಗೆಗಳನ್ನು ಹಾಕಲಾಗಿತ್ತು. ಫ್ಯಾನ್ ತಿರುಗುತ್ತಿತ್ತು. ಆ ಕೊಠಡಿ ತಂಪಾಗಿತ್ತು. ಕಿಟಕಿಯ ಬಾಗಿಲುಗಳಿಗೆ ಬಳಿದಿದ್ದ ಹಸಿರು ಬಣ್ಣದಿಂದಾಗಿ ಸ್ವಲ್ಪ ಕತ್ತಲೆಯೆನಿಸುತ್ತಿತ್ತು. ಸ್ಟ್ರೆಚರ್‌ನಿಂದ ಅವಳ ತಾಯಿಯನ್ನೆತ್ತಿ ಒಂದು ಹಾಸಿಗೆಯ ಮೇಲೆ ಮಲಗಿಸಿದರು. ಒಬ್ಬ ನರ್ಸ್ ಧಾವಿಸಿ ಬಂದು ಅವಳಿಗೆ ಹಿತವಾಗುವಂತೆ ಮಾಡಿದಳು.

''ಇಲ್ಲೇ ಕಾಯುತ್ತಿರು. ನಾನು ವೈದ್ಯರೊಡನೆ ಮಾತನಾಡುತ್ತೇನೆ. ನಂತರ ನಿನ್ನನ್ನು ಮನೆಗೆ ಕರೆದೊಯ್ಯುತ್ತೇನೆ'' ಎಂದು ಮಿ. ಡಿಸಿಲ್ವಾ ಹೇಳಿದರು. ಲೀಲ, ಒಪ್ಪಿಗೆಯೊಡನೆ ತಲೆಯಾಡಿಸಿದಳು. ಭೀತಿ ಮತ್ತು ಅಧೈರ್ಯದಿಂದ ಕಂಪಿಸುತ್ತಾ ಅವಳು ಹಾಸಿಗೆಯ ಪಕ್ಕದಲ್ಲಿ ಕುಳಿತಳು. ''ಅಷ್ಟೊಂದು ಗಾಬರಿಯಾಗಬೇಡ'' ನರ್ಸ್ ನಗುತ್ತಾ ಹೇಳಿ, ಹೊದಿಕೆಯನ್ನು ಎಳೆದು ಸರಿಪಡಿಸಿ, ಹಾಸಿಗೆಯ ಪಕ್ಕದಲ್ಲಿ ಸಣ್ಣ ಮೇಜಿನ ಮೇಲೆ ಸಾಮಾನುಗಳನ್ನು ಸರಿಯಾಗಿ ಜೋಡಿಸಿಟ್ಟಳು. ''ನಾವು ಆಕೆಯನ್ನು ನೋಡಿಕೊಳ್ಳುತ್ತೇವೆ. ನಮ್ಮಲ್ಲಿ ತುಂಬಾ ಸಮರ್ಥ ವೈದ್ಯರಿದ್ದಾರೆ. ನೀನು ಯಾವುದೇ ರೀತಿ ಚಿಂತಿಸಬೇಡ.''

ವೈದ್ಯರು ಬಂದು ಲೀಲಳ ತಾಯಿಯನ್ನು ಪರೀಕ್ಷಿಸಿದರು. ಅವಳು ಕಣ್ಣನ್ನೂ ತೆರೆದಿರಲಿಲ್ಲ, ಮಾತೂ ಆಡಿರಲಿಲ್ಲ. ಹೊದಿಕೆಯನ್ನು ಹೊದ್ದು, ಚಲಿಸದೆ, ಕಾಂತಿಹೀನಳಾಗಿ ಮಲಗಿದ್ದಳು. ವೈದ್ಯರು ಡಿಸಿಲ್ವಾರಿಗೆ ಇಂಗ್ಲಿಷ್‌ನಲ್ಲಿ ಏನೋ ಹೇಳುತ್ತಿದ್ದನ್ನು ಅರ್ಥ ಮಾಡಿಕೊಳ್ಳಲು ಪ್ರಯತ್ನಿಸುತ್ತಾ ಲೀಲ ತನ್ನ ತುಟಿಯನ್ನು ಕಡಿಯುತ್ತಾ ನಿಂತಿದ್ದಳು. ಸ್ವಲ್ಪ ಸಮಯದ ನಂತರ ವೈದ್ಯರು ಅವಳತ್ತ ತಿರುಗಿ ಮರಾಠಿಯಲ್ಲಿ ಹೇಳಿದರು, ''ಆಕೆಯನ್ನು ಇಲ್ಲೇ ನಮ್ಮಲ್ಲಿ ಬಿಟ್ಟಿರು. ಅವಳು ಅತ್ಯಂತ ಕೃಶಳಾಗಿದ್ದು, ಅವಳನ್ನು ಗುಣಪಡಿಸಲು ತುಂಬ ಸಮಯ ಬೇಕಾಗುತ್ತದೆ. ಅವಳ ಕಾಯಿಲೆ ಏನೆಂಬುದನ್ನು ತಿಳಿಯಲು ಅನೇಕ ಪರೀಕ್ಷೆಗಳನ್ನು ಮಾಡಬೇಕಾಗುತ್ತದೆ. ಹಲವಾರು ದಿನಗಳು ಬೇಕಾಗುತ್ತದೆ. ನಾವು ನಿನಗೆ ವರದಿಯನ್ನು ಕಳಿಸುತ್ತೇವೆ ಅಥವಾ ನೀನೇ ಒಂದು ವಾರ ಬಿಟ್ಟು ಬಂದು ಅದನ್ನು ತೆಗೆದುಕೊಳ್ಳಬಹುದು. ಆದರೆ ಯೋಚಿಸಬೇಡ. ಗುಣಪಡಿಸಲಾಗದಷ್ಟು ಅವಳ ದೇಹ ಸ್ಥಿತಿಯೇನೂ ವಿಷಮಿಸಿಲ್ಲ.''

ಲೀಲ, ತಾಯಿಯ ಮುಖವನ್ನು ನೋಡಿದಳು. ಅವಳನ್ನು ಬಿಟ್ಟು ಹೋಗಲು ಅವಳಿಗೆ ಮನಸ್ಸಿರಲಿಲ್ಲ. ಆದರೆ, ಮಿ. ಡಿಸಿಲ್ವಾ ಹೇಳಿದರು, ''ನೀನು ಬರಲೇಬೇಕು, ಮನೆಯಲ್ಲಿ ನಿನ್ನ ತಂಗಿಯರಿದ್ದಾರೆ. ಆದ್ದರಿಂದ ಬರಲೇಬೇಕು. ಕೆಲವು ದಿನಗಳ ನಂತರ ನಿನ್ನನ್ನು ಮತ್ತೆ ಇಲ್ಲಿಗೆ ಕರೆತರುತ್ತೇನೆ. ಇದೊಂದು ಆಶ್ವಾಸನೆ, ಬಾ.''

ಆತನೊಡನೆ ವಾದ ಮಾಡುವಷ್ಟು ಧೈರ್ಯ ಲೀಲಳಿಗೆ ಇರಲಿಲ್ಲ. ಆದ್ದರಿಂದ ಅವಳು ಅವರನ್ನು ಹಿಂಬಾಲಿಸಿ ಕಾರಿನತ್ತ ಹೋದಳು. ಮನೆಗೆ ಹೋಗುವ ಮಾರ್ಗದುದ್ದಕ್ಕೂ ಒಂದೇ ಸಮನೆ ಅಳುತ್ತಿದ್ದಳು.

* * *

ಅಂದು ರಾತ್ರಿ ಅವಳಪ್ಪ ಗುಡಿಸಿಲನ್ನು ಬಿಡುವ, ಮುನ್ನ ಒಲೆಗೆ ಬೆಂಕಿ ಹೊತ್ತಿಸಲು ಕಡ್ಡಿಗಳನ್ನು ಗೀರುತ್ತಿದ್ದ ಲೀಲಳನ್ನು ಬಿರುಗಣ್ಣಿನಿಂದ ನೋಡಿ, ಕೋಪದಿಂದ ಗುರುಗುಟ್ಟುತ್ತಾ

ಕೇಳಿದ, ''ನಿಮ್ಮಮ್ಮ ಎಲ್ಲಿಗೆ ಹೋಗಿದ್ದಾಳೆ?''

''ಅಲಿಬಾಗ್ ಆಸ್ಪತ್ರೆಗೆ ಸೇರಿಸಿದೆ'' ಇನ್ನೂ ಮುಂಗಾಲ ಮೇಲೇ ಕುಳಿತಿದ್ದು, ತಲೆಯೆತ್ತಿ ನೋಡಲು ಧೈರ್ಯವಾಗದೆ ಲೀಲ ಮೆಲ್ಲಗೆ ಹೇಳಿದಳು.

ಮರವೊಂದು ಇನ್ನೇನು ಮುರಿದು ಬೀಳುವುದೋ ಎಂಬಂತೆ ಅವನು ಅವಳ ಬಳಿಯೇ ತೂರಾಡುತ್ತಾ, ಭಯಂಕರ ರೀತಿಯಲ್ಲಿ ಗರ್ಜಿಸಿದ. ಬೆಂಕಿಯ ಸಣ್ಣ ಜ್ವಾಲೆಗಳ ಎದುರಿನಲ್ಲಿ ಅವನ ನೆರಳು, ಗೋಡೆಯ ಮೇಲೆ ರಾಕ್ಷಸಾಕಾರವಾಗಿ ಬಿದ್ದಿತ್ತು. ''ನನ್ನನ್ನು ಕೇಳದೆಯೆ ಆವಳನ್ನು ಏಕೆ ಸೇರಿಸಿದೆ?'' ಅವನು ಆರ್ಭಟಿಸಿದ.

''ಅಪ್ಪ, ನೀವು... ನೀವು ನಿದ್ರಿಸುತ್ತಿದ್ದಿರಿ''ಲೀಲ ಮೆತ್ತಗೆ ಹೇಳಿದಳು.

ಅವನಿಂದ ಮತ್ತೊಂದು ಗರ್ಜನೆ ಹೊರಬಂದಿತು, ''ನನ್ನನ್ನು ಕೇಳದೆಯೆ ಅವಳನ್ನೇಕೆ ಕರೆದುಕೊಂಡು ಹೋದೆ? ನಾನು ಅಲಿಬಾಗ್‌ಗೆ ಹೋಗುತ್ತೇನೆ. ಅವಳನ್ನು ಪತ್ತೆ ಹಚ್ಚುತ್ತೇನೆ. ಅವಳೊಬ್ಬಳನ್ನೇ ಬಿಡಲಾಗದು. ಥೂ, ಪೆದ್ದು ಹುಡುಗಿ.''

''ಅಪ್ಪ, ನರ್ಸುಗಳು ಮತ್ತು ವೈದ್ಯರು ಅಮ್ಮನನ್ನು ನೋಡಿಕೊಳ್ಳುತ್ತಾರೆ.'' ಅವನು ಆಸ್ಪತ್ರೆಗೆ ಹೋಗಿ, ಕುಡಿದು ದೊಡ್ಡ ರಾದ್ಧಾಂತವನ್ನೇ ಮಾಡಬಹುದೆಂದು ಲೀಲ ಹೆದರಿದಳು.

''ನನಗೆ ಎದುರುತ್ತರ ಕೊಡಬೇಡ'' ಅವನು ಅರಚಿದ, ''ನಿನಗೆ ಯಾವ ವಿಷಯ ಗೊತ್ತು, ಏನು ಗೊತ್ತು? ಎಲ್ಲವನ್ನೂ ನಾನೇ ನಿರ್ವಹಿಸಬಲ್ಲೆ ಎಂಬ ಸೊಕ್ಕು ನಿನಗೇಕೆ ಬಂತು? ನಿನ್ನ ಕೈಲೇನೂ ಆಗದು'' ಎಂದು ಹೇಳಿ, ಕೋಪದಿಂದ ನೀರು ತುಂಬಿಟ್ಟಿದ್ದ ಮಡಕೆಯೊಂದನ್ನು ಝಾಡಿಸಿ ಒದ್ದ. ಅದು ರಭಸದಿಂದ ಬಿದ್ದು ಒಡೆದು, ಅಡಿಗೆ ಮನೆಯಲ್ಲೆಲ್ಲಾ ನೀರು ಹರಿಯಿತು. ಇದರಿಂದ ಮತ್ತಷ್ಟು ಕೋಪಗೊಂಡ ಅವನು ಮಡಕೆಯ ಚೂರುಗಳನ್ನು ತುಳಿಯುತ್ತ ಪುಡಿ ಮಾಡಿದ. ''ಅವಳೊಬ್ಬಳನ್ನೇ ಬಿಟ್ಟು ಹೇಗೆ ಬಂದೆ? ಅವಳು ನಾನೆಲ್ಲಿ ಎಂದು ಕೇಳಿದರೆ ಹೇಗೆ? ಈ ಯೋಚನೆಗಳು ನಿನ್ನ ತಲೆಯೊಳಗೆ ಬರಲಿಲ್ಲವಾ?'' ಎಂದು ಅವನು ಆರ್ಭಟಿಸಿ, ಕಪಾಟಿನ ಮೇಲಿದ್ದ ಮಡಕೆಗಳ ಪೈಕಿ ಒಂದನ್ನು ತೆಗೆದುಕೊಂಡು, ತಲೆ ಬಾಗಿಸಿ ಕುಳಿತಿದ್ದ ಲೀಲಳ ಪಕ್ಕದಲ್ಲಿ ಕುಕ್ಕಿದ. '' ಬೇಗ ಸ್ವಲ್ಪ ಅಡುಗೆ ಮಾಡು.... ಅವಳಿಗೆ ತೆಗೆದುಕೊಂಡು ಹೋಗುತ್ತೇನೆ.''

''ಈಗ ತುಂಬ ಹೊತ್ತಾಗಿದೆ, ಅಪ್ಪ'' ಲೀಲ ಅಳುತ್ತಾ ಹೇಳಿದಳು.

''ಈಗ ಅಷ್ಟೇನೂ ಹೊತ್ತಾಗಿಲ್ಲ, ಮತ್ತೆ ಎದುರಾಡಬೇಡ'' ಎಂದು ಕೂಗಿ ಕಪಾಟಿನಲ್ಲಿದ್ದ ಲೋಟಗಳ ಸಾಲನ್ನೇ ಬಾಚಿ ಕೆಳಗುರುಳಿಸಿದ. ''ಈ ಕೂಡಲೇ ಅಡುಗೆ ಮಾಡು. ಅಲಿಬಾಗ್‌ನಲ್ಲಿರುವ ಅವಳಿಗೆ ಒಯ್ಯುತ್ತೇನೆ'' ಎಂದು ಅವನು ಆರ್ಭಟಿಸಿ, ಮನೆಯ ಸುತ್ತ ರಭಸದಿಂದ ಚಲಿಸುತ್ತಾ, ಸಿಕ್ಕಿದ ವಸ್ತುಗಳನ್ನು ಚೆಲ್ಲಾಡಲಾರಂಭಿಸಿದ. ಲೀಲ, ತ್ವರಿತವಾಗಿ ಚಪಾತಿ ಹಿಟ್ಟನ್ನು ಒತ್ತಿ ಬೇಯಿಸಲಾರಂಭಿಸಿದಳು. ಅವಳ ಕಣ್ಣುಗಳಲ್ಲಿ ನೀರು ಹರಿಯುತ್ತಿದ್ದು, ಕಣ್ಣು ಮಂಜಾಗಿತ್ತು. ಅಡಿಗೆ ಮಾಡಲು ಮನೆಯಲ್ಲಿ ಸಾಮಾನುಗಳೇ ಇರಲಿಲ್ಲ. ಆದರೂ ಊಟದ ಸಣ್ಣ ಬುತ್ತಿಯೊಂದನ್ನು ಕಟ್ಟಿ ಅದನ್ನು ತಂದೆಗೆ ಕೊಟ್ಟಳು. ಅವನು ಕತ್ತಲ ಹಾದಿಯಲ್ಲಿ ಬಿರುಸಾಗಿ ನಡೆಯುತ್ತಾ, ಎಲ್ಲರನ್ನೂ ಬೈಯುತ್ತಾ, ಥುಲ್‌ನ ಎಲ್ಲ ಬೀದಿ ನಾಯಿಗಳೂ ಬೊಗಳುವಂತೆ ಮಾಡಿದ.

ತತ್‌ಕ್ಷಣದಲ್ಲಿ ಲೀಲಳಿಗೆ ಏನೋ ನೆನಪಿಗೆ ಬಂತು. ಅಡಿಗೆ ಮನೆಯ ಗೋಡೆಯ

ಮೇಲಿದ್ದ ಲಾಂಧ್ರವನ್ನು ಮೊಳೆಯಿಂದ ಹೊರ ತೆಗೆದು, ಕೊರಕಲ ಮೇಲಿನ ದಿಮ್ಮಿಯತ್ತ ಓಡುತ್ತಾ ಕೂಗಿದಳು, '' ಅಪ್ಪಾ! ಅವರು.. ಖಾನೇಕರ್ ಸೋದರರು ಮತ್ತೆ ಬಂದು ಹಣ ಕೇಳಿದರೆ ನಾನೇನು ಮಾಡಲಿ?''

ಆ ಕತ್ತಲಲ್ಲಿ ತನ್ನ ಅಪ್ಪನ ಮುಖವಾಗಲಿ, ಅವನ ಪ್ರತಿಕ್ರಿಯೆಯಾಗಲಿ ಅವಳಿಗೆ ಕಾಣಲಿಲ್ಲ. ಆದರೆ ಅವನು ಅಲ್ಲೇ ಕ್ಷಣಕಾಲ ನಿಂತದ್ದು ಗೊತ್ತಾಯಿತು. ಅವನು ತೂರಾಡುತ್ತಾ, ತನ್ನ ತಲೆಯ ಮೇಲೆ ಕೈ ಆಡಿಸುತ್ತಾ ಆರ್ಭಟಿಸಿದ, ''ಏನು ಮಾಡುವುದು?... ಹೂಂ, ಮನೆ ಬಾಗಿಲಿಗೆ ಕಾಲಿರಿಸದಂತೆ ಹೇಳು, ಗೊತ್ತಾಯಿತಾ?''

''ಅಪ್ಪ,'' ಲೀಲ ಅಳುತ್ತಾ ಗದ್ಗದ ಧ್ವನಿಯಲ್ಲಿ ಹೇಳಿದಳು, ''ಹೆಂಡಕ್ಕಾಗಿ ನೀನು ಅವನಿಗೆ ಹಣ ಕೊಡಲಿಲ್ಲವೆಂಬ ಕಾರಣದಿಂದ ಹೋದ ಸಲ ಅವನು ಪಿಂಟೋವನ್ನು ಕೊಂದು ಹಾಕಿದ......''

''ಅದು ಸುಳ್ಳು! ನಾನು ಯಾರಿಗೂ ಹಣ ಕೊಡಬೇಕಾಗಿಲ್ಲ'' ಎಂದು ಅವನು ಆರ್ಭಟಿಸಿ, ಪೈನ್ ಮರಗಳ ತೋಪಿನೊಳಗೆ ಪಿಶಾಚಿಯಂತೆ ತೂರಾಡುತ್ತಾ ಹೊರಟ. ನಂತರ ಸ್ವಲ್ಪ ಮೆದು ಧ್ವನಿಯಲ್ಲಿ ಹೇಳಿದ, ''ನಾನು ಅವರ ಮನೆಗೆ ಹೋಗಿ ಹಣ ಕೊಡುತ್ತೇನೆ. ನಿನ್ನ ಸೋದರ ಹಿಂದಿರುಗಿ ಬರುವ ತನಕ ನಿಮ್ಮನ್ನು ನೋಡಿಕೊಳ್ಳುವಂತೆ, ಮುದುಕಿ ಹೀರಾಬಾಯಿಗೆ ಹೇಳುತ್ತೇನೆ. ಅವನು ಹಾಳಾಗಿ ಹೋಗಲಿ, ಎಲ್ಲಿ ಆ ಕತ್ತೆ?'' ಎಂದು ಬೈಯುತ್ತಾ ತೋಪಿನೊಳಗೆ ನುಗ್ಗಿ ಖಾನೇಕರ್ ಅವರ ಮನೆಯತ್ತ ಹೊರಟ.

ಜಗಳದ ಶಬ್ದ ಕೇಳಿಬರಬಹುದೆಂದು, ಲೀಲ ಭೀತಿಯಿಂದ ನಿಂತಿದ್ದಳು. ಆದರೆ ಯಾವ ಶಬ್ದವೂ ಬರಲಿಲ್ಲ. ರಾತ್ರಿಯ ಆ ಹೊತ್ತಿನಲ್ಲಿ ಖಾನೇಕರ್ ಸೋದರರು ಮನೆಯಲ್ಲಿ-ರುವುದಿಲ್ಲ. ಹೊರಟು ಹೋಗಿರುತ್ತಾರೆ ಎಂಬುದು ಅವಳ ಅರಿವಿಗೆ ಬಂತು. ಬಹುಶಃ ಹೀರಾಬಾಯಿ ಮಾತ್ರ ಮನೆಯಲ್ಲಿರಬಹುದು. ಅವಳು ಖಂಡಿತ ಆ ಗಂಡಸರಷ್ಟು ಕೆಟ್ಟವಳಲ್ಲ. ಲೀಲ ತನ್ನ ಗುಡಿಸಿಲಿಗೆ ಹಿಂದಿರುಗಿದಳು. ತನ್ನಪ್ಪ ಕುಡಿಯುವುದಕ್ಕಾಗಿ ಸೀದಾ ಪಡಖಾನೆಗೆ ಹೋಗಿರುತ್ತಾನೆಂಬುದು ಅವಳಿಗೆ ಖಂಡಿತವಾಗಿತ್ತು.

* * *

ಆದರೆ ಮರುದಿನವಾಗಲಿ ಆನಂತರದ ದಿನವಾಗಲಿ ಅವನು ಬರಲಿಲ್ಲ. ತಾಯಿಯನ್ನು ನೋಡಿ ವರದಿಗಳನ್ನು ಪಡೆಯುವ ಸಲುವಾಗಿ, ಮಿ. ಡಿಸಿಲ್ವಾ ಅವರ ಜೊತೆ ಲೀಲ ಹೋದಾಗ, ವಾರ್ಡಿನ ಹೊರಗಡೆ ವರಾಂಡದಲ್ಲಿ ಅಪ್ಪ ಕುಳಿತಿದ್ದದ್ದು ನೋಡಿ ಅವಳಿಗೆ ಗಾಬರಿಯಾಯಿತು. ಅವರು ಬರುತ್ತಿದ್ದುದನ್ನು ನೋಡಿದ ಅವನು ಎದ್ದು ಬಾಗಿಲ ಪಕ್ಕದಲ್ಲಿ ಮೌನವಾಗಿ ನಿಂತ. ಲೀಲ ಅವನನ್ನು ಹಾದುಹೋದಾಗ, ಮೊದಲ ಸಲ, ಅವನಿಂದ ಹೆಂಡದ ವಾಸನೆ ಬರುತ್ತಿರಲಿಲ್ಲವೆಂಬುದನ್ನು ಅರಿತಳು. ಅವನ ಬಿಳಿ ಕೂದಲು, ವೃದ್ಧಾಪ್ಯ ಹಾಗೂ ಬಾಗಿದ ಬೆನ್ನನ್ನು ಕಂಡು ಅವಳಿಗೆ ಮೊದಲ ಬಾರಿಗೆ ಅವನ ಮೇಲೆ ಕರುಣೆಯುಂಟಾಯಿತು. ತಾಯಿಯನ್ನು ನೋಡಲು ಲೀಲ ಒಳಗೆ ಹೋದಳು. ಸ್ನಾನಮಾಡಿ ಸ್ವಚ್ಛವಾದ ಉಡುಪು ಧರಿಸಿದ್ದ ತಾಯಿ ಹಾಸಿಗೆಯ ಮೇಲೆ ಎಚ್ಚರವಾಗಿ ಮಲಗಿದ್ದುದನ್ನು ನೋಡಿದಳು.

ಅಲ್ಲಿಗೆ ಬಂದ ನರ್ಸ್ ಅಲ್ಲೇ ನಿಂತು ಲೀಲಳತ್ತ ನೋಡಿ ನಸುನಗುತ್ತಾ, ''ನೋಡಿ-ದೆಯಾ, ನಿನ್ನ ತಾಯಿ ಇನ್ನೂ ಇಲ್ಲೇ ಇದ್ದಾಳೆ. ನಾವು ಅವಳನ್ನು ಬಚ್ಚಿಟಲ್ಲ. ಅವಳೀಗ

ಚೆನ್ನಾಗಿ ಕಾಣುವುದಿಲ್ಲವೆ? ಅವಳು ತನ್ನ ಔಷಧವನ್ನು ಸೇವಿಸುತ್ತಿದ್ದಾಳೆ, ಗುಣಮುಖಳಾಗು-ತ್ತಿದ್ದಾಳೆ'' ಅಂದಳು.

ಲೀಲ ಕುಳಿತು ತನ್ನ ತಾಯಿಯ ಕೈ ಹಿಡಿದು ನೆಮ್ಮದಿಯಿಂದ ಮುಗುಳ್ನಕ್ಕಳು. ಅವಳ ತಾಯಿಯೂ ಪ್ರತಿಯಾಗಿ ನಸುನಕ್ಕಳು.

ವರದಿಗಳನ್ನು ಪಡೆಯಲು ಮಿ.ಡಿಸಿಲ್ವಾ ವೈದ್ಯರ ಬಳಿಗೆ ಹೋದರು. ಮನೆಗೆ ಹಿಂದಿರುಗುತ್ತಿದ್ದಾಗ ಅವರು ಹೇಳಿದರು, ''ನಿನ್ನ ತಾಯಿ ರಕ್ತಹೀನತೆಯಿಂದ ನರಳುತ್ತಿದ್ದಾಳೆ. ಅದು ಸಾಕಷ್ಟು ತೀವ್ರವಾಗಿಯೇ ಇರುವುದಾಗಿ ವೈದ್ಯರು ಹೇಳಿದರು. ಅವಳನ್ನು ಸರಿಯಾದ ಸಮಯಕ್ಕೆ ಇಲ್ಲಿಗೆ ಕರೆತಂದದ್ದು ಒಳ್ಳೆಯದಾಯಿತು. ಈಗಾಗಲೇ ಅನೇಕ ಪರೀಕ್ಷೆಗಳನ್ನು ನಡೆಸಿದ್ದಾರೆ, ಎಕ್ಸ್‌ರೇ, ರಕ್ತ ಪರೀಕ್ಷೆ ಇತ್ಯಾದಿ. ಅವಳಿಗೆ ಕ್ಷಯದ ಸೋಂಕು ಇದ್ದುದನ್ನು ಅವರು ಗಮನಿಸಿದ್ದಾರೆ. ಅದಿನ್ನೂ ಪ್ರಾರಂಭಾವಸ್ಥೆಯಲ್ಲಿದ್ದು, ಅದನ್ನು ಔಷಧಗಳಿಂದಲೇ ಗುಣಪಡಿಸಬಹುದು. ಅವರು ಕಾಯಿಲೆಗೆ ಇಂಜಕ್ಷನ್‌ಗಳನ್ನೂ, ಒಳ್ಳೆಯ ಆಹಾರವನ್ನೂ, ನೀಡುತ್ತಿದ್ದಾರೆ. ಅವಳು ಖಂಡಿತ ಗುಣಮುಖಳಾಗುತ್ತಾಳೆ. ಆದರೆ, ಅದಕ್ಕೆ ಸಮಯ ಬೇಕಾಗುವುದೆಂದು ವೈದ್ಯರು ಹೇಳುತ್ತಾರೆ. ಇನ್ನೂ ಸ್ವಲ್ಪ ಕಾಲ ಅವರ ಸುಪರ್ದಿನಲ್ಲೇ ಬಿಟ್ಟಿರುವುದು ಒಳ್ಳೆಯದು. ಇಲ್ಲೇ ಇದ್ದು ಅವಳನ್ನು ನೋಡಿಕೊಳ್ಳುವುದಾಗಿ ನಿಮ್ಮಪ್ಪ ಹೇಳಿದ, ಸರಿಯಾ?''

ಜಾರುವ ಆಸನದಲ್ಲಿ ಕುಳಿತಾಗಲಿ, ಓಲಾಡುವ ಕಾರಿನ ಚಲನೆಯ ಅಭ್ಯಾಸವಾಗಲಿ ಇಲ್ಲದಿದ್ದ ಲೀಲ, ಹಿಂದಿನ ಆಸನದಲ್ಲಿ ಸ್ವಲ್ಪ ವಕ್ರವಾಗಿಯೇ ಕುಳಿತಿದ್ದು, ಅವರ ಮಾತಿಗೆ ತಲೆಯಾಡಿಸಿ, ಒಪ್ಪಿಗೆ ಸೂಚಿಸಿದಳು. ಸಾವಿರಾರು ಯೋಚನೆಗಳು ತಲೆಯನ್ನು ತಿನ್ನುತ್ತಿದ್ದು, ಮುಖ ಕಪ್ಪಿಟ್ಟು ಹೋಗಿದ್ದ ಅವಳು ಒಪ್ಪುವುದು ಬಿಟ್ಟು ಮತ್ತೇನನ್ನೂ ಮಾಡುವಂತಿರಲಿಲ್ಲ.

ವಿಂಡ್ ಸ್ಕ್ರೀನ್ ಪಕ್ಕದಲ್ಲಿದ್ದ ಕನ್ನಡಿಯಲ್ಲಿ ಮಿ. ಡಿಸಿಲ್ವಾ ಅವಳನ್ನು ನೋಡುತ್ತಾ, ''ಅಷ್ಟೊಂದು ಚಿಂತಿಸಬೇಡ''ಎಂದು ಅನುಕಂಪದಿಂದ ಹೇಳಿದರು. ''ನಿಮ್ಮಪ್ಪ ಆಸ್ಪತ್ರೆಯಲ್ಲೇ ಇರಲು ಇಷ್ಟಪಟ್ಟಿದ್ದರಿಂದ ಅವನ ಊಟಕ್ಕಾಗಿ ಸ್ವಲ್ಪ ದುಡ್ಡನ್ನು ಅವನಿಗೆ ಕೊಟ್ಟಿದ್ದೇನೆ. ಇದೊಂದು ಉಚಿತವಾದ ಆಸ್ಪತ್ರೆಯಾಗಿದ್ದು, ಔಷಧಗಳಿಗೆ ಮಾತ್ರ ನಾವು ದುಡ್ಡು ಕೊಡಬೇಕು. ನಮಗಾಗಿ ಕೆಲಸ ಮಾಡುತ್ತಿರುವ ನಿನಗೆ ಮತ್ತು ನಿನ್ನ ತಂಗಿಯರಿಗೆ ಸ್ವಲ್ಪ ಹಣ ಕೊಡುತ್ತೇನೆ. ಇದರಿಂದ ನಿಮ್ಮ ಮನೆಯ ವಹಿವಾಟನ್ನೂ ನಿರ್ವಹಿಸಿಕೊಂಡು ಹೋಗಬಹುದು.''

''ಆದರೆ,.... ನೀವು ಸದ್ಯದಲ್ಲೆ ಹೊರಟು ಹೋಗುವಿರಿ'' ಲೀಲ ಮೆಲ್ಲಗೆ ಹೇಳಿದಳು.

''ಹೌದು, ನಾವು ಹೋಗುತ್ತೇವೆ. ಆದರೆ ನಮ್ಮ ಗೆಳೆಯನೊಬ್ಬ ಕೆಲವು ತಿಂಗಳುಗಳ ಕಾಲ 'ಮೊನ್ ರಿಪೊಸ್'ನಲ್ಲಿ ವಾಸಿಸಲು ಮುಂಬೈನಿಂದ ಬರುತ್ತಾನೆ. ಅವನು ಒಬ್ಬನೇ ಇರುತ್ತಾನೆ.ನಮ್ಮ ಸೇವಕನನ್ನು ನಮ್ಮೊಡನೆಯೇ ಕರೆದುಕೊಂಡು ಹೋಗುವುದರಿಂದ, ತನ್ನನ್ನು ನೋಡಿಕೊಳ್ಳಲು ಅವನಿಗೆ ಒಬ್ಬ ಸೇವಕನ ಅಗತ್ಯವಿದೆ. ನೀನು ಬಂಗಲೆಯನ್ನು ಗುಡಿಸಿ, ಸಾರಿಸಿ, ಅವನಿಗಾಗಿ ಅಡಿಗೆ ಮಾಡಿದರೆ, ಅವನು ನಿನಗೆ ಪಗಾರ ಕೊಡುತ್ತಾನೆ.''

''ಏನು, ಕೆಲವು ತಿಂಗಳೆ? '' ಲೀಲ ನಂಬಲಾಗದೆ ಆಶ್ಚರ್ಯದಿಂದ ಕೇಳಿದಳು.'ಮೊನ್ ರಿಪೊಸ್'ನಲ್ಲಿ ಯಾರೂ ಹೆಚ್ಚು ದಿನ ಇರುತ್ತಿರಲಿಲ್ಲ. ''ಆದರೆ ಮುಂಗಾರು ಪ್ರಾರಂಭವಾಗು-

ವುದಿಲ್ಲ?''

''ಹೌದು, ಅವನು ಮುಂಗಾರು ಕಾಲದಲ್ಲಿ ಧುಲ್‌ನಲ್ಲಿರಲು ಇಷ್ಟಪಡುತ್ತಾನೆ. ಅವನು ಒಂದು ರೀತಿಯ ಅಧ್ಯಯನ... ಹೂಂ,....ನಿನಗೇ ಗೊತ್ತಾಗುತ್ತದೆ ಬಿಡು. ಅವನೊಬ್ಬ ವಿಚಿತ್ರ ಮನುಷ್ಯ'' ಎಂದು ನಗುತ್ತಾ ಹೇಳಿದ ಮಿ. ಡಿಸಿಲ್ವಾ ರಸ್ತೆಯಲ್ಲಿ ಎದುರಿಗೆ ಬರುತ್ತಿದ್ದ ಎತ್ತಿನ ಗಾಡಿಯೊಂದಕ್ಕೆ ಢಿಕ್ಕಿ ಹೊಡೆಯುವುದನ್ನು ತಪ್ಪಿಸಲು ಕಾರನ್ನು ಸರಕ್ಕನೆ ಪಕ್ಕಕ್ಕೆ ತಿರುಗಿಸಿದರು. ನಂತರ, ಕಾರು, ಮತ್ತೆ ರಸ್ತೆಯಲ್ಲಿ ನೇರವಾಗಿ ಓಡಲಾರಂಭಿಸಿದಾಗ ಹೇಳಿದರು, ''ಆದ್ದರಿಂದ ಯೋಚನೆ ಮಾಡಬೇಡ. ನಿನಗೆ ಕೆಲಸವಿರುತ್ತದೆ, ನೀನೂ ಹಣವನ್ನು ಗಳಿಸುತ್ತಿರುತ್ತಿ. ಆಸ್ಪತ್ರೆಯಲ್ಲಿ ನಿನ್ನ ತಾಯಿಯನ್ನು ನೋಡಿಕೊಳ್ಳಲಾಗುತ್ತಿದೆ. ಇದಕ್ಕೆ ಗಮನ ಕೊಡಲು ನಿನ್ನ ತಂದೆ ಅಲ್ಲಿದ್ದಾನೆ'' ಎಂದು ಹೇಳಿ ಎಲ್ಲ ಸಮಸ್ಯೆಗಳೂ ಬಗೆ ಹರಿದವು ಎಂಬಂತೆ ಹರ್ಷದಿಂದ ಸಿಳ್ಳು ಹೊಡೆಯಲಾರಂಭಿಸಿದರು. ಲೀಲಳಿಗೆ ನಂಬಿಕೆ ಬರುತ್ತಿರಲಿಲ್ಲ. ಅವಳು ಕಿಟಕಿಯಾಚೆ ನೋಡುತ್ತಾ ಬಿಸಿಲಿನಿಂದ ಕಂದು ಬಣ್ಣಕ್ಕೆ ತಿರುಗಿದ್ದ ಬರಡು ಭೂಮಿಯತ್ತ ನೋಡುತ್ತಾ ತಮ್ಮ ಭವಿಷ್ಯ ಎಂತಿರಬಹುದೆಂಬ ಬಗ್ಗೆ ಚಿಂತಿಸುತ್ತಿದ್ದಳು. ಹರಿ ಹೊರಟು ಹೋದಾಗಿನಿಂದ ಎಲ್ಲವೂ ಅನಿಶ್ಚಿತವಾಗಿತ್ತು.

ಹರಿಯ ನೆನಪು ಬಂದಾಗ, ಅವಳಿಗೆ ಅವನನ್ನು ನೋಡಬೇಕೆಂಬ ಹಂಬಲವುಂಟಾಯಿತು. ಕಣ್ಣುಗಳಲ್ಲಿ ನೀರಿಳಿಯಲಾರಂಭಿಸಿತು. ಅವಳ ಬೆರಳುಗಳು ಒಂದಕ್ಕೊಂದು ಹೆಣೆದು-ಕೊಂಡಿದ್ದವು. ಇದನ್ನು ಅರಿತನೇನೊ ಎಂಬಂತೆ, ಅವಳು ಕಾರಿನಿಂದ ಇಳಿಯುತ್ತಿದ್ದಾಗ ಕೊರಕಲ ಮೇಲಿನ ದಿಮ್ಮಿಯ ಮೇಲೆ ನಿಂತಿದ್ದ ಬೇಲ ಮತ್ತು ಕಮಲ ಹಳದಿ ಪೋಸ್ಟ್ ಕಾರ್ಡನ್ನು ಎತ್ತಿ ಅಲ್ಲಾಡಿಸುತ್ತಾ ಕೂಗಿದರು, ''ಹರಿಯದು! ಹರಿ, ಕಾರ್ಡ್ ಬರೆದಿದ್ದಾನೆ!''

''ಹರಿ?'' ಲೀಲ ಕೂಗುತ್ತಾ ಕಾರಿನಿಂದ ಹೊರಗೆ ಹಾರಿ ಅವರತ್ತ ಓಡಿದಳು. ''ಅವನೆಲ್ಲಿದ್ದಾನೆ? ಅವನೇನು ಮಾಡುತ್ತಿದ್ದಾನೆ?''

# 9

ಶ್ರೀಕೃಷ್ಣ ಖಾನಾವಳಿಯ ಅಡಿಗೆ ಮನೆಯಲ್ಲಿನ ಕೆಲಸ ಸುಲಭವಾದದ್ದೇನಲ್ಲ. ಅಲ್ಲಿ ಧಗೆ ಹೆಚ್ಚುತ್ತಲೇ ಇರುವಂತೆ ತೋರುತ್ತಿತ್ತು. ರಾತ್ರಿಯ ವೇಳೆ ಸಹ ತಂಪಾಗುತ್ತಿರಲಿಲ್ಲ. ಖಾನಾವಳಿಯನ್ನು ಯಾವಾಗಲೂ ಮುಚ್ಚುತ್ತಿರಲಿಲ್ಲ. ಗಿರಾಕಿಗಳಿಗೆ ಚಹಾ ಮತ್ತು ಬ್ರೆಡ್, ಇಲ್ಲವೆ ರೊಟ್ಟಿ ಮತ್ತು ಕಾಳುಗಳನ್ನು, ಅವರ ಬೇಡಿಕೆಗಳಿಗೆ ಅನುಗುಣವಾಗಿ, ಹಗಲು ರಾತ್ರಿ ಪೂರೈಸಬೇಕಾಗಿತ್ತು. ದಿನಕ್ಕೆ ಒಂದು ರೂಪಾಯಿಯಂತೆ ಕೊಡುವುದಾಗಿ ಹೇಳಿದ್ದ ಜಗು, ತನ್ನ ಮಾತನ್ನು ಉಳಿಸಿಕೊಂಡಿದ್ದ. ಒಂದು ವಾರಕ್ಕೆ ಏಳು ರೂಪಾಯಿಗಳು ! ಕೆಲಸದಲ್ಲಿ ಹೊಸಬ-ನಾಗಿದ್ದ ಬಾಲಕನಿಗೆ ಅದು ಒಳ್ಳೆಯ ವೇತನವೇ. ಹರಿ ಅದಕ್ಕಾಗಿ ಆಭಾರಿಯಾಗಿದ್ದ. ಅವನು ಉಚಿತವಾಗಿ ಊಟ ಮಾಡುತ್ತಿದ್ದುದರಿಂದ ತಾನು ಉಳಿಸಿದ ಹಣವನ್ನೆಲ್ಲಾ ತನ್ನ ಮನೆಗೆ ಒಯ್ಯಬಹುದಾಗಿತ್ತು. ತನ್ನ ಕುಟುಂಬಕ್ಕಾಗಿ ಉಳಿಸುತ್ತಿದ್ದ ಹಣದ ಬಗ್ಗೆ ಅವನಿಗೆ ಹೆಮ್ಮೆಯೆ-ನಿಸಿತ್ತು. ದಿನದ ಕೆಲಸ ಮುಗಿದ ಕೂಡಲೇ ಖಾನಾವಳಿಯಿಂದ ತನ್ನ ಮನೆಗೆ ಹೋಗ-ಲಾಗದಿದ್ದುದು ಅವನಿಗೆ ವ್ಯಥೆಯುಂಟು ಮಾಡಿತ್ತು. ಅವನು ಹಗಲಿರುಳೂ ಖಾನಾವಳಿಯಲ್ಲೇ ಇರಬೇಕಾಗಿತ್ತು, ಅವನ ಕೆಲಸ ಅಡುಗೆ ಮನೆಯಲ್ಲೊ, ಮುಂದಿನ ಕೊಠಡಿಯಲ್ಲೊ ಇರುತ್ತಿತ್ತು. ಹಿಂದಿನ ನಲ್ಲಿಯೊಂದರಲ್ಲಿ ಬಟ್ಟೆ ಒಗೆದುಕೊಂಡು ಸ್ನಾನ ಮಾಡುತ್ತಿದ್ದ. ಯಾರೂ ಗಿರಾಕಿಗಳಿಲ್ಲದಿದ್ದಾಗ, ಟೇಬಲ್ ಮುಂದೆ ಕುಳಿತು ಊಟ ಮಾಡುತ್ತಿದ್ದ. ಬೆಂಚಿನ ಮೇಲೋ, ಇಲ್ಲವೆ ದೂಳು ತುಂಬಿದ ಕಪ್ಪುನೆಲದ ಮೇಲೋ ಮಲಗಿ ನಿದ್ರಿಸುತ್ತಿದ್ದ. ಇದೇ ಎಲ್ಲದ್ದಕ್ಕಿಂತ ಕಷ್ಟ ಎನಿಸಿತ್ತು.

ಹೊರಗೆ ಇಡೀ ರಾತ್ರಿಯೆಲ್ಲಾ ವಾಹನ ಸಂಚಾರ. ಬಸ್‌ಗಳ ಸಂಚಾರ ನಿಂತರೂ, ರೇಲ್ವೆ ಸ್ಟೇಷನ್ ಮತ್ತು ಗೋದಾಮುಗಳಿಂದ ಮಾರುಕಟ್ಟೆಗೆ ಸಾಮಾನುಗಳನ್ನು ಒಯ್ಯುತ್ತಿದ್ದ ಕೈಗಾಡಿಗಳು ಕಟಕಟ ಶಬ್ದ ಮಾಡಿಕೊಂಡು ಓಡಾಡುತ್ತಿದ್ದವು. ಸದಾ ಕಾರುಗಳು ಮತ್ತು ಟ್ಯಾಕ್ಸಿಗಳು ಭುರ್‍ರೆಂದು ಶಬ್ದ ಮಾಡಿಕೊಂಡು ಹೋಗುತ್ತಿದ್ದವು. ಸಿನೆಮಾ ಮಂದಿರಗಳು ತಮ್ಮ ಕೊನೆಯ ಆಟ ತೋರಿಸಿ ಮುಚ್ಚಲ್ಪಟ್ಟ ನಂತರ, ನೂರಾರು ಜನ ಹೊರಬಂದು ಕೂಗಾಡುತ್ತಾ, ಸಿನೆಮಾ ಹಾಡುಗಳನ್ನು ಗುನುಗುತ್ತಾ, ಕಾಗದದ ಕೊಂಬುಗಳನ್ನು ಮಾಡಿ ಜೋರಾಗಿ ಊದುತ್ತಾ ಹೋಗುತ್ತಿದ್ದರು. ನಗರದಲ್ಲಿ ಬೀದಿ ದೀಪಗಳನ್ನು ಆರಿಸುತ್ತಿರಲಿಲ್ಲ. ಇದರಿಂದ ಹರಿಯ ದಣಿದ ಕಣ್ಣುಗಳು, ಕಡಲ ತೀರದ ತನ್ನ ಹಳ್ಳಿಯಲ್ಲಿನ ಗಾಢ ಕತ್ತಲೆ ಮತ್ತು ಶಾಂತತೆಯನ್ನು ಹಂಬಲಿಸುತ್ತಿದ್ದವು. ಕಡಲಿನ ಮಂದವಾದ ಶಬ್ದಗಳು, ತೆಂಗಿನ ಮರಗಳಿಂದ ಬರುತ್ತಿದ್ದ ಸದ್ದು, ಕಾಲ ಕೆಳಗೆ ಸಿಗುತ್ತಿದ್ದ ಸ್ವಚ್ಛವಾದ ಮರಳು-ಇವೆಲ್ಲಾ ಕ್ರಮೇಣವಾಗಿ ಅವನ ಮನಸ್ಸಿನಿಂದ ಅಳಿಸಿ ಹೋಗುವಂತಿದ್ದವು. ಎಷ್ಟು ಸುದೀರ್ಘವಾದ ಸಮಯ,

ಎಷ್ಟೊಂದು ದೂರ ! ಒಂದು ಋತುವಿನ ಅವಧಿ, ಅಂದರೆ ಚಳಿಗಾಲದಿಂದ ಬೇಸಿಗೆಯ ನಡುವೆ ಕೆಲ ತಿಂಗಳು ಕಳೆದಿದ್ದರೂ ಇಡೀ ಜೀವನ ಇಲ್ಲೇ ಕಳೆದಿರುವೆನೇನೋ ಎಂದು ಅವನಿಗೆ ಅನಿಸಿತ್ತು.

ಅವನು ನಿದ್ರೆಯಿಲ್ಲದೆ ಕಾಯಿಲೆ ಬೀಳುತ್ತಿದ್ದನೇನೋ. ಒಂದು ರಾತ್ರಿ ನಿದ್ರೆ ಬರದಿದ್ದಾಗ ಅವನು ಎದ್ದು ಹೊರಗೆ ಹೋಗಿ ರಸ್ತೆಯ ಬದಿಯಲ್ಲಿ ಕುಳಿತುಕೊಂಡ. ತೀವ್ರ ಧಗೆ, ದುರ್ವಾಸನೆ ಮತ್ತು ಗಾಳಿಯಿಲ್ಲದೆ ಉಸಿರು ಕಟ್ಟಿಸುವಂತಹ ವಾತಾವರಣವಿದ್ದ ಖಾನಾವಳಿಗಿಂತ, ಹೊರಗೆ ಎಷ್ಟೋ ಹಿತವಾಗಿತ್ತು. ಮಾಡಿಕೊಡಲು ವಾಗ್ದಾನ ಮಾಡಿದ್ದ ಗಡಿಯಾರವೊಂದನ್ನು ಸರಿಪಡಿಸಲು ರಾತ್ರಿ ಬಹಳ ಹೊತ್ತಿನವರೆಗೆ ಕೆಲಸ ಮಾಡುತ್ತಿದ್ದ ವೃದ್ಧ ಗಡಿಯಾರದವ ತನ್ನ ಅಂಗಡಿಯನ್ನು ಮುಚ್ಚಿ ಹರಿಯ ಬಳಿಗೆ ಬಂದ. ''ಏನು ವಿಷಯ ಹರಿ? ನೀನು ಹುಷಾರಾಗಿದ್ದಿ ತಾನೆ?''

ಹರಿ, ಇಲ್ಲವೆನ್ನುವಂತೆ ತಲೆಯಾಡಿಸಿದ. ಆದರೆ ಮಾತನಾಡಲಿಲ್ಲ. ದಣಿವಿನಿಂದ ಮತ್ತು ನಿದ್ರೆಯಿಲ್ಲದ್ದರಿಂದ ಅವನಿಗೆ ಮಂಕು ಕವಿದಂತಾಗಿತ್ತು.

''ಒಳಗೆ ಮಲಗುವುದು ತುಂಬ ಕಷ್ಟ, ಅಲ್ಲವಾ? ಒಳಗೆ ತುಂಬ ಧಗೆ, ಗಾಳಿಯಿಲ್ಲದೆ ಉಸಿರು ಕಟ್ಟುವಂತಿರಬೇಕು, ಮುಂಗಾರು ಪ್ರಾರಂಭವಾಗುವ ಮುನ್ನ, ಈ ಮೇ, ಒಂದು ಕೆಟ್ಟ ತಿಂಗಳು'' ಗಡಿಯಾರದವ ಏದುಸಿರು ಬಿಡುತ್ತಾ ಹೇಳಿ, ತಲೆಯಿಂದ ಟೋಪಿ ತೆಗೆದು, ದೊಡ್ಡ ಹಸಿರು ಕರವಸ್ತ್ರದಿಂದ ತನ್ನ ಬೋಳು ಬುರುಡೆಯನ್ನು ಒರೆಸಿಕೊಂಡ. ''ನನ್ನ ಕೊಠಡಿಯೂ, ನನ್ನ ಅಂಗಡಿಯಷ್ಟೇ ಕೆಟ್ಟದಾಗಿದೆ. ಗ್ರಾಂಟ್‌ರೋಡ್ ಸ್ಟೇಷನ್ನಿನ ಎದುರಿಗಿರುವ ಆ ಕಟ್ಟಡಗಳ ಪೈಕಿ ಒಂದರಲ್ಲಿ ಮೇಲಂತಸ್ತಿನಲ್ಲಿ ನನ್ನ ಆ ಕೊಠಡಿಯಿದೆ'' ಎಂದು ತನ್ನ ಕೈವಸ್ತ್ರವನ್ನು ನಿಬಿಡವಾದ ಕೂಡು ರಸ್ತೆಯತ್ತ ಅಲ್ಲಾಡಿಸಿ, ಅದನ್ನು ಮಡಿಚಿ ತನ್ನ ಜೇಬಿನಲ್ಲಿಟ್ಟುಕೊಂಡ. ''ಏನು ಮಾಡಬೇಕೆಂದು ಹೇಳುತ್ತೇನೆ. ನೀನೇಕೆ ಪಾರ್ಕ್‌ಗೆ ಹೋಗಿ, ನಿದ್ರಿಸಬಾರದು? ಅಲ್ಲಿ ತಂಪಾಗಿರುತ್ತದೆ. ನನಗೂ ಅಲ್ಲಿಗೆ ಹೋಗಬೇಕೆಂಬ ಆಸೆಯೇನೋ ಇದೆ. ಆದರೆ ನನ್ನ ಬೆಕ್ಕು ಪಾಪ, ನನ್ನ ಮುದ್ದು ಮುದಿ ಬೆಕ್ಕು ನನಗಾಗಿ ಕಾಯುತ್ತಿರುತ್ತದೆ.'' ಎಂದು ತನಗೆ ತಾನೇ ನಗುತ್ತಾ ನಿಧಾನವಾಗಿ ನಡೆದು ಹೋದ.

***

ವೃದ್ಧ ಗಡಿಯಾರದವನ ಈ ಸಲಹೆಗೆ, ಹರಿ ಸದಾ ಕೃತಜ್ಞನಾಗಿರಬೇಕು. ಪಾರ್ಕ್, ಅವನ ಜೀವನ ವಿಧಾನವನ್ನೇ ಬದಲಿಸಿತು. ಅದೊಂದು ನಗರದ ಚಿಕ್ಕ ಪಾರ್ಕ್. ಅದು ಅಲ್ಲಲ್ಲಿ ಹುಲ್ಲಿನ ತೇಪೆಗಳನ್ನೂ, ಕಬ್ಬಿಣದ ಬೆಂಚುಗಳನ್ನೂ ಹೊಂದಿತ್ತು. ಕೆಂಪು, ಹಳದಿ ಮುಂತಾದ ಬಣ್ಣಗಳ ಚಿಕ್ಕ ಹೂಗಳ ಸಾಲುಗಳಿದ್ದವು. ಕೆಲವೊಂದು ತೆಂಗಿನ ಮರಗಳನ್ನೂ ಹೊಂದಿತ್ತು. ದೂಳಿನಿಂದ ಕೂಡಿದ ಒಂದು ಸಣ್ಣ ಚೌಕವೂ ಇತ್ತು. ಮಲಗಲು ಒಂದು ಬೆಂಚಿದ್ದು, ಕಾಣಲು ಮರಗಳಿದ್ದ, ನೋಡಲು ಕೆಲವು ಪಾರಿವಾಳಗಳು ಮತ್ತು ಕಾಗೆಗಳಿದ್ದ ನಗರವು ತಂಪಾಗುವುದೇ ಇಲ್ಲವೇನೊ ಅನ್ನುವಂತಿದ್ದು, ಏದುಸಿರು ಬಿಡುತ್ತಿದ್ದ ಲಕ್ಷಾಂತರ ನಗರವಾಸಿಗಳ ಬಿಸಿಯು-ಸಿರಿನಿಂದಾಗಿ ಹಗಲಿಗಿಂತ ರಾತ್ರಿಯೇ ಹೆಚ್ಚು ಕಲುಷಿತವಾಗಿದ್ದರೂ, ಈ ಪಾರ್ಕ್, ಖಾನಾವಳಿಯ ಅಡಿಗೆ ಮನೆಗಿಂತ ಎಷ್ಟೋ ಹಿತಕರವಾಗಿತ್ತು.

ಬೆಂಚಿನ ಹಲಗೆಗಳ ಮೇಲೆ ಮಲಗಿರುವಾಗ, ತನ್ನ ತಲೆಯ ಮೇಲೆ ದೂಳಿನಿಂದ ಕೂಡಿದ

ತೆಂಗಿನ ಮರದ ಹರಿದ ಗರಿಗಳೂ, ನಗರದ ದೂಳು ಮತ್ತು ಹೊಗೆಯನ್ನು ತೂರಿ ಹೊಳೆಯಲು ಪ್ರಯತ್ನಿಸುವಂತಿದ್ದ ಕೆಲವು ಉಜ್ವಲ ನಕ್ಷತ್ರಗಳೂ ಹರಿಗೆ ಕಾಣುತ್ತಿದ್ದವು. ಅವನು ಎದ್ದು ಕಾಲುಗಳನ್ನು ಬೆಂಚಿನ ಕೆಳಗಿಟ್ಟಾಗ, ಕಾಂಕ್ರಿಟ್ ಸಿಗದೆ ಮೆತ್ತನೆಯ ಹುಲ್ಲು ಸಿಗುತ್ತಿದ್ದದ್ದು ಮನಸ್ಸಿಗೆ ಮುದ ನೀಡುತ್ತಿತ್ತು.

ಆ ಪಾರ್ಕ್, ಖಾಕಿ ಉಡುಪು ಧರಿಸಿದ್ದ ಒಬ್ಬ ಯುವ ಪೋಲಿಸ್‌ನವನ ಸುಪರ್ದಿನಲ್ಲಿತ್ತು. ಹುರಿಗೊಳಿಸಿದ ದಪ್ಪನೆಯ ಮೀಸೆಬಿಟ್ಟುಕೊಂಡಿದ್ದ, ಕಂಕುಳಲ್ಲಿ ದಂಡವೊಂದನ್ನು ಸಿಕ್ಕಿಸಿ-ಕೊಂಡಿದ್ದ ಅವನು, ಪಾರ್ಕ್‌ಗೆ ಹೋಗಿ ಬರುವ ಜನರ ಮೇಲೆ ನಿಗಾ ಇಟ್ಟಿರುತ್ತಿದ್ದ. ಮೊದಲ ರಾತ್ರಿ, ಹರಿ, ನಿದ್ರಿಸಲು ಬೆಂಚಿನ ಮೇಲೆ ಮಲಗಿದ್ದಾಗ ಅಲ್ಲಿಗೆ ಬಂದು ಆರ್ಭಟಿಸಿದ, ''ಏಯ್ ಹುಡುಗ, ಏಳು, ಮನೆಗೆ ಹೋಗು. ಇದೇನು ಮಲಗುವ ಜಾಗವಲ್ಲ. ಬೇಗ ಏಳು, ಇಲ್ಲದಿದ್ದರೆ ನಿನ್ನನ್ನು ಪೋಲಿಸ್ ಠಾಣೆಗೆ ದಬ್ಬುತ್ತೇನೆ. ಅಲ್ಲಿ ನೀನು, ನಿನಗಿಷ್ಟ ಬಂದಷ್ಟು ಕಾಲ ಮಲಗಿ ನಿದ್ರಿಸಬಹುದು.''

ಖಾನಾವಳಿಯಲ್ಲಿ ದಿನವಿಡೀ ಕಷ್ಟಪಟ್ಟು ದುಡಿದು, ಇದೀಗ ಬೆಂಚಿನ ಮೇಲೆ ಕಾಲ್ಚಾಚಿ ಮಲಗಿ ನಿದ್ರಿಸುವ ಸುಖವನ್ನು ಎದುರು ನೋಡುತ್ತಿದ್ದ ಹರಿ, ಹತಾಶೆಯಿಂದ ಎದ್ದು ಕುಳಿತ.''ನನಗೆ ಹೋಗಲು ಯಾವ ಜಾಗವೂ ಇಲ್ಲ. ನಾನು ಇಲ್ಲಿಯೇ ಮಲಗುತ್ತೇನೆ.''

''ಏನು, ಹೋಗಲು ಯಾವ ಜಾಗವೂ ಇಲ್ಲ, ಅಲ್ಲವೆ? ನೀನು ಎಲ್ಲಿಗೆ ಹೋಗಬಹು-ದೆಂಬುದನ್ನು ನಾನು ನಿನಗೆ ತೋರಿಸಿ ಕೊಡುತ್ತೇನೆ'' ಎಂದು ಪೋಲಿಸಿನವನು ಜೋರಾಗಿ ಆರ್ಭಟಿಸುತ್ತಾ, ಹರಿಯ ತಲೆಯ ಮೇಲೆ ತನ್ನ ದಂಡವನ್ನು ಆಡಿಸುತ್ತಾ, ಇನ್ನೇನು ಅವನ ತಲೆಯ ಮೇಲೆ ಅದರಿಂದ ಬಡಿಯಬೇಕೆಂದಿದ್ದಾಗ, ತಮ್ಮ ಮುಂದೆ ವಾಕಿಂಗ್ ಸ್ಟಿಕ್ ಬಡಿಯುತ್ತಾ, ಅಲ್ಲೇ ನಡೆದು ಹೋಗುತ್ತಿದ್ದ ವೃದ್ಧ ಗೃಹಸ್ಥರೊಬ್ಬರು ಅಲ್ಲೇ ನಿಂತು, ಆ ಪೋಲಿಸನಿಗೆ ಹೇಳಿದರು

''ಪೋಲಿಸ್ ಸಾಹೇಬರೇ, ಈ ಬಡ ಹುಡುಗನನ್ನೇಕೆ ಹೆದರಿಸುತ್ತಿದ್ದೀರಿ? ಈ ನಗರದಲ್ಲಿ ದುಷ್ಟ ವ್ಯಕ್ತಿಗಳು ಬೇಕಾದಷ್ಟಿದ್ದಾರೆ. ಠಕ್ಕರು, ಕೊಲೆಗಡುಕರು, ಕಳ್ಳರು, ಜೂಜುಕೋರರು, ಕುಡುಕರು ಇತ್ಯಾದಿ. ನೀವೇಕೆ ಅವರ ಮೇಲೆ ಏರಿ ಹೋಗಬಾರದು? ಅಗೋ, ಆ ಮೂಲೆಯಲ್ಲಿ ಕುಳಿತು ಜೂಜಾಡುತ್ತಿರುವ ಕುಡುಕರಿಂದಲೇ ನೀವೇಕೆ ಈ ಕಾರ್ಯ ಪ್ರಾರಂಭಿಸಬಾರದು? ಈ ಮೊಹಲ್ಲಾದಲ್ಲಿ ವಾಸಿಸುತ್ತಿರುವ ನಮ್ಮ ಜೀವವನ್ನು ಅವರು ಅಭದ್ರಗೊಳಿಸಿದ್ದಾರೆ. ಅವರಿಂದಾಗಿ ನಾವು ಈ ಪಾರ್ಕಿಗೆ ಬರಲು ಹೆದರುವಂತಾಗಿದೆಯೇ ವಿನಹ, ಮನೆಯಿಲ್ಲದೆ, ಮಲಗಲು ಜಾಗವಿಲ್ಲದೆ ಬಂದಿರುವ ಈ ಹುಡುಗನಿಂದಲ್ಲ'' ಎಂದು ತಿಳಿಸಿದರು.

ಪೋಲಿಸಿನವನಿಗೆ ಏನು ಮಾಡಬೇಕೆಂದು ತೋಚದೆ, ಅಲ್ಲೇ ನಿಂತು ಮೀಸೆ ಕಡಿಯುತ್ತಾ, ''ಆಂ..ಹೂಂ''ಎಂದು ಗೊಣಗಿದ. ದೊಡ್ಡ ಕೆಲಸ ಮಾಡಬೇಕಿರುವಾಗ, ಅಂದರೆ, ನಗರದ ನಿಜವಾದ ಅಪರಾಧಿಗಳನ್ನು ದಂಡಿಸಬೇಕಿರುವಾಗ ಈ ಚಿಕ್ಕ ಹುಡುಗನನ್ನು ಹೆದರಿಸುತ್ತಿದ್ದುದು ಅವನಿಗೇ ಅಪಮಾನವಾದಂತಾಗಿತ್ತು. ''ಹೂಂ!'' ಎಂದು ಅವನು ಮತ್ತಷ್ಟು ಜೋರಾಗಿ ಹೂಂಕರಿಸಿದ. ''ಆ ಜನರಾರು? ಅವರೆಲ್ಲಿದ್ದಾರೆ? ಹೋಗಿ ವಿಚಾರಿಸಿಕೊಳ್ಳೇನೆ'' ಎಂದು ಹೇಳಿ ಅಲ್ಲಿಂದ ಹೊರಟು ಹೋದ. ಆ ವೃದ್ಧ ಒಳಗೊಳಗೇ ನಗುತ್ತಾ, ಹರಿಯುತ್ತ



ಕಣ್ಣುಟುಕಿಸಿ, ತಮ್ಮ ಕೋಲನ್ನು ಶಬ್ದಮಾಡಿಕೊಂಡು ಮುಂದೆ ನಡೆದು ಹೋದರು.

ಅದಾದ ನಂತರ, ಹರಿ ತನ್ನ ಕೆಲಸ ಮುಗಿಸಿಕೊಂಡು ಪ್ರತಿ ರಾತ್ರಿ ಪಾರ್ಕಿಗೆ ಬಂದಾಗ, ಆ ಪೋಲಿಸಿನವನು ಅವನಿಗೆ ಶುಭ ಕೋರುತ್ತಿದ್ದ. ಹರಿಗೆ ತಾನು ಸುರಕ್ಷಿತನೆಂಬ ಭಾವನೆ ಬಂದಿತು. ಅಲ್ಲದೆ ತಾನು ನಿದ್ರಿಸುತ್ತಿರುವಾಗ ತನ್ನನ್ನು ಕಾಯಲು ಒಬ್ಬ ಪೋಲಿಸಿನ-ವನಿದ್ದಾನೆಂಬ ದೊಡ್ಡಸ್ತಿಕೆಯ ಭಾವನೆಯೂ ಉಂಟಾಗಿತ್ತು.

* * *

ಬೆಳಗ್ಗೆ ಅವನು ಕಣ್ಣುಗಳನ್ನು ತೆರೆದಾಗ, ಕೊಳೆಯಾದ ಬೂದು ಬಣ್ಣದ ಆಕಾಶದಲ್ಲಿ ಪಾರಿವಾಳಗಳು ರಭಸದಿಂದ ಹಾರಾಡುತ್ತಿದ್ದುದನ್ನು ಕಂಡ. ಅವು ಗುಂಪು ಗುಂಪಾಗಿ ಕೆಳಗೆ

ಹಾರಿಬಂದು, ಪಾರ್ಕಿನ ಮಧ್ಯಭಾಗದಲ್ಲಿದ್ದ ಪ್ರತಿಮೆಯೊಂದರ ಮೇಲೆ ಕುಳಿತು-ಕೊಳ್ಳುತ್ತಿದ್ದವು. ಒಬ್ಬ ವ್ಯಕ್ತಿ ಅವುಗಳತ್ತ ಧಾನ್ಯಗಳನ್ನು ಚೆಲ್ಲುತ್ತಿದ್ದ. ಅವು ತಮ್ಮ ಕಡುಗೆಂಪು ಹೆಜ್ಜೆಗಳ ಮೇಲೆ ಕುಪ್ಪಳಿಸುತ್ತಾ ಕಾಳುಗಳನ್ನು ಹೆಕ್ಕಿ ತಿನ್ನುತ್ತಾ ಜಗಳವಾಡುತ್ತಿದ್ದುದನ್ನು ಕಂಡು ಹರಿಗೆ ಹರ್ಷವಾಯಿತು. ಹೀಗೆ ಪ್ರತಿ ದಿನ ಆ ವ್ಯಕ್ತಿ ಅಲ್ಲಿಗೆ ಬಂದು, ಪಾರಿವಾಳಗಳಿಗಾಗಿ ಕಾಳು ಹಾಕುತ್ತಿದ್ದ. ಅವು ಆ ಕಾಳುಗಳನ್ನು ತಿಂದು ಹೊಟ್ಟೆ ತುಂಬಿಸಿಕೊಳ್ಳುತ್ತಿದ್ದವು. ಅಂತೆಯೇ ಬಿಳಿ ಸೀರೆಯುಟ್ಟ ವೃದ್ಧ ವಿಧವೆಯೊಬ್ಬಳು, ಒಂದು ಚೀಲದಲ್ಲಿ ಹಿಟ್ಟನ್ನು ತುಂಬಿಕೊಂಡು ಪಾರ್ಕಿಗೆ ಬಂದು, ಹಾದಿಯುದ್ದಕ್ಕೂ ಇದ್ದ ಇರುವೆಯ ಗೂಡುಗಳಿಗೆ ಹಿಟ್ಟನ್ನು ಹಾಕುತ್ತಿದ್ದಳು. ಬೆನ್ನು ಗೂನಾಗಿದ್ದು, ತಾನೇ ಒಂದು ದೊಡ್ಡ ಬಿಳಿ ಇರುವೆಯಂತೆ ಕಾಣುತ್ತಿದ್ದ ಆಕೆ, ತಲೆ ಬಗ್ಗಿಸಿ ಇರುವೆಗಳ ಗೂಡುಗಳನ್ನು ಹುಡುಕುತ್ತಾ ನಿಧಾನವಾಗಿ ಬರುತ್ತಿದ್ದಳು. ಹರಿ ಅಚ್ಚರಿಯಿಂದ ಅವಳನ್ನು ನೋಡುತ್ತಿದ್ದ. ಇರುವೆಗಳು ಮತ್ತು ಪಕ್ಷಿಗಳಿಗೆ ಆಹಾರ ಹಾಕಲು, ಅವನೆಂದೂ ಹೀಗೆ ಹಣವನ್ನು ಖರ್ಚು ಮಾಡುತ್ತಿರಲಿಲ್ಲ. ತನ್ನ ಕುಟುಂಬಕ್ಕಾಗಿ ಮಾಡಬೇಕಾದ ಕರ್ತವ್ಯವಿದೆ ಹಾಗೂ ತಾನು ಗಳಿಸುವ ಪ್ರತಿ ರೂಪಾಯಿಯೂ ಆ ಕುಟುಂಬಕ್ಕೇ ಮೀಸಲಾಗಿರುತ್ತದೆ.

ಹರಿ ಎದ್ದು ಮುಖ ತೊಳೆದುಕೊಳ್ಳಲು ಮೂಲೆಯಲ್ಲಿ ಗಿಡಗಳ ಹಿಂದಿದ್ದ ಪಂಪ್‌ನ ಬಳಿ ಹೋದಾಗ ತಮ್ಮ ಶಾಲಾ ಚೀಲಗಳನ್ನು ಹೆಗಲಿಗೆ ನೇತುಹಾಕಿಕೊಂಡಿದ್ದ ಶಾಲಾ ಮಕ್ಕಳು ಗುಂಪುಗುಂಪಾಗಿ ಬರುತ್ತಿರುವುದನ್ನು ನೋಡಿದ. ಅವರೆಲ್ಲಾ ಒಂದೇ ರೀತಿಯ ಉಡುಪು ಧರಿಸಿದ್ದರು. ಬೂದು ಬಣ್ಣದ ನಿಕ್ಕರ್ ಇಲ್ಲವೆ ಸ್ಕರ್ಟ್‌ಗಳು ಮತ್ತು ತಿಳಿ ನೀಲಿ ಬಣ್ಣದ ಷರ್ಟುಗಳು ಇಲ್ಲವೆ ಬ್ಲೌಸ್‌ಗಳು. ಮಕ್ಕಳ ತಲೆಯ ಕೂದಲಿಗೆ ಎಣ್ಣೆ ಹಚ್ಚಿ, ಚೆನ್ನಾಗಿ ಬಾಚಲಾಗಿತ್ತು. ಪಾರ್ಕಿನ ಒಂದು ಕೊನೆಯಲ್ಲಿದ್ದ ಶಾಲಾ ಕಟ್ಟಡಕ್ಕೆ ಅವರಲ್ಲಿ ಕೆಲವರು ನಗುನಗುತ್ತಾ ಹೋಗುತ್ತಿದ್ದರು, ಮತ್ತೆ ಕೆಲವರು ಗುಂಪುಗಳಲ್ಲಿ ಓಡುತ್ತಿದ್ದರು. ಇತರ ಕೆಲವು ಮಕ್ಕಳನ್ನು, ಅವರ ತಾಯಂದಿರು ಇಲ್ಲವೆ ಅಜ್ಜಂದಿರು ಕೈಹಿಡಿದು ಕರೆದುಕೊಂಡು ಹೋಗುತ್ತಿದ್ದರು. ಅವರುಗಳನ್ನು ನೋಡಿದಾಗ ಹರಿಗೆ ತನ್ನ ತಂಗಿಯರಾದ ಬೇಲ ಮತ್ತು ಕಮಲ, ಕಡುನೀಲಿ ಬಣ್ಣದ ಸ್ಕರ್ಟ್‌ಗಳನ್ನು ಧರಿಸಿ ಗ್ರಾಮದ ರಸ್ತೆಯಲ್ಲಿ ಕುಣಿಯುತ್ತಾ, ಓಡುತ್ತಾ, ಬೆಟ್ಟದ ಪಕ್ಕದ ಶಾಲೆಗೆ ಹೋಗುತ್ತಿದ್ದುದು ನೆನಪಿಗೆ ಬಂತು. ಅವರನ್ನು ಮತ್ತೆ ಎಂದು ನೋಡುವೆನೋ ಎಂದು ಅವನಿಗೆ ಅನಿಸಿತು. ಅವರಿಗೆ ತಾನು ತನ್ನ ವಿಳಾಸವನ್ನು ಕೊಟ್ಟಿದ್ದರೆ, ಅವರು ತನಗೆ ಬರೆದು ಮನೆಯ ಸುದ್ದಿಯನ್ನು ನೀಡಬಹುದಾಗಿತ್ತೆಂದು ಭಾವಿಸಿದ.

ಅಡಿಗೆ ಮನೆಯಲ್ಲಿದ್ದ ಹುಡುಗರಿಗೆ, ಹರಿ ತಮಗೆ ಸಹಾಯ ಮಾಡಲು ಬಂದಿದ್ದಾನೆಯೇ ವಿನಹ, ತಮ್ಮ ಕೆಲಸವನ್ನಾಗಲಿ ಆಹಾರವನ್ನಾಗಲಿ ಕಸಿದುಕೊಳ್ಳುವುದಕ್ಕಲ್ಲ ಎಂದು ಅರಿವಾದ ಮೇಲೆ ಅವನ ವಿಷಯದಲ್ಲಿ ಹಗೆತನ ಮತ್ತು ಮುನಿಸಿನ ಭಾವನೆಯನ್ನು ಕಡಿಮೆ ಮಾಡಿದರು. ಜಗುವಿಗೂ ಸಹ ಹರಿಯ ಬಗ್ಗೆ ವಿಶ್ವಾಸ ಮೂಡಿತ್ತೆಂದು ತೋರುತ್ತದೆ. ಕೆಲವು ಸಲ, ದಿನದ ಮಧ್ಯ ಭಾಗದಲ್ಲೇ ಅವನಿಗೆ ಒಂದು ಲೋಟ ಚಹಾ ನೀಡುತ್ತಿದ್ದ. ತನಗೆ ಬಿಡುವಿದ್ದಾಗ, ಜಗು, ಉದ್ದನೆಯ ಮರದ ಬೆಂಚುಗಳ ಪೈಕಿ ಒಂದರ ಮುಂದೆ ಕುಳಿತು, ನಗಾರಿಯಂತೆ ಮೇಜನ್ನು ಬಲವಾಗಿ ಬಡಿಯುತ್ತಾ, ಹರಿಗೆ ಅರ್ಥವಾಗದ ಉಪಭಾಷೆಯೊಂದರಲ್ಲಿ ಹಾಡು

ಹೇಳುತ್ತಾ, ಅದಕ್ಕೆ ತಕ್ಕಂತೆ ತಲೆದೂಗುತ್ತಾ ಕಣ್ಣುಗಳನ್ನು ತಿರುಗಿಸುತ್ತಿದ್ದ. ಅದನ್ನು ಕೇಳಿ ಹರಿ ನಗುತ್ತಾ ಇದ್ದುದು ಜಗುವಿಗೆ ಗೊತ್ತಾದಾಗ ಅವನೂ ನಗುತ್ತಿದ್ದ. ತನ್ನ ತೌರೂರೆಂದು ಹೇಳಿಕೊಳ್ಳುವ ಒಂದು ಗ್ರಾಮ ಜಗುವಿಗೂ ಎಲ್ಲೋ ಇದೆ. ಅವನು ಅದನ್ನು ನೆನಪಿಗೆ ತಂದುಕೊಳ್ಳುತ್ತಾನೆ, ಆ ನೆನಪು ಅವನಿಗೆ ಸಂತೋಷವುಂಟು ಮಾಡುತ್ತದೆ ಎಂದು ಹರಿ ಅರಿತಿದ್ದ. ಅವನು ಮೌನಿಯೂ, ಶ್ರಮವಹಿಸಿ ಕೆಲಸ ಮಾಡುವವನೂ ಆಗಿದ್ದ. ಅವನಿಗೆ ಹರಟೆ ಹೊಡೆಯಲು ಸಮಯವಿಲ್ಲದ್ದರಿಂದಲೂ ಹಾಗೂ ಮಾತನಾಡುವ ಕಲೆ ಗೊತ್ತಿಲ್ಲ-ದಿದ್ದುದರಿಂದಲೂ ಅವನನ್ನು ಒಬ್ಬ ಸ್ನೇಹಿತನನ್ನಾಗಿ ಮತ್ತು ಉಪಕಾರಿಯನ್ನಾಗಿ ಮಾಡಿದ್ದವು.

ಗಡಿಯಾರದ ವೃದ್ಧ ಪಾನ್‌ವಾಲಾ, ನಿಜವಾಗಿ ಉಪಕಾರಿಯೂ, ಸಹಾನುಭೂತಿ-ಯುಳ್ಳವನೂ, ಸಹಾಯಕಾರಿಯೂ ಆಗಿದ್ದ. ಒಂದು ಮಧ್ಯಾಹ್ನ ತುಂಬಾ ಧಗೆಯಿದ್ದು ನಿಶ್ಶಬ್ದವಾಗಿದ್ದ ಸಮಯದಲ್ಲಿ ಖಾನಾವಳಿಯಲ್ಲಿ ಯಾವ ಗಿರಾಕಿಯೂ ಇರಲಿಲ್ಲ. ಹರಿಗೆ ಯಾವುದೇ ಕೆಲಸ ಮಾಡಲಾಗದಷ್ಟು ದಣಿವಾಗಿದ್ದರಿಂದ ಖಾನಾವಳಿಯ ಮುಂಬಾಗಿಲಿನಲ್ಲಿ ನಿಂತು ವಾಹನಗಳ ಸಂಚಾರವನ್ನು ನೋಡುತ್ತಿದ್ದ. ಆಗ ಪಾನ್‌ವಾಲಾ ಹರಿಯನ್ನು ಕರೆದು ತನ್ನ ಅಂಗಡಿಯ ಮೇಜಿನ ಹಿಂದಿದ್ದ ಬೆಂಚಿನ ಮೇಲೆ ಕೂಡುವಂತೆ ಹೇಳಿದ.

''ನನಗೆ ಸಹಾಯ ಮಾಡಲು ಇಷ್ಟಪಡುತ್ತೀಯಾ?'' ಅವನು ಕೇಳಿದ. ''ಗಡಿಯಾರ-ವೊಂದು ಟಿಕ್‌ಟಿಕ್ ಎಂದು ಶಬ್ದ ಮಾಡಬೇಕಾದರೆ ಏನು ಮಾಡಬೇಕೆಂಬುದನ್ನು ತಿಳಿಯಬಯಸುವೆಯಾ? ಓಬಿರಾಯನ ಕಾಲದ ಈ ದೊಡ್ಡ ಗಡಿಯಾರವನ್ನು ದುರಸ್ತಿಗಾಗಿ ಪಾರ್ಸಿ ಕುಟುಂಬವೊಂದು ಕೊಟ್ಟಿದೆ. ಅದನ್ನು ಈಗ ಬಿಚ್ಚುತ್ತಿದ್ದೇನೆ. ಇದರ ಕೆಲಸವನ್ನು ನೀನು ನೋಡಬಹುದು. ಇಂತಹ ಗಡಿಯಾರಗಳು ಆಗಾಗ್ಗೆ ಬರುವುದಿಲ್ಲ. ಇಷ್ಟೊಂದು ಹಳೆಯ ಗಡಿಯಾರವನ್ನು ನೀನು ಆಗಾಗ್ಗೆ ನೋಡಲಾರೆ. ಇಂಥ ದೊಡ್ಡ ಗಡಿಯಾರವನ್ನು ನೀನು ನೋಡುತ್ತಿರುವುದು ನಿನ್ನ ಅದೃಷ್ಟವೇ ಸರಿ'' ಎಂದು ಹೇಳಿ, ಅವನು ಗಡಿಯಾರದ ಹಿಂಭಾಗವನ್ನು ತೆರೆದ. ಅದರ ಒಳಗಿದ್ದ ಯಂತ್ರಗಳನ್ನು ನೋಡಿ ಮರುಳುಗೊಂಡ ಹರಿಗೆ, ಹೊಸದಾದ, ವಿಚಿತ್ರ ಮನೆಯೊಂದರ ಬಾಗಿಲು ತೆರೆದಂತಾಗಿತ್ತು. ಅದರಲ್ಲಿರುವ ದೋಷವೇನು, ಅದು ನಿಲ್ಲಲು ಕಾರಣವೇನು ಎಂಬುದನ್ನು ಪಾನ್‌ವಾಲಾ ಹರಿಗೆ ತಿಳಿಸಿದ. ''ಆಸಕ್ತಿಯುತವಾಗಿದೆ, ಅಲ್ಲವಾ? ಗಡಿಯಾರ ರಿಪೇರಿ ಕೆಲಸವನ್ನು ನೀನೇಕೆ ಕಲಿಯಬಾರದು? ಮಧ್ಯಾಹ್ನದ ವೇಳೆ ಅಡಿಗೆ ಮನೆಯಲ್ಲಿ ನಿನಗೆ ಕೆಲಸವಿಲ್ಲದ ಸಮಯದಲ್ಲಿ ನಿನಗೆ ಕಲಿಸುತ್ತೇನೆ. ಮಧ್ಯಾಹ್ನ ಎರಡರಿಂದ ನಾಲ್ಕರವರೆಗೆ ನಿನಗೇನು ಹೆಚ್ಚು ಕೆಲಸ ಇರುವುದಿಲ್ಲ, ಅಲ್ಲವಾ? ನಿಜ, ನೀನು ಮೊದಲು ಜಗುವನ್ನು ಕೇಳಿ ಅನುಮತಿ ಪಡೆಯಬೇಕು. ನಿನಗೆ ಸ್ವಲ್ಪ ದುಡ್ಡು ಕೊಡುತ್ತೇನೆ. ನೀನು ದಿನಾ ಎರಡು ತಾಸು ನನಗೆ ಸಹಾಯ ಮಾಡಬೇಕು. ಬಹುಶಃ ನಾನು ನಿನ್ನನ್ನು ಒಬ್ಬ ಗಡಿಯಾರ ರಿಪೇರಿಯವನನ್ನಾಗಿ ಮಾಡಬಲ್ಲೆ. ಇದೊಂದು ವೃತ್ತಿಯಲ್ಲವೆಂದು ಅನೇಕರು ತಿಳಿದಿದ್ದಾರೆ. ನಿನಗೇನೆನಿಸುತ್ತದೆ, ಆಂ?''

ಕಡು ಬಡವರು ಮತ್ತು ಭಿಕ್ಷುಕರ ಖಾನಾವಳಿಯಲ್ಲಿ ಅಡಿಗೆ ಸಹಾಯಕನಾಗಿ ಕೆಲಸ ಮಾಡುತ್ತಿರುವ ಹಳ್ಳಿಯ ಹುಡುಗನೊಬ್ಬನೊಡನೆ ತನ್ನ ರಹಸ್ಯವನ್ನು ಹಂಚಿಕೊಳ್ಳಲು ಪಾನ್‌ವಾಲಾ ಅಪೇಕ್ಷಿಸುತ್ತಿದ್ದಾನೆಂಬುದನ್ನು ನಂಬುವುದೇ ಹರಿಗೆ ಕಷ್ಟವಾಯಿತು. ಈ ಮನುಷ್ಯನ ಅನುಕಂಪದಿಂದಾಗಿ ಮತ್ತು ತನ್ನ ಜೀವನವನ್ನು ಸಾರ್ಥಕ ರೀತಿಯಲ್ಲಿ

ರೂಪಿಸಬಹುದಾದ ಸಾಧ್ಯತೆಯಿಂದಾಗಿ, ತನ್ನ ಕೈಗಳನ್ನು ಉಪಯುಕ್ತ ರೀತಿಯಲ್ಲಿ ಬಳಸುವುದನ್ನೂ, ಅತ್ಯಂತ ಚಿಕ್ಕ ಮತ್ತು ನಾಜೂಕಾದ ಉಪಕರಣಗಳ ಮೇಲೆ ಕೈ ಆಡಿಸುವುದನ್ನೂ, ಸೂಕ್ಷ್ಮವಾದ ಮತ್ತು ಜಟಿಲವಾದ ಯಂತ್ರೋಪಕರಣಗಳನ್ನು ಸರಿಪಡಿಸುವುದನ್ನೂ ತಾನು ಕಲಿಯಬಹುದೆಂಬ ಆಲೋಚನೆಯೇ ಹರಿಗೆ ದಿಗ್ಭ್ರಮೆಯುಂಟು-ಮಾಡಿತು. ಅವನು ಮಾತನಾಡದೆ ಒಪ್ಪಿಗೆಯಿಂದ ಸುಮ್ಮನೆ ತಲೆಯಾಡಿಸಿದ.

''ಹಾಗಿದ್ದರೆ ಈಗಲೇ ಕೆಲಸ ಪ್ರಾರಂಭಿಸೋಣ. ಇದರಲ್ಲಿ ನಿನಗೆ ಅಭಿರುಚಿಯಿದೆಯೇ ಎಂಬುದನ್ನು ನೋಡೋಣ'' ಎಂದು ಪಾನ್‌ವಾಲಾ ನಗುತ್ತಾ, ಗಾಜಿನ ಹಳದಿ ಹಿಡಿಯಿದ್ದ ಸ್ಕ್ರೂಡ್ರೈವರ್‌ಅನ್ನು ಹರಿಯ ಕೈಗೆ ಕೊಟ್ಟ.

''ನನ್ನ ಕೈಗಳು ತುಂಬ ಕೊಳಕಾಗಿವೆ'' ಹರಿ ನಾಚಿಕೆಯಿಂದ ಹೇಳಿದ.

''ಏನು, ಅವು ಕೊಳೆಯಾಗಿವೆಯೆ?'' ಪಾನ್‌ವಾಲಾ ನಗುತ್ತಾ ಕೇಳಿದ. ''ಇಗೋ, ಈ ಟವೆಲ್‌ನಿಂದ ಕೈಗಳನ್ನು ಒರೆಸಿಕೊ. ಹಾಂ, ಈಗ ನೋಡು ಅವು ಸ್ವಚ್ಛವಾದವು.'' ತನಗೊಬ್ಬ ಶಿಷ್ಯ ಸಿಕ್ಕಿದುದು ಅವನಿಗೆ ಸಂತೋಷವುಂಟುಮಾಡಿದಂತಿತ್ತು. ಜಗುವಿನ ಸ್ವಭಾವಕ್ಕೆ ವ್ಯತಿರಿಕ್ತವಾಗಿ, ಇವನು ಒಬ್ಬ ಸಂಗಾತಿಯ ಸಹವಾಸವನ್ನು ಬಯಸುವಂತಿತ್ತು. ''ನಿನ್ನ ಬೆರಳುಗಳು ಚುರುಕಾಗಿವೆ, ನೋಡಿದರೇ ಗೊತ್ತಾಗುತ್ತದೆ. ಇಗೊ, ಇದೊಂದು ಉಪಯುಕ್ತ-ವಾದ ಚಿಕ್ಕ ಉಪಕರಣ. ಇದನ್ನು ಹೀಗೆ ಹಿಡಿದುಕೊ. ಈಗ ಏನು ಮಾಡಬೇಕೆಂಬುದನ್ನು ತೋರಿಸುತ್ತೇನೆ.''

ಈ ರೀತಿ ಹರಿ, ಗಡಿಯಾರಗಳ ರಿಪೇರಿ ಕಲಿಯತೊಡಗಿದ. ಅದಕ್ಕೊಂದು ಭವಿಷ್ಯ-ವಿರುವ ಸಾಧ್ಯತೆಯನ್ನು ಅವನು ಕಂಡುಕೊಂಡ. ಇರುವ ಜಾಗದಲ್ಲೇ ಯಾವಾಗಲೂ ಇರಬೇಕಾದ ಅಗತ್ಯವಿರುವುದಿಲ್ಲ. ಅಲ್ಲಿಂದ ಮುಂದು ಮುಂದಕ್ಕೆ ಹೋಗಬಹುದು ಎಂಬ ಅರಿವು ಹರಿಗೆ ಉಂಟಾಯಿತು. ನಿಜ, ಇದಕ್ಕಾಗಿ ಹೆಚ್ಚಿನ ಪ್ರಯತ್ನದ ಅಗತ್ಯವಿರುತ್ತದೆ. ಅಲ್ಲದೆ ಸ್ವಲ್ಪ ಮಟ್ಟಿನ ಅದೃಷ್ಟವೂ ಬೇಕು. ಮಧ್ಯಾಹ್ನದ ಬಿಡುವಿನ ಸಮಯವನ್ನು, ಯಾವುದೇ ಅಡ್ಡಿಯಿಲ್ಲದೆ, ಗಡಿಯಾರದ ದುರಸ್ತಿಗಾಗಿ ಬಳಸಲು ಜಗುವಿನ ಅನುಮತಿಯೂ ದೊರಕಿತು. ಜಗು ಮಿತಭಾಷಿಯಾದರೂ ಒಳ್ಳೆಯ ಸ್ವಭಾವದವನು. ಸ್ವಂತ ಇಚ್ಛೆಯಿಂದ ಈ ಕುಶಲಕಲೆಯನ್ನು ಕಲಿಯಲು, ಹರಿ ತನ್ನನ್ನು ತಾನೇ ತೊಡಗಿಸಿಕೊಂಡ. ಅವನು ಗೆಲುವುಳ್ಳವನೂ, ಹರ್ಷಚಿತ್ತನೂ, ಚುರುಕು ಸ್ವಭಾವದವನೂ ಆದ. ಹೆಚ್ಚು ಏಕಾಗ್ರತೆ ಮತ್ತು ಕುತೂಹಲದಿಂದ ಕೆಲಸ ಮಾಡುತ್ತಿದ್ದ ಹರಿಯನ್ನು ಕಂಡು, ವೃದ್ಧ ಪಾನ್‌ವಾಲಾನಿಗೂ ಸಂತೋಷವಾಗಿತ್ತು.

''ಚೆನ್ನಾಗಿದೆ, ಹರಿ ಚೆನ್ನಾಗಿದೆ'' ಹರಿಯನ್ನು ಪ್ರೋತ್ಸಾಹಿಸುತ್ತಾ ಅವನು ಪದೇ ಪದೇ ಹೇಳುತ್ತಿದ್ದ, ''ಇದು ನಿಜವಾಗಿ ಚೆನ್ನಾಗಿದೆ. ಮುಂಗಾರು ಪ್ರಾರಂಭವಾಗುವ ವೇಳೆಗೆ, ನಾನು, ನಿನ್ನ ಮೊದಲ ಪಾಠಗಳನ್ನು ಮುಗಿಸಿಬಿಟ್ಟಿರುತ್ತೇನೆ. ಮುಂಗಾರು ಮುಗಿಯುವ ವೇಳೆಗೆ ನೀನೇ ಸ್ವಂತವಾಗಿ ಗಡಿಯಾರಗಳನ್ನು ಸರಿಪಡಿಸುವಷ್ಟು ಕುಶಲಮತಿಯಾಗಿರುತ್ತೀ.'' ಹೀಗೆ ಕಾಲ ಸರಿದು ಹೋಗುವುದೆಂಬ ಅವನ ಸೂಚನೆಗಾಗಿ ಹರಿ ಮೌನದಿಂದ, ಆದರೆ, ಕೃತಜ್ಞತೆಯಿಂದ ಅವನನ್ನು ನೋಡಿದ.

''ಹೌದು'' ಪಾನ್‌ವಾಲಾ ಹರಿಯತ್ತ ನೋಡುತ್ತಾ ಹೇಳಿದ, ''ಅಂತೂ ನೀನು

ನಸುನಗುವಂತೆ, ಏಕೆ, ಉಲ್ಲಾಸದಿಂದ ಗಟ್ಟಿಯಾಗೇ ನಗುವಂತೆ ನಾನು ಮಾಡಬಹುದು, ಅಂ?''

***

'ಮೊನ್ ರಿಪೊಸ್'ನಲ್ಲಿ ತಂಗಲಿರುವ ಅತಿಥಿಯು, ಡಿಸಿಲ್ವಾ ಅವರು ಧುಲ್ ಬಿಡುವುದಕ್ಕೆ ಎರಡು ದಿನ ಮುಂಚಿತವಾಗಿಯೇ ಅಲ್ಲಿಗೆ ಬಂದ. ಆದರೆ ಅಸಾಧ್ಯ ಗಲಿಬಿಲಿ ಮತ್ತು ತುಂಬ ಕೆಲಸದಿಂದಾಗಿ ಲೀಲ ಮತ್ತು ಅವಳ ತಂಗಿಯರಿಗೆ ಅವನ ಇರುವಿಕೆಯ ಅರಿವೇ ಉಂಟಾಗಲಿಲ್ಲ. ಮುಂಬೈನಿಂದ ಬಸ್‌ನಲ್ಲಿ ಬಂದ ಅವನು, ತನ್ನ ಚೀಲವನ್ನು ತಾನೇ ಹಿಡಿದು, ಹಾದಿಯಲ್ಲಿ ನಡೆದು ಬಂದ. ಹೀಗಾಗಿ ಅವನದು ವೈಭವದ ಮತ್ತು ಎದ್ದು ಕಾಣುವ ಪ್ರವೇಶವಾಗಲಿಲ್ಲ. ಡಿಸಿಲ್ವಾ ಕುಟುಂಬವು ದೊಡ್ಡದಾಗಿದ್ದು, ಸದಾ ಗದ್ದಲವೆಬ್ಬಿಸುತ್ತಿದ್ದು-ದರಿಂದ, ಅವರ ಮಧ್ಯೆ ಮತ್ತೊಬ್ಬ ವ್ಯಕ್ತಿಯ ಹಾಜರಾತಿಯು ಯಾವ ವ್ಯತ್ಯಾಸವನ್ನೂ ತೋರಿಸಲಿಲ್ಲ. ಆದರೆ ಪುಟ್ಟ ನಾಯಿ ಮಿಷ ಮಾತ್ರ ಎಂದಿಗಿಂತ ಹೆಚ್ಚಾಗಿ ಬೊಗಳುತ್ತಾ ತುಂಬ ಉದ್ವೇಗದಿಂದ ಸುತ್ತ ಮುತ್ತ ಓಡಾಡುತ್ತಿತ್ತು.

ಅಡಿಗೆ ಮನೆಯನ್ನು ಸ್ವಚ್ಛಪಡಿಸುವಲ್ಲಿ ಮತ್ತು ಸಾಮಾನುಗಳನ್ನು ಪ್ಯಾಕ್ ಮಾಡುವಲ್ಲಿ ಲೀಲ ಅಡಿಗೆಯವನಿಗೆ ನೆರವು ನೀಡುತ್ತಿದ್ದಳು. ಮೇಮ್ ಸಾಹಿಬ್ ಹೊರಡುವ ಮುನ್ನ ಆಕೆಗೆ ಹೂವು ಕೊಡುವ ಸಲುವಾಗಿ ದಾಸವಾಳ, ಜಾಜಿ ಮುಂತಾದ ಹೂಗಳನ್ನು ಆರಿಸಲು ಮತ್ತು ಮಕ್ಕಳಿಗಾಗಿ ಮಲ್ಲಿಗೆ ಮಾಲೆಗಳನ್ನು ಕಟ್ಟಿತರಲು ಅವಳ ತಂಗಿಯರು ಹೋಗಿದ್ದರು. ಕಡಲ ದಂಡೆಯಲ್ಲಿ ತಾವು ಸಂಗ್ರಹಿಸಿದ್ದ ಕಪ್ಪೆಚಿಪ್ಪುಗಳು ಮತ್ತು ಕಲ್ಲು ಹರಳುಗಳನ್ನು ಇಟ್ಟುಕೊಂಡು ಚಿಕ್ಕಮಕ್ಕಳು ವರಾಂಡದಲ್ಲಿ ಜಗಳವಾಡುತ್ತಿದ್ದರು. ಅದನ್ನು ಮುಂಬೈನ ಅವರ ಫ್ಲಾಟ್‌ಗೆ ತೆಗೆದುಕೊಂಡು ಹೋಗುವುದಕ್ಕೆ ಅನುಮತಿ ಕೊಡಲು ಅವರ ತಾಯಿ ನಿರಾಕರಿಸುತ್ತಿದ್ದಳು. ''ಅಷ್ಟನ್ನೂ ತೆಗೆದುಕೊಂಡು ಹೋಗಲಾಗದು ಬೇಕಾದರೆ ಅತ್ಯುತ್ತಮವಾದ ಕೆಲವನ್ನು ಮಾತ್ರ ಆರಿಸಿ'' ಎಂದು ಆಕೆ ಹೇಳುತ್ತಿದ್ದಳು. ತಮ್ಮ ಸಂಗ್ರಹವ-ನ್ನೆಲ್ಲಾ ಪರೀಕ್ಷಿಸಿ, ಅವುಗಳಲ್ಲಿ ಯಾವುದನ್ನು ಆರಿಸಬೇಕೆಂಬುದು ಅವರಿಗೆ ಒಂದು ಜಿಜ್ಞಾಸೆಯಾಗಿತ್ತು. ಈ ದೃಶ್ಯವು ಬೇಲ ಮತ್ತು ಕಮಲರಿಗೆ ನಗು ತಂದಿತ್ತು. ಶಂಖಗಳು ಮತ್ತು ಕಲ್ಲುಹರಳುಗಳನ್ನು ಅವರು ತಮ್ಮ ಗಮನಕ್ಕೇ ತಂದುಕೊಳ್ಳುತ್ತಿರಲಿಲ್ಲ.

ಅಂತೂ ಸಾಮಾನುಗಳನ್ನು ಕಾರಿನಲ್ಲಿ ತುಂಬಿಸಲಾಯಿತು. ಕುಟುಂಬದವರೆಲ್ಲಾ ಕಾರು ಹತ್ತಿದರು. ಕಿಟಕಿಯಾಚೆ ಅವರು ತಲೆ ಹಾಕಿ ಲೀಲ ಮತ್ತು ಅವಳ ತಂಗಿಯರಿಗೆ ವಿದಾಯ ಹೇಳುತ್ತಿದ್ದರು.

''ನಿಮ್ಮ ತಾಯಿಯ ಆರೋಗ್ಯದ ಬಗ್ಗೆ ಚಿಂತಿಸಬೇಡಿ'' ಮಿ. ಡಿಸಿಲ್ವಾ ಪದೇ ಪದೇ ಹೇಳಿದರು, ''ಮುಂಗಾರಿನ ಕಾಲದಲ್ಲಿ ಆಕೆ ಆಸ್ಪತ್ರೆಯಲ್ಲೇ ಇರಲಿ, ಗೊತ್ತಾಯಿತಾ? ಮಳೆಗಾಲದಲ್ಲಿ ನಿಮ್ಮ ಗುಡಿಸಿಲು ತುಂಬ ತೇವವೂ, ಒದ್ದೆಯೂ ಆಗಿರುತ್ತದೆ. ನಿಮ್ಮ ತಂದೆ ಆಕೆಯನ್ನು ನೋಡಿಕೊಳ್ಳುತ್ತಿರುವುದರಿಂದ, ಆಕೆ ಆಸ್ಪತ್ರೆಯಲ್ಲಿರುವುದೇ ಮೇಲು. ನಾವು ಮುಂಬೈಗೆ ಹಿಂದಿರುಗುವಾಗ, ಮಾರ್ಗದಲ್ಲಿ ಅಲಿಬಾಗ್‌ನಲ್ಲಿ ಸ್ವಲ್ಪ ಸಮಯ ಇಳಿದು, ನಿಮ್ಮ ತಾಯಿ ಹುಷಾರಾಗಿರುವವರೆಗೆ, ಊಟ ತಿಂಡಿಗಾಗಿ ಅವನಿಗೆ ಸ್ವಲ್ಪ ದುಡ್ಡನ್ನು ಕೊಡುತ್ತೇವೆ. ದೀಪಾವಳಿಯಲ್ಲಿ ಆಕೆಯನ್ನು ಮನೆಗೆ ಕಳಿಸಬಹುದೆಂದು ವೈದ್ಯರು

ಭಾವಿಸಿದ್ದಾರೆ, ಸರಿಯಾ?''

ಆತ ಈಗಾಗಲೇ ಹಲವಾರು ಸಲ ತಿಳಿಸಿದ್ದ ಈ ಮಾತನ್ನು ಮತ್ತೆ ಕೇಳಿ ಲೀಲ, ಕೃತಜ್ಞತೆಯಿಂದ ತಲೆಯಾಡಿಸಿದಳು. ಈ ಮಾತನ್ನು ಕೇಳಿದಾಗೆಲ್ಲಾ ಅವಳಿಗೆ ಸಂತೋಷವೇ ಆಗುತ್ತಿತ್ತು. ಹರಿಯಿಲ್ಲದೆ, ತಂದೆ ಮತ್ತು ತಾಯಿಯಿಲ್ಲದೆ, ಪಿಂಟೊ ಸಹ ಇಲ್ಲದೆ ಅವರ ಗುಡಿಸಿಲು ಬಿಕೊ ಎನ್ನುತ್ತಿತ್ತು. ಡಿಸಿಲ್ವಾ ಅವರು 'ಮೊನ್ ರಿಪೊಸ್'ನಿಂದ ಹೊರಟು ಹೋದ ಮೇಲಂತೂ ಅದು ಇನ್ನೂ ಹೆಚ್ಚು ಮೌನವಾಗಿತ್ತು.

''ಸೈಯದ್ ಅಲಿ ಸಾಹೇಬರನ್ನು ಚೆನ್ನಾಗಿ ನೋಡಿಕೊಳ್ಳಿ'' ಶ್ರೀಮತಿ ಡಿಸಿಲ್ವಾ ಕೂಗಿ ಹೇಳಿದರು, ''ಅವರು ಸರಿಯಾಗಿ ಊಟ ಮಾಡುವಂತೆ ನೋಡಿಕೊಳ್ಳಿ. ಊಟವನ್ನು ಅವರು ಸಾಮಾನ್ಯವಾಗಿ ಮರೆಯುವುದುಂಟು. ಆದ್ದರಿಂದ ಅವರಿಗೆ ನೆನಪಿಸುತ್ತಿರಿ. ಅವರಿಗಾಗಿ ಪ್ರತಿ ದಿನ ಮೀನು, ಮೊಟ್ಟೆ ಮತ್ತು ಹಾಲನ್ನು ಕೊಳ್ಳಲು ನಿಮಗೆ ಸಾಕಷ್ಟು ಹಣಕೊಟ್ಟಿದ್ದೇನೆ. ಅವರಿಗೆ ಕಾಯಿಪಲ್ಲೆಯನ್ನು ಹೆಚ್ಚಾಗಿ ಕೊಂಡು ತನ್ನಿ. ಜಿರಳೆಗಳು, ಇಲಿಗಳು ಮತ್ತು ಹಾವುಗಳು ಬರದಂತೆ, ಪ್ರತಿ ರಾತ್ರಿ ಬಾಗಿಲು ಹಾಕುವ ಮುನ್ನ ಅಡಿಗೆ ಮನೆಯನ್ನು ಶುಚಿಗೊಳಿಸಿ....''.

ಹಿಂದಿನ ರಾತ್ರಿ ತಮ್ಮ ತಾಯಿ ಅಡಿಗೆ ಮನೆಯಲ್ಲಿ ಹಾವು ಕಂಡದ್ದೂ, ಆ ಹಾವು ಶೀಘ್ರವಾಗಿ ಅಲಮಾರಿಯೊಳಗೆ ಹೊರಟು ಹೋದದ್ದೂ ನೆನಪಿಗೆ ಬಂದು, ಹಿಂದಲ ಸೀಟಿನಲ್ಲಿ ಕುಳಿತಿದ್ದ ಮಕ್ಕಳು ಕೂಗಲಾರಂಭಿಸಿದಾಗ, ಹೊರಡಲು ಇದು ಸರಿಯಾದ ಸಮಯವೆಂದು ನಿರ್ಧರಿಸಿ, ತಂದೆ ಕಾರನ್ನು ಸ್ಟಾರ್ಟ್ ಮಾಡಿದರು. ಅದು ಸರ್ರನೆ ಹೊರಟಿತು. ಇದರಿಂದ ಅವರ ನಾಯಿ ಉದ್ವೇಗಗೊಂಡು, ಕಿಟಕಿಯಿಂದ ಹೊರಗೆ ತಲೆ ಹಾಕಿ, ಪಕ್ಕದಲ್ಲಿ ಓಡಿ ಹೋಗುವಂತೆ ಕಾಣುತ್ತಿದ್ದ ತೆಂಗಿನ ಮರಗಳನ್ನು ನೋಡುತ್ತಾ ಜೋರಾಗಿ ಬೊಗಳಲಾರಂಭಿಸಿತು. ಕೊರಕಲ ದಿಮ್ಮಿಯ ಮೇಲೆ ನಿಂತಿದ್ದ ಲೀಲ, ಬೇಲ ಮತ್ತು ಕಮಲ ಕೈಯಾಡಿಸುತ್ತಾ ವಿದಾಯ ಹೇಳಿದರು.

ಕಾರು ಹೊರಟು ಹೋದ ಮೇಲೆ ಅವರು ಮೌನವಾಗಿದ್ದ ಬಂಗಲೆಯತ್ತ ತಿರುಗಿದರು. 'ಮೊನ್ ರಿಪೊಸ್'ನಲ್ಲಿ ತಂಗಲಿದ್ದ ವ್ಯಕ್ತಿಯನ್ನು ಅವರು ನೋಡಿದರು. ಆತ ವಯಸ್ಸಾದ ಸಣಕಲು ವ್ಯಕ್ತಿ. ಬಿಳಿಯ ಗಡ್ಡವಿತ್ತು. ಅವನ ಕನ್ನಡಕ ಮೂಗಿನ ಮೇಲೆ ಇಳಿದಿತ್ತು. ಅವನು ಇವರತ್ತ ಗಮನವನ್ನೇ ಕೊಡಲಿಲ್ಲ. ಅವನು ದುರ್ಬೀನಲ್ಲಿ ಮರಗಳತ್ತ ತದೇಕಚಿತ್ತದಿಂದ ನೋಡುತ್ತಿದ್ದ. ಅವನೇನು ನೋಡುತ್ತಿರಬಹುದು ಎಂಬ ಕುತೂಹಲದಿಂದ ಹುಡುಗಿಯರೂ ಮರದತ್ತ ತಿರುಗಿದರು. ಅವರಿಗೆ ಅಲ್ಲೇನೂ ಇರುವಂತೆ ಕಾಣಲಿಲ್ಲ. ಅಷ್ಟರಲ್ಲೇ ಸರಸರ ಎಂಬ ಶಬ್ದ ಕೇಳಿಸಿತು. ಬೂದು ಬಣ್ಣದ ಪಕ್ಷಿಯೊಂದು ಹೊರಗೆ ಹಾರಿಬಂತು. ಎಲೆಗಳ ಗುಂಪಿನಿಂದ ಹಾರಿ ಬಂದ ಅದಕ್ಕೆ ಉದ್ದನೆಯ ಬೂದು ಬಣ್ಣದ ಬಾಲವಿತ್ತು. ಅದು ಮನೆಯ ಹಿಂಭಾಗದತ್ತ ಹಾರಿ ಹೋಗಿ ಅಲ್ಲಿ ಸುತ್ತಾಡುತ್ತಿತ್ತು. ಆ ಮನುಷ್ಯ ನಿಟ್ಟುಸಿರಿನೊಡನೆ ತನ್ನ ದುರ್ಬೀನನ್ನು ಕೆಳಗಿಳಿಸಿ, ತನ್ನ ಜೇಬಿನಿಂದ ಪುಸ್ತಕವೊಂದನ್ನು ಹೊರತೆಗೆದು ಅದರಲ್ಲೇನೋ ಬರೆಯಲಾರಂಭಿಸಿದ.

ಲೀಲ ಮತ್ತು ಅವಳ ತಂಗಿಯರು ಅವನ ಕೆಲಸಕ್ಕೆ ಭಂಗವುಂಟುಮಾಡದಂತೆ ತುದಿಗಾಲಿನಲ್ಲಿ ಮೂಲೆಯಿಂದ ನಡೆದು ಒಳಗೆ ಹೋದರು.

ಸಿಂಕ್‌ನಲ್ಲಿ ಬಿಟ್ಟು ಹೋಗಿದ್ದ ಪಾತ್ರೆಗಳನ್ನು ಅವರು ಮೌನವಾಗಿ ತೊಳೆಯುತ್ತಾ, ''ಅವರು ಅಲ್ಲೇನು ಮಾಡುತ್ತಿದ್ದಾರೆ?'' ಎಂದು ಕೇಳಿದರು.

''ಯಾರಿಗೆ ಗೊತ್ತು?'' ಲೀಲ ಭುಜ ಕುಣಿಸಿದಳು. ''ಅವರು ಏನನ್ನೋ ಅಧ್ಯಯನ ಮಾಡಲು ಇಲ್ಲಿಗೆ ಬಂದಿರುವುದಾಗಿ ಸಾಹಬ್ ಹೇಳಿದ್ದರು.''

''ಎಂತಹ ಅಧ್ಯಯನ, ಪಕ್ಷಿಗಳನ್ನೇ?'' ನಗುತ್ತಾ ಬೇಲ ಮತ್ತು ಕಮಲ ಕೇಳಿದರು. ಇಂತಹ ಅಧ್ಯಯನ ಅವರಿಗೆ ಹಾಸ್ಯಾಸ್ಪದವಾಗಿತ್ತು.





''ಹೇಗೇ ಇರಲಿ ಅವರಂತೂ ನಮ್ಮನ್ನು ನೋಡಲೇ ಇಲ್ಲ. ನಾವು ಅವರಿಗಾಗಿ ಅಡುಗೆ ಮಾಡಿ, ಅವರನ್ನು ಊಟಕ್ಕೆ ಕರೆಯುವುದು, ಅಷ್ಟೆ'' ಎಂದು ಲೀಲ ಹೇಳಿದಳು.

ಅವರ ಕೆಲಸ ಅದೇ ರೀತಿ ಇತ್ತು. ನೋಡಿಕೊಳ್ಳಲು ಅವರಿಗೆ ತಾಯಿಯಾಗಲಿ, ಹರಿಯಾಗಲಿ ಅಥವಾ ತಂದೆಯಾಗಲಿ ಇರಲಿಲ್ಲ. ಈ ವಿಚಿತ್ರ ವ್ಯಕ್ತಿಗಾಗಿ ಅವರು ನಿಶ್ಶಬ್ದವಾಗಿ ಅಡುಗೆ ಮಾಡುವರು. ಪೇಟೆಗೆ ಹೋಗಿ ಪದಾರ್ಥಗಳನ್ನು ತರುವರು. ಮನೆಯನ್ನು ಗುಡಿಸಿ ಸಾರಿಸುವರು. ಆತ ಅವರೊಡನೆ ಎಂದೂ ಮಾತನಾಡುತ್ತಿರಲಿಲ್ಲ. ಊಟಕ್ಕಾಗಿ ಕರೆದಾಗ, ಆತ ತನ್ನ ಕನ್ನಡಕದ ಮೂಲಕ ತಿನಿಸುಗಳನ್ನು ನೋಡುವನು. ಕೆಲವು ಸಲ ದುರ್ಬೀನನ್ನು ಹೆಗಲಿಗೆ ನೇತುಹಾಕಿಕೊಂಡು, ಚೀಲದ ತುಂಬ ಪುಸ್ತಕಗಳನ್ನೂ, ಪೆನ್ಸಿಲ್‌ಗಳನ್ನೂ ಇಟ್ಟುಕೊಂಡು ಇಡೀ ದಿನ ಕಣ್ಮರೆಯಾಗಿರುವನು. ಕೆಸರು ಮತ್ತು ಜೊಂಡಲ್ಲಿ ಮುಗ್ಗರಿಸಿದಾಗ ಮಾತ್ರ ಅವರು ಅವನಲ್ಲಿಗೆ ಹೋಗುವರು. ಕೆಲವೊಮ್ಮೆ ಅವನು ಮರಗಳ ಕೆಳಗೆ ಕಲ್ಲಿನ ಮೇಲೆ ಮೌನವಾಗಿ ಕುಳಿತು, ಜನರನ್ನು ಬಿಟ್ಟು, ಉಳಿದಂತೆ, ಎಲ್ಲವನ್ನೂ ತದೇಕ ಚಿತ್ತದಿಂದ ನೋಡುತ್ತಿರುವನು. ಧುಲ್‌ನಲ್ಲಿ ಜನ ಇದ್ದಾರೆಂಬ ಬಗ್ಗೆ ಅವನು ಗಮನವನ್ನೇ ಹರಿಸಿರಲಿಲ್ಲವೇನೊ. ಅಲ್ಲಿಯ ಜನ ಅವನಿಗೆ ಯಾವ ರೀತಿಯಲ್ಲೂ ಆಸಕ್ತಿ ಮೂಡಿಸಿರಲಿಲ್ಲ. ಆದರೆ ಅವನು ತುಂಬ ವಿನಯಶೀಲನೂ, ಶಾಂತನೂ ಆಗಿದ್ದ. ಯಾವುದೇ ತೊಂದರೆಯನ್ನೂ ಕೊಡುತ್ತಿರಲಿಲ್ಲ. ಆತನಲ್ಲಿ ಮಾತುಗಳೂ ಇರಲಿಲ್ಲ, ಬೇಡಿಕೆಗಳೂ ಇರಲಿಲ್ಲ. ಹೀಗಾಗಿ ಅವನ ವಿಚಿತ್ರ ವರ್ತನೆಯಿಂದ ಅವರಿಗೇನೂ ಬೇಸರವಾಗಿರಲಿಲ್ಲ. ಒಂದು ಸಲ ಅವನು ಕೊರಕಲ ಮೇಲಿದ್ದ ದಿಮ್ಮಿಯ ಮೇಲೆ ಹಿಂದು ಹಿಂದಕ್ಕೆ ನಡೆಯುತ್ತಿದ್ದಾಗ, ಕೊರಕಲಲ್ಲಿ ಬಿದ್ದು ನೀರು ಚಿಮ್ಮಿದಾಗ ಅವರು ಅವನ ಸಹಾಯಕ್ಕಾಗಿ ಓಡಿ ಹೋಗಿದ್ದರು. ಅವನ

ಚೀಲವನ್ನೂ, ಕಾಗದಗಳನ್ನೂ, ತೆಗೆದುಕೊಂಡು ಒಣಗಲು ವರಾಂಡದ ನೆಲದ ಮೇಲೆ ಹರಡಿದರು. ಆ ಕಾಗದಗಳ ಮೇಲೆ ಆತ ಪಕ್ಷಿಗಳ ರೇಖಾಚಿತ್ರಗಳನ್ನು ಪೆನ್ಸಿಲ್‌ನಲ್ಲಿ ಬರೆದಿದ್ದು ಕಂಡು, ಅವರಿಗೆ ವಿಸ್ಮಯವಾಗಿತ್ತು.

ಅವರು ವರಾಂಡದ ಹಾಸುಗಳ ಮೇಲೆ ಮಂಡಿಯೂರಿ ಕುಳಿತು, ಅಂಟಿಕೊಂಡಿದ್ದ ಹಾಳೆಗಳನ್ನು ಬಿಡಿಸಿ, ಬಿಸಿಲಿಗೆ ಒಣ ಹಾಕುತ್ತಿದ್ದಾಗ ಬೇಲ ಮೆಲ್ಲಗೆ ಹೇಳಿದಳು, ''ನೋಡು, ಅವರು ಪಕ್ಷಿಗಳ ಅಧ್ಯಯನ ನಡೆಸುತ್ತಿದ್ದಾರೆ?''

''ಪಕ್ಷಿಗಳ ಅಧ್ಯಯನ?'' ಕಮಲ ಪಿಸುಗುಟ್ಟಿದಳು ಮತ್ತು ತಡೆಯಲಾರದೆ ಗಹಗಹಿಸಿ ನಕ್ಕಳು. ಆದರೆ ಲೀಲ ಅವರನ್ನು ಗದರಿಸಿ ಸುಂದರವಾದ ಆ ರೇಖಾಚಿತ್ರಗಳಲ್ಲಿ ಯಾವುದೊಂದೂ ಹಾಳಾಗದಂತೆ ಎಚ್ಚರ ವಹಿಸಬೇಕೆಂದು ಅವರಿಗೆ ತಿಳಿಸಿದಳು.

ಒಣಗಿದ ಬಟ್ಟೆ ಧರಿಸಿದ ಆ ವಿಚಿತ್ರ ಮನುಷ್ಯ, ತನ್ನ ಕೊಠಡಿಯಿಂದ ಹೊರಬಂದು, ಚಿಂತೆಯಿಂದ ಅವರ ಕೆಲಸವನ್ನೇ ನೋಡುತ್ತಾ ನಿಂತ. ನಂತರ, ''ವಂದನೆಗಳು, ವಂದನೆಗಳು'' ಎಂದು ಹೇಳಿ, ತನ್ನ ಜೇಬಿನಿಂದ ಸ್ವಲ್ಪ ದುಡ್ಡು ತೆಗೆದು, ಅದನ್ನು ಬೇಲ ಮತ್ತು ಕಮಲರಿಗೆ ಕೊಟ್ಟು, ''ಸಿಹಿಗಾಗಿ'' ಎಂದು ಮೆಲ್ಲಗೆ ತಿಳಿಸಿ, ಅತ್ಯಂತ ಸಂಕೋಚದಿಂದ ತ್ವರಿತವಾಗಿ ಅಲ್ಲಿಂದ ಹೊರಟುಹೋದ.

ತಿಂಗಳ ಕೊನೆಯಲ್ಲಿ ಲೀಲಳಿಗೆ ಅವಳ ಪಗಾರ ಕೊಟ್ಟಾಗಲೂ ಅವನು ತುಂಬ ಸಂಕೋಚಗೊಂಡಂತೆ ತೋರಿತು. ಅವಳು ಆದಷ್ಟೂ ಶೀಘ್ರವಾಗಿ ಅವನ ದೃಷ್ಟಿಯಿಂದ ದೂರ ಸರಿದು, ಬಂಗಲೆಯನ್ನು ಸುತ್ತಿಕೊಂಡು ಕೊರಕಲನ್ನು ದಾಟಿ, ತನ್ನ ಗುಡಿಸಿಲಿಗೆ ಓಡಿ ಹೋದಳು. ಅವಳಿಗೆ ಸಂತೋಷದಿಂದ ನಗುವೇ ಬಂದಿತು. ಹಣವನ್ನು ಗಳಿಸುವುದು ಎಂತಹ ಸೊಗಸು! ಅಕ್ಕಿ, ಚಹಾ ಮತ್ತು ಸಕ್ಕರೆಯನ್ನು ತಮ್ಮ ಅಡಿಗೆ ಮನೆಯಲ್ಲಿ ಶೇಖರಿಸಲು ಈಗ ಸಾಕಷ್ಟು ಹಣವಿತ್ತು. ಲೀಲ, ಪ್ರತಿ ವಾರವೂ ಬಸ್‌ನಲ್ಲಿ ಅಲಿಬಾಗ್‌ಗೆ ಹೋಗುವಳು. ಸ್ವಲ್ಪ ದುಡ್ಡನ್ನು ತಂದೆಗೂ ಕೊಡುವಳು. ತಾಯಿಗಾಗಿ ಹಾಲು, ಹಣ್ಣನ್ನು ಕೊಳ್ಳುವಳು. ಹಣವು ಪ್ರತಿಯೊಂದನ್ನೂ ಸಾಧ್ಯ ಮಾಡುತ್ತದೆ. ಈ ಸಭ್ಯ ವ್ಯಕ್ತಿಯು ಹೀಗೆಯೇ ಬಂಗಲೆಯಲ್ಲಿ ತಂಗಿದ್ದರೆ ತಾನು ಸತತವಾಗಿ ಹಣವನ್ನು ಗಳಿಸಬಹುದು ಎಂಬುದು ಲೀಲಳ ಆಶಯವಾಗಿತ್ತು.

''ಆದರೆ ಮುಂಗಾರನ್ನು ಯಾರೂ ತಡೆಯಲಾರರು'' ಕಮಲ ಹೇಳಿದಳು, ''ಮುಂಗಾರು ಬಂದಾಗ, ಎಲ್ಲರೂ ಹೊರಟು ಹೋಗುತ್ತಾರೆ. ನಾವು ಮಾತ್ರ ಇಲ್ಲಿರುತ್ತೇವೆ.''

# 10

"ಓ, ಮುಂಗಾರು ಬರುತ್ತಿದೆ! "ವೃದ್ಧ ಪಾನ್‌ವಾಲಾ ಹಿಂದೆ ಸರಿಯುತ್ತಾ ಜೋರಾಗಿ ಕೂಗಿದ. ದೊಡ್ಡ ಅಲೆಯೊಂದು ಬಿರುಸಾಗಿ ಬಂದು, ವಿಹಾರ ಸ್ಥಳದ ಗೋಡೆಗೆ ಬಡಿದು, ಅದರ ಸಮೀಪದ ಅಲೆಗಳನ್ನು ನೋಡಲು ನಿಂತಿದ್ದ ಜನರ ಗುಂಪಿನ ಮೇಲೆ ಚಾವಟಿಯಿಂದ ಹೊಡೆದಂತೆ ನೀರನ್ನು ಚಿಮ್ಮಿಸಿತು. "ನೋಡು, ಹರಿ, ಮುಂಗಾರು ಬರುತ್ತಿದೆ!"

ಅಲೆಯ ನೀರು ತನ್ನನ್ನು ಒದ್ದೆ ಮಾಡುತ್ತಿದ್ದಂತೆ ಹರಿ ನಗುತ್ತಾ, ಹೌದೆಂಬಂತೆ ತಲೆದೂಗಿದ. ಮತ್ತೊಂದು ಅಲೆ ರಭಸದಿಂದ ಬಂದು ಗೋಡೆಗೆ ಬಡಿಯುತ್ತಿದ್ದಂತೆ ಜನರ ಗುಂಪು ಹಿಂದು ಹಿಂದಕ್ಕೆ ಓಡಿತು. ನಂತರ ಮತ್ತೊಂದು ಅಲೆ... ಇಡೀ ಸಮುದ್ರವೇ ತುಮುಲಕ್ಕೆ ಒಳಗಾಗಿತ್ತು. ಬೃಹದಾಕಾರದ ಕಪ್ಪು ಅಲೆಗಳು ರಭಸದಿಂದ ಕಡಲ ತೀರದತ್ತ ನುಗ್ಗಿ ಬರುತ್ತಿದ್ದವು. ಆಕಾಶದಲ್ಲಿ ಯಾವ ಮೋಡವೂ ಇರಲಿಲ್ಲ. ಆದರೆ ಅವು ಬರಲಿವೆ-ಯೆಂಬುದು ಸಮುದ್ರಕ್ಕೆ ತಿಳಿದಿದ್ದು, ಅದನ್ನು ಸಂಧಿಸಲು ಅದು ಮೇಲು ಮೇಲಕ್ಕೆ ಜಿಗಿಯುತ್ತಿರುವಂತೆ ತೋರುತ್ತಿತ್ತು.

ಮುಂಗಾರಿನ ಆಗಮನವನ್ನು ತೋರಿಸಲು ಪಾನ್‌ವಾಲಾ, ಹರಿಯನ್ನು ವೊರ್ಲಿ ಸಮುದ್ರದ ದಂಡೆಗೆ ಕರೆತಂದಿದ್ದ. ಪ್ರತಿ ವರ್ಷ ಜೂನ್ ತಿಂಗಳ ಮೊದಲ ವಾರದಲ್ಲಿ ಒಂದು ದಿನ ತಾನು ಇಲ್ಲಿಗೆ ಬರುವುದಾಗಿ ಅವನು ಹೇಳಿದ್ದ. ಅಂದು ಸ್ವಲ್ಪ ಮುಂಚಿತವಾಗಿಯೇ ತನ್ನ ಅಂಗಡಿಯನ್ನು ಮುಚ್ಚಿ, ತನ್ನ ತಲೆಯ ಮೇಲಿನ ಕಪ್ಪು ಟೋಪಿಯನ್ನು ಸರಿಪಡಿಸಿಕೊಂಡು, ಹರಿಗೆ ಸಂಜೆ ರಜೆ ಕೊಡುವಂತೆ ಜಗುವಿಗೆ ತಿಳಿಸಿ, ಬಸ್‌ನಲ್ಲಿ ಹರಿಯನ್ನು ಇಲ್ಲಿಗೆ ಕರೆತಂದಿದ್ದ. ಅಲ್ಲದೆ ಹರಿಗೆ ಎಳೆನೀರು ಕುಡಿಸುವುದಾಗಿಯೂ, ಒಂದು ಪೊಟ್ಟಣ ಹುರಿದ ಅವಲು ಕೊಡಿಸುವುದಾಗಿಯೂ ಹೇಳಿದ. ತಮ್ಮ ತಂದೆ ತಾಯಿಯರ ಜೊತೆ ಮನೆಯಿಂದ ಹೊರಬಂದು, ಆ ವಿಹಾರ ಸ್ಥಳದ ಉದ್ದಕ್ಕೂ ಇದ್ದ ಮೆರ್ರಿ-ಗೊ-ರೌಂಡ್‌ನಲ್ಲಿ ಕುಳಿತು, ಬಲೂನ್‌ಗಳನ್ನೂ, ಐಸ್-ಕ್ರೀಮ್‌ಗಳನ್ನೂ, ಎಳನೀರನ್ನೂ ಕೊಂಡು ಹರ್ಷಪಡುತ್ತಿದ್ದ ಅದೃಷ್ಟಶಾಲಿ ಮಕ್ಕಳಂತೆ ಹರಿಯೂ ಸಹ ಅವಲು ಪೊಟ್ಟಣವನ್ನು ಅಲ್ಲಾಡಿಸಿ, ಅದನ್ನು ಕೈ ಮೇಲೆ ಸುರಿದುಕೊಂಡು ತಿನ್ನುತ್ತಿದ್ದ. ಅವನಿಗೂ ಆ ಮಕ್ಕಳಂತೆಯೇ ತಾನೂ ಒಬ್ಬನೆಂಬ ಭಾವನೆ ಬಂದಿತ್ತು. ಆದರೆ ಸಣ್ಣ ಮಕ್ಕಳಂತಲ್ಲದೆ, ಕಷ್ಟಕರವಾದ ಜಗತ್ತಿನಲ್ಲಿ ಸೆಣಸುತ್ತಿರುವ ವಯಸ್ಕರ ಜೊತೆಗೂಡಿ ನಡೆಯುತ್ತಿರುವ ದೊಡ್ಡ ಹುಡುಗನಾಗಿದ್ದ. ಸಮುದ್ರದ ಮೇಲೆ ಭೋರ್ಗರೆಯುತ್ತಾ ಬೀಸುತ್ತಿದ್ದ ಗಾಳಿಯೂ, ಮೈಚುಚ್ಚುವಂತೆ ಚಿಮ್ಮುತ್ತಿದ್ದ ಅಲೆಗಳೂ, ಆಫ್ರಿಕಾದವರೆಗೆ ವ್ಯಾಪಿಸಿದ್ದ ಬೃಹತ್ ಸಾಗರದ ವಿಹಂಗಮ ದೃಶ್ಯವೂ ಹರಿಗೆ ತಾನು ದೀರ್ಘಕಾಲದಿಂದ ಅನುಭವಿಸದಿದ್ದ ಸಂತೋಷ ಮತ್ತು ಆಹ್ಲಾದತೆಯನ್ನು ನೀಡಿತ್ತು.

''ಪಾನ್‌ವಾಲಾ, ವಂದನೆಗಳು'' ಎಂದು ಹೇಳಲು ಅವನು ಮರೆಯಲಿಲ್ಲ.

ಮುಂಬೈನ ಜನತೆಗೆ ಮುಂಗಾರು ಎಷ್ಟು ಕಷ್ಟವಾಗುತ್ತದೆಂಬುದು ಹರಿಗೆ ಅಂದು ಸಂಜೆ ಗೊತ್ತಾಗಲಿಲ್ಲ.

ಪಾನ್‌ವಾಲಾ ಹೇಳಿದ್ದಂತೆ, ಜೂನ್ ಹತ್ತನೇ ತಾರೀಖು ಮಳೆ ರಭಸದಿಂದ ಸಮುದ್ರದ ಕಡೆಯಿಂದ ಬಂದು ನಗರದೊಳಗೆ ಸುರಿಯಲಾರಂಭಿಸಿತು. ಮುಂಬೈನ ಇತರ ನಿವಾಸಿ-ಗಳಂತೆಯೇ ಹರಿಯೂ ಸಹ ಮನೆಯೊಳಗೇ ಇದ್ದು, ನಗರದ ಮೇಲೆ ಹಾಸಿದ ದೊಡ್ಡ ಹಾಳೆಯಂತಿದ್ದ ಮಳೆಯನ್ನೂ, ರಸ್ತೆಗಳಲ್ಲಿ ಏರುತ್ತಿದ್ದ ನೀರನ್ನೂ ನೋಡಿದ. ಖಾನಾವಳಿಯ ಮುಂದಿನ ರಸ್ತೆ ಮೊದಲು ಒಂದು ಕಾಲುವೆಯಂತೆ ಕಂಡಿತು. ಅದು ಇಡೀ ವರ್ಷದ ಕೊಳೆಯನ್ನು ಹಠಾತ್ತನೆ ಮೇಲೆತ್ತಿ ರಭಸದಿಂದ ಮುಂದಕ್ಕೆ ಸಾಗಿಸುತ್ತಿತ್ತು. ನಂತರ ಅದು ಒಂದು ದೊಡ್ಡ ನದಿಯಂತೆ ಕಾಣುತ್ತಿತ್ತು. ಒಳಚರಂಡಿಗಳು ನೀರಿನಿಂದ ಮುಚ್ಚಲ್ಪಟ್ಟವು. ಏರುತ್ತಿದ್ದ ಅಲೆಗಳು ದೊಡ್ಡ ಕೊಳವೆಗಳ ನೀರನ್ನು ಮೇಲೆತ್ತಿ ರಸ್ತೆಯ ಮೇಲೆ ಬಿಟ್ಟವು, ಅವು ಎಲ್ಲೆಡೆ ನುಗ್ಗಿದವು. ಮೋಟಾರ್ ಕಾರುಗಳು ಕೆಟ್ಟು, ಮೊಣಕಾಲುದ್ದದ ಜಿಡ್ಡಾದ ನೀರಿನಲ್ಲಿ ನಿಂತುಬಿಟ್ಟವು.

ಸ್ವಲ್ಪ ಕಾಲ ನಗರದ ತುಂಟ ಹುಡುಗರಿಗೆ ಈ ಮಳೆಯು ಅತ್ಯಂತ ಸೊಗಸಾದ ಸಮಯವಾಗಿತ್ತು. ಅವರು ಕಾರುಗಳಿಗೆ ತಮ್ಮ ಭುಜ ಕೊಟ್ಟು ಎತ್ತರದ ಚಾಚು ಪ್ರದೇಶಗಳಿಗೆ ತಳ್ಳಿ ಚಾಲಕರಿಂದ ಪುಡಿಗಾಸು ಸಂಪಾದಿಸುತ್ತಿದ್ದರು. ಹರಿಯೂ, ಅಡಿಗೆ ಮನೆಯ ಇತರ ಇಬ್ಬರು ಹುಡುಗರೂ ಸಹ ಹೊರಗೆ ಹೋಗಿ, ದಿನದ ಖರ್ಚಿಗಾಗಿ ಸ್ವಲ್ಪ ದುಡ್ಡು ಸಂಪಾದಿಸಿದರು. ಅದೇ ಮೊದಲ ಸಲವಾಗಿ ಹರಿ, ತನ್ನ ಸಹ ಅಡಿಗೆ ಬಾಲಕರು ನಕ್ಕದ್ದನ್ನು ನೋಡಿದ. ಅವರ ಷರ್ಟುಗಳು ಮತ್ತು ನಿಕ್ಕರ್‌ಗಳು ಒದ್ದೆಯಾಗಿದ್ದವು. ಮುಖವೆಲ್ಲಾ ಒದ್ದೆಯಾಗಿತ್ತು. ತಲೆಯ ಕೂದಲಿನಿಂದ ನೀರಿಳಿಯುತ್ತಿತ್ತು. ಅವರು ಚಾಲಕರಿಂದ ಹೆಚ್ಚು ಮಜೂರಿಗಾಗಿ ಒತ್ತಾಯಿಸುತ್ತಾ ನೀರಿನಲ್ಲಿ ನಿಂತ ಕಾರುಗಳನ್ನೂ, ಟ್ಯಾಕ್ಸಿಗಳನ್ನೂ ಮೇಲಕ್ಕೆ ತಳ್ಳುತ್ತಿದ್ದರು.

ಮಳೆಯು ಒಂದು ವರ್ಷದ ಕೊಳಚೆಯನ್ನು ಎತ್ತಿಹಾಕಿ, ಬೇಸಿಗೆಯ ಸೆಖೆಯನ್ನು ನಿವಾರಿಸಿ, ನಗರವನ್ನು ಸ್ವಚ್ಛಪಡಿಸಿತು. ಹಠಾತ್ತಾಗಿ ಸೆಖೆ ಕಡಿಮೆಯಾದದ್ದು ಪ್ರತಿಯೊಬ್ಬರ ಮನಸ್ಸಿಗೂ ಮುದ ನೀಡಿತ್ತು, ವಿಹಾರ ಇಲ್ಲವೆ ರಜೆಯ ಭಾವನೆಯುಂಟುಮಾಡಿತ್ತು. ಮಕ್ಕಳು ಮಳೆಯಲ್ಲಿ ನೆನೆಯದೇ ಶಾಲೆಯನ್ನು ತಲುಪುವುದು ಸಾಧ್ಯವಿರದಿದ್ದರಿಂದ, ಅವರನ್ನು ಶಾಲೆಗೇ ಕಳಿಸುತ್ತಿರಲಿಲ್ಲವಾದ್ದರಿಂದ, ಎಲ್ಲ ಶಾಲೆಗಳಿಗೂ ರಜೆಯನ್ನು ನೀಡಲಾಗಿತ್ತು. ಅಲ್ಲದೆ, ನಿಮಿಷ ನಿಮಿಷಕ್ಕೂ ಏರುತ್ತಿದ್ದ ನೀರಿನಲ್ಲಿ ಸಿಕ್ಕಿಕೊಂಡ ಬಸ್‌ಗಳು ಮತ್ತು ರೈಲುಗಳಿಂದಾಗಿ ಕಛೇರಿಯ ಕೆಲಸಗಾರರೂ ಸಹ ಸಮಯಕ್ಕೆ ಸರಿಯಾಗಿ ಆಫೀಸುಗಳಿಗೆ ಹೋಗುವುದು ಸಾಧ್ಯವಿರಲಿಲ್ಲ. ಪ್ರವಾಹದಲ್ಲಿ ನೀರನ್ನು ಚಿಮ್ಮಿಸಿಕೊಂಡು ಆಟವಾಡುತ್ತಿದ್ದ ಹುಡುಗರು, ''ಸದ್ಯದಲ್ಲೇ ನಮಗೆ ದೋಣಿಗಳ ಅಗತ್ಯವಿದೆ'' ಎಂದು ಕೂಗುತ್ತಿದ್ದರು.

ಆದರೆ ಹರಿಗಾಗಲಿ ಅಥವಾ ಅಡಿಗೆ ಮನೆಯಲ್ಲಿದ್ದ ಇತರ ಇಬ್ಬರು ಹುಡುಗರಿಗಾಗಲಿ ಅವೇನು ವಿರಾಮದ ದಿನಗಳಾಗಿರಲಿಲ್ಲ. ಯಾವುದೇ ಕೆಲಸವನ್ನೂ ಗಿಟ್ಟಿಸಲಾಗದ ಕೂಲಿಗಳು ಮತ್ತು ಕೈಗಾಡಿ ಎಳೆಯುವವರು ಶ್ರೀಕೃಷ್ಣ ಖಾನಾವಳಿಗೆ ಬಂದು ಕೂಡುತ್ತಿದ್ದರು. ಚಹಾ

ಮತ್ತು ಬಿಸಿ ಊಟವನ್ನು ಕೇಳುತ್ತಿದ್ದರು. ರಸ್ತೆಗಳಲ್ಲಿರುತ್ತಿದ್ದ ಹುಡುಗರನ್ನು ಕರೆದು ಜಗು ಕೆಲಸಕ್ಕೆ ಹಚ್ಚುತ್ತಿದ್ದ. ಬಿಡುವಿಲ್ಲದೆ ಅವರು ಹೆಚ್ಚಿನ ವೇಳೆಯ ಕೆಲಸವನ್ನೂ ಮಾಡಬೇಕಿತ್ತು. ಕಲ್ಲಿದ್ದಲು ಮತ್ತು ಸೌದೆ ಹಸಿಯಾಗಿರುತ್ತಿದ್ದುದರಿಂದ ಉರಿ ಮಾಡುವುದೇ ತುಂಬ ಕಷ್ಟವಾಗಿತ್ತು. ಅದು ಹತ್ತಿಕೊಂಡಾಗಲೂ, ಚೆನ್ನಾಗಿ ಉರಿಯದೆ ಹೊಗೆಯೆದ್ದು, ಅವರ ಕಣ್ಣುಗಳು ಮತ್ತು ಗಂಟಲೊಳಗೆ ನುಗ್ಗಿ, ಅವರು ಕೆಮ್ಮುತ್ತಾ, ಕೊಳೆಯಾದ ಕೈಗಳಿಂದ ತಮ್ಮ ಕಣ್ಣುಗಳನ್ನು ಉಜ್ಜುತ್ತಾ ಇರುವಂತೆ ಮಾಡಿತ್ತು. ಕೆಸರನ್ನು ತುಳಿದ ಗಿರಾಕಿಗಳು ಖಾನಾವಳಿಯೊಳಗೆ ಬರುತ್ತಿದ್ದರು. ಇದರಿಂದಾಗಿ ಹುಡುಗರು ಆಗಾಗ್ಗೆ ಹರಕು ಬಟ್ಟೆ ಮತ್ತು ನೀರಿನಿಂದ ಕೆಸರನ್ನು ಒರೆಸಬೇಕಾಗುತ್ತಿತ್ತು. ಹೀಗಾಗಿ ನೀರಿನ ಬಕೆಟ್ ಕೆಸರಿನಿಂದಲೇ ತುಂಬಿದಂತಿತ್ತು. ಕೆಲವು ಸಲ ಅವರನ್ನು ಹೊರಗೆ ಕಳಿಸಿ, ಸಿಗರೇಟ್‌ಗಳನ್ನು ತರಿಸಲಾಗುತ್ತಿತ್ತು. ಆಗ ಅವರು ನೆನೆದುಕೊಂಡು ಬರುತ್ತಿದ್ದರು. ಹಾಕಿಕೊಂಡಿದ್ದ ಬಟ್ಟೆಗಳು ಒಣಗದೆ, ಚಳಿಯಿಂದ ಅವರು ನಡುಗಬೇಕಾಗಿತ್ತು.

ಅಂದು ಸಂಜೆಯ ವೇಳೆಗೆ, ಹರಿಗೆ ಹಿಂದೆಂದೂ ಇಲ್ಲದಷ್ಟು ದಣಿವಾಗಿತ್ತು. ಮಳೆ ಇನ್ನೂ ಸುರಿಯುತ್ತಲೇ ಇತ್ತು. ಆ ರಾತ್ರಿ ತಾನು ಪಾರ್ಕಿನಲ್ಲಿ ಮಲಗುವುದು ಸಾಧ್ಯವಿಲ್ಲವೆಂಬುದು ಹರಿಯ ಅರಿವಿಗೆ ಬಂದಿತು. ಬರೀ ಆ ದಿನವೇಕೆ, ಇಡೀ ಮಳೆಗಾಲ ಪೂರ್ತಿ ಅದು ಸಾಧ್ಯವಿರಲಿಲ್ಲ. ರಾತ್ರಿ, ಜಗು ದೀಪವಾರಿಸಿ ಬೀಗ ಹಾಕಲು ಕೀಲಿಕೈ ತೆಗೆದುಕೊಂಡಾಗ, ತಾನು ಹೊರಗೆ ಹೋಗುವುದು ಸಾಧ್ಯವಿಲ್ಲವೆಂದೂ, ಉಸಿರು ಕಟ್ಟುವಂತಹ ಆ ಕೊಠಡಿಯಲ್ಲಿ ಬೆಂಚಿನ ಮೇಲೆ ಮಲಗುವುದು ಬಿಟ್ಟು, ಅನ್ಯ ಮಾರ್ಗವಿಲ್ಲವೆಂದೂ ಹರಿಗೆ ಗೊತ್ತಾಯಿತು. ಅವನು ನಿದ್ರಿಸಲು ಪ್ರಯತ್ನಿಸಿದ, ಆದರೆ ನಿದ್ದೆ ಬರಲಿಲ್ಲ. ಆ ರಾತ್ರಿ, ಜೈಲಿನಲ್ಲಿ ತನ್ನ ಮೊದಲ ರಾತ್ರಿಯನ್ನು ಕಳೆದ ಕೈದಿಯಂತೆ ಅವನಿಗೆ ಭಾಸವಾಗಿತ್ತು.

* * *

ಮಳೆ ಹಗಲು-ರಾತ್ರಿ, ವಾರಗಟ್ಟಲೆ ಸುರಿಯಿತು. ಸುರಿಮಳೆ, ತುಂತುರುಮಳೆಯಾಗಿ ನಿಧಾನಗೊಂಡು ಪ್ರವಾಹ ಇಳಿಮುಖವಾದರೂ ಯಾವುದೂ ಒಣಗುತ್ತಿರಲಿಲ್ಲ. ಎಲ್ಲೆಲ್ಲೂ ಒದ್ದೆ, ಕೆಸರು ಮತ್ತು ವಾಸನೆ. ಹರಿ, ಕಚಡಾವನ್ನು ಡಬ್ಬಕ್ಕೆ ತುಂಬಲು ಇಲ್ಲವೆ ಗಿರಾಕಿಗಳಿಗೆ ಸಿಗರೇಟ್ ತರಲು ಹೊರಗೆ ಹೋದಾಗಲೆಲ್ಲಾ ಅವನ ಷರ್ಟು ಒದ್ದೆಯಾಗುತ್ತಿತ್ತು. ಇಡೀ ದಿನ ತನ್ನ ದೇಹಕ್ಕೆ ಅಂಟಿಕೊಂಡ ಒದ್ದೆ ಬಟ್ಟೆಯೊಡನೆ ಕಾಲ ಕಳೆಯಬೇಕಾಗುತ್ತಿತ್ತು. ಹರಿಗೆ ಗಡಿಯಾರದ ಅಂಗಡಿಗಾಗಲಿ, ಪಾರ್ಕಿಗಾಗಲಿ ಹೋಗಲು ಆಗುತ್ತಿರಲಿಲ್ಲವಾದ್ದರಿಂದ ಅಡಿಗೆ ಮನೆ ಮತ್ತು ಖಾನಾವಳಿಯನ್ನು ಬಿಟ್ಟು ಬೇರೆ ಮಾರ್ಗವೇ ಇರಲಿಲ್ಲ. ಶ್ರೀಕೃಷ್ಣ ಖಾನಾವಳಿಯಲ್ಲೇ ಇರಬೇಕಾಗಿದ್ದ ಹರಿಗೆ ಜೀವನ ಪರ್ಯಂತ ಕಾರಾಗೃಹದಲ್ಲೇ ಇರಬೇಕಾದ ಕೈದಿಯ ಅನುಭವವಾಗುತ್ತಿತ್ತು.

ಜಗುವಿಗೆ ಇದು ಅರ್ಥವಾಗಿರಬೇಕು. ಒಂದು ರಾತ್ರಿ ಅವನು ಅಡಿಗೆ ಮನೆಗೆ ಬೀಗ ಹಾಕುತ್ತಿದ್ದಾಗ ಹರಿಯನ್ನು ನೋಡಿದ. ಹರಿ ಮಲಗದೆ ನೆಲದ ಮೇಲೆ ಕುಳಿತಿದ್ದು, ತನ್ನ ಮೊಣಕಾಲುಗಳನ್ನು ಕೈಗಳಿಂದ ಸುತ್ತಿಕೊಂಡು ಕೆಮ್ಮುತ್ತಿದ್ದ.

''ನಿನಗೆ ಹುಷಾರಿಲ್ಲ'' ಜಗು ಹೇಳಿದ, ''ನೀನು ನನ್ನ ಜೊತೆ ಬರುವುದು ಒಳ್ಳೆಯದು. ನಿನ್ನನ್ನು ನಮ್ಮ ಮನೆಗೆ ಕರೆದುಕೊಂಡು ಹೋಗುತ್ತೇನೆ.''

ಯಾವುದೇ ಸ್ಥಳಕ್ಕಾದರೂ ಹೋಗಲು ಸಿದ್ಧವಿದ್ದ ಹರಿಗೆ, ಈ ಆಹ್ವಾನದಿಂದ ಕೃತಜ್ಞತಾ ಭಾವ ಮೂಡಿತು. ಅವನು ಯಾವ ಮಾತೂ ಆಡದೆ ಎದ್ದು ಜಗುವಿನ ಜತೆ ಖಾನಾವಳಿಯಿಂದ ಹೊರಬಂದು ರಸ್ತೆಯಲ್ಲಿ ಅವನೊಡನೆ ಹೊರಟ. ಜಗು ಎಲ್ಲಿ ವಾಸಿಸುವನೆಂಬುದಾಗಲೀ ತನ್ನನ್ನು ಎಲ್ಲಿಗೆ ಕರೆದುಕೊಂಡು ಹೋಗುತ್ತಿದ್ದಾನೆಂಬುದಾಗಲೀ, ಅವನಿಗೆ ಗೊತ್ತಿರಲಿಲ್ಲ. ಯಾರ ಮನೆಯಾದರೇನು, ಅಂತೂ ತನ್ನನ್ನು ಯಾರೋ ಒಬ್ಬರ ಮನೆಗೆ ಒಯ್ಯುತ್ತಿರು-ವುದಕ್ಕಾಗಿ ಅವನು ಜಗುವಿಗೆ ಆಭಾರಿಯಾಗಿದ್ದ.

* * *

ಜಗು ಒಂದು ರೆಸ್ಟೊರೆಂಟಿನ ಮಾಲೀಕ. ಅತ್ಯಂತ ನಿಬಿಡವಾದ ಮಾರ್ಗದಲ್ಲಿನ ಖಾನಾವಳಿಯೊಂದರ ಒಡೆಯ. ಅವನಿಗೆ ಗಿರಾಕಿಗಳು ಅಪಾರ. ಆದರೂ ಅವನ ಮನೆಯಿದ್ದದ್ದು ಒಂದು ಕೊಳಚೆ ಪ್ರದೇಶದಲ್ಲಿ. ಚಿಂದಿಗಳು ಮತ್ತು ದಬ್ಬದ ತಗಡುಗಳನ್ನು ಹೊದಿಸಿದ, ಮುರುಕು ಗುಡಿಸಿಲುಗಳುಳ್ಳ ಒಂದು ಕಾಲನಿ. ಮುಂಬೈನಲ್ಲಿ ಅವುಗಳಿಗೆ 'ಜೋಪಡ್‌ಪಟ್ಟಿ' ಎಂದು ಕರೆಯುತ್ತಾರೆ. ಮುಂಬೈಗೆ ಕೆಲಸಕ್ಕಾಗಿ ಬಂದು, ತಮ್ಮ ಜೀವನೋಪಾಯ ನಡೆಸುತ್ತಿದ್ದ ಲಕ್ಷಾಂತರ ಜನರಿಗೆ, ನಗರದಲ್ಲಿ ಸಾಕಷ್ಟು ಮನೆಗಳಾಗಲಿ, ಫ್ಲಾಟ್‌ಗಳಾಗಲಿ ಇರಲಿಲ್ಲ. ಮನೆಗಳ ಅಭಾವದಿಂದಾಗಿ ಅತ್ಯಂತ ಚಿಕ್ಕ ಫ್ಲಾಟ್‌ಗಳಿಗೂ ಬಾಡಿಗೆ ಅಪಾರ. ಜಗುವಿನಂತಹ ಜನರಿಗೆ ಈ ಬಾಡಿಗೆ ತುಂಬ ದುಬಾರಿ. 'ಜೋಪಡ್ ಪಟ್ಟಿ'ಯಲ್ಲಿ ತನಗೊಂದು ಜೋಪಡಿ ಬಾಡಿಗೆಗೆ ಸಿಕ್ಕಿರುವುದು ತನ್ನ ಅದೃಷ್ಟವೆಂದೇ ಜಗು ತಿಳಿದಿದ್ದ.

ಮುಂಗಾರಿನ ಆಗಮನವನ್ನು ನೋಡಲು, ಪಾನ್‌ವಾಲಾ, ಹರಿಯನ್ನು ಕರೆದುಕೊಂಡು ಹೋಗಿದ್ದ ವಿಸ್ತಾರವಾದ ಸಾಲುಮರಗಳ ರಸ್ತೆಯ ಮತ್ತೊಂದು ಪಾರ್ಶ್ವದಲ್ಲಿ, ಸಮುದ್ರದ ಪಕ್ಕದ ಬೆಟ್ಟಕ್ಕೆ ಅಂಟಿಕೊಂಡಂತೆ ಗುಡಿಸಿಲುಗಳಿದ್ದವು. ಬೆಟ್ಟದ ಸಾಲು ಮರಗಳ ವಿಶಾಲವಾದ ರಸ್ತೆಯ ಅಕ್ಕಪಕ್ಕಗಳಲ್ಲಿ ಕಡುಗೆಂಪು, ಹಸಿರು ಮತ್ತು ಹಳದಿ ಬಣ್ಣಗಳ ಮನೆಗಳು, ವಿಶಾಲವೂ, ಎತ್ತರವೂ ಆಗಿದ್ದು, 'ಸನ್‌ಶೈನ್,' 'ಸೀಗಲ್' ಮುಂತಾದ ಹೆಸರುಗಳನ್ನು ಹೊಂದಿದ್ದ ಆ ಸೌಧಗಳಲ್ಲಿ ಶ್ರೀಮಂತರು ವಾಸಿಸುತ್ತಿದ್ದರು. ಬೆಟ್ಟದ ಮತ್ತೊಂದು ಪಾರ್ಶ್ವದಲ್ಲಿದ್ದ ಬಡಜನರ ಗುಡಿಸಿಲುಗಳು, ತೆರೆದ ಕೊಳಚೆ ಚರಂಡಿಯೊಳಗೊ, ಇಲ್ಲವೆ ಅಪಾರ ಜನ ಮತ್ತು ವಾಹನ ಸಂಚಾರದ ರಸ್ತೆಯೊಳಗೊ ಬೀಳುವಂತೆ ಕಾಣುತ್ತಿದ್ದವು.

ಜಗುವಿನ ಜತೆ ಕಿರಿದಾದ ರಸ್ತೆಯಲ್ಲಿ ಹೋಗುತ್ತಿದ್ದಾಗ, ಮತ್ತನೆಯ ಕೆಸರಿನಲ್ಲಿ ತನ್ನ ಕಾಲುಗಳು ಜಾರುತ್ತಿವೆಯೆಂಬ ಭಾವನೆ ಬಂತು ಹರಿಗೆ. ಇಡೀ ಬೆಟ್ಟವೇ ಕೆಸರಾಗಿ ಪರಿವರ್ತನೆಗೊಂಡಂತೆ ಕಾಣುತ್ತಿತ್ತು. 'ಜೋಪಡ್‌ಪಟ್ಟಿ'ಯನ್ನೂ ರಸ್ತೆಯನ್ನೂ ಬೇರ್ಪಡಿಸು-ತ್ತಿದ್ದ ಒಳಚರಂಡಿಯೊಳಗೆ, ಗುಡಿಸಿಲುಗಳು ಸಡಿಲಗೊಂಡು ಜಾರುತ್ತಿರುವಂತೆ ಕಾಣುತ್ತಿತ್ತು.

ಹರಿ, ತನ್ನ ಷರ್ಟಿನ ತೋಳಿನಿಂದ ಮೂಗು ಒರೆಸಿಕೊಳ್ಳುತ್ತಾ, ಕಣ್ಣು ಮೇಲೆ ಬೀಳುತ್ತಿದ್ದ ಕೂದಲ ಗೊಂಚಲನ್ನು ತಳ್ಳುತ್ತಾ, ಆ ಕಳಪೆ ಗುಡಿಸಿಲುಗಳ ಪಕ್ಕ ಇದ್ದ ಕಿರಿದಾದ ಕೊಳಕು ಹಾದಿಯಲ್ಲಿ ಜಗುವಿನ ಜತೆ ಹೋಗುತ್ತಿದ್ದಂತೆ ಚಿಂತೆ ಪ್ರಾರಂಭವಾಗಿತ್ತು. ಜಗು, ನಿಜವಾಗಿ ಇಂತಹ ಕೆಟ್ಟ ಗುಡಿಸಿಲಿನಲ್ಲಿ ವಾಸಿಸುತ್ತಿದ್ದಾನೆಯೆ? ತನ್ನನ್ನು ಇಂತಹ ದರಿದ್ರ ಜಾಗಕ್ಕೆ ಕರೆದುಕೊಂಡು ಬರುವುದಾದರೂ ಎಂತು? ನಿಜ, ಅವನು ಕರೆದುಕೊಂಡು ಬಂದಿದ್ದಾನೆ,

ಕರೆದುಕೊಂಡು ಬರಲೇಬೇಕಾಗಿತ್ತು. ಅವನು ಡಬ್ಬದ ತಗಡುಗಳು, ಹರಕು ಬಟ್ಟೆಗಳಿಂದ ನಿರ್ಮಿಸಿದ್ದ ಗುಡಿಸಿಲ ಮುಂದೆ ನಿಂತು, ಬಾಗಿಲಿಗೆ ಹಾಕಿದ್ದ ಹರಕು ಪರದೆಯನ್ನು ಪಕ್ಕಕ್ಕೆ ಸರಿಸಿ, ಬಗ್ಗಿಕೊಂಡು ಒಳಗೆ ಹೋದ. ನಂತರ ಒಳಗೆ ಬರುವಂತೆ ಸನ್ನೆ ಮಾಡಿ ಹರಿಯನ್ನೂ ಕರೆದ. ಹರಿಯೂ ಸಹ ಬಗ್ಗಿ, ತೆವಳಿಕೊಂಡು ಒಳಗೆ ಹೋದ.

ಹೊರಗಿನ ಮಳೆ, ಕೊಚ್ಚೆನೀರು ಮತ್ತು ಕೆಸರು-ಇವೆಲ್ಲವೂ ಬಾಗಿಲ ಸಂದಿಯಿಂದ, ಗೋಡೆಯ ಬಿರುಕುಗಳಿಂದ ಮತ್ತು ಛಾವಣಿಯಿಂದ ಒಳಗೆ ನುಗ್ಗಿದ್ದವು. ಗುಡಿಸಿಲಿನ ಮಣ್ಣಿನ ನೆಲವನ್ನು ಮಳೆನೀರಿನಿಂದ ಮತ್ತು ಕಚಡಾ ವಸ್ತುಗಳಿಂದ ಸಾರಿಸಿದಂತಿತ್ತು. ಜಗುವಿನ ಕುಟುಂಬದವರು, ತೆಪ್ಪವೊಂದರಲ್ಲಿರುವಂತೆ, ಹಗ್ಗದ ಮಂಚವೊಂದರ ಮೇಲೆ ಗುಂಪಾಗಿ ಕುಳಿತಿದ್ದರು. ಟಿನ್ನಿನ ಡಬ್ಬಗಳು ಮತ್ತು ಕಾರ್ಡ್‌ಬೋರ್ಡ್ ಪೆಟ್ಟಿಗೆಗಳನ್ನು ಕಲ್ಲುಗಳ ಮೇಲೆ ಪೇರಿಸಲಾಗಿತ್ತು. ಛಾವಣಿಗೆ ಹಾಕಿದ್ದ ಬೊಂಬುಗಳಿಗೆ ಕೆಲವು ಗಂಟುಗಳನ್ನು ತೂಗು ಹಾಕಲಾಗಿತ್ತು. ಹರಿ ನಿಸ್ಸಹಾಯಕನಾಗಿ ನೋಡುತ್ತಾ ನಿಂತಿದ್ದ. ಇತರರ ಜೊತೆ ತಾನೂ ಆ ಹಗ್ಗದ ಮಂಚವನ್ನು ಏರಬೇಕೇಂಬುದೇ ಅವನ ಯೋಚನೆಯಾಗಿತ್ತು. ಜಗುವಿನ ಕುಟುಂಬದವರು ಅದರಲ್ಲಿ ಈಗಾಗಲೇ ತುಂಬಿದ್ದರು.

ಆದರೆ, ಇಲ್ಲ. ಅಲ್ಲಿದ್ದ ಮರದ ಬೆಂಚೊಂದರ ಪೂರ್ತಿ ಮಡಕೆ-ಕುಡಿಕೆಗಳು, ಪೆಟ್ಟಿಗೆಗಳು ಮತ್ತು ಗಂಟುಗಳನ್ನು ಇಟ್ಟಿರಲಿಲ್ಲ. "ಇಲ್ಲಿ ಕೂಡು, ಹರಿ" ಜಗು ಹೇಳಿ ಹಗ್ಗದ ಮಂಚದ ಮೇಲೆ ತುಂಬಿಕೊಂಡಿದ್ದ ತನ್ನ ಕುಟುಂಬದತ್ತ ತಿರುಗಿದ. ಛಾವಣಿಯಿಂದ ಸೋರುತ್ತಿದ್ದ ನೀರಿನಿಂದ ತಪ್ಪಿಸಿಕೊಳ್ಳಲು, ತಲೆಯ ಮೇಲೆ ಹರಕು ಬಟ್ಟೆಗಳನ್ನು ಎಳೆದುಕೊಂಡಿದ್ದ ಹಲವಾರು ಕಣ್ಣುಗಳು ಹರಿಯನ್ನು ನೋಡಿದವು. ಹೊರಗೆ ಚರಂಡಿಯಾಚೆ ಇದ್ದ ಬೀದಿ ದೀಪದಿಂದ ಮಂದವಾದ ಬೆಳಕು ಬರುತ್ತಿದ್ದರೂ ಆ ಗುಡಿಸಿಲಿನೊಳಗೆ ಕತ್ತಲು ಆವರಿಸಿತ್ತು.

ನಂತರ ಒಂದು ಹೆಣ್ಣು ಧ್ವನಿ ಮಾತನಾಡಲಾರಂಭಿಸಿತು. ಆ ಮಾತುಗಳು ಒರಟು, ಕೀರಲು ಮತ್ತು ರಭಸವಾಗಿದ್ದುದರಿಂದ ಹರಿಗೆ ಮೊದಲು ಅರ್ಥವಾಗಲಿಲ್ಲ. ಆದರೆ ಸ್ವಲ್ಪ ಸಮಯದ ನಂತರ, ಅವನಿಗೆ ಗೊತ್ತಿದ್ದ ಬೈಗುಳದ ಮಾತುಗಳು ಕೇಳಲಾರಂಭಿಸಿದ್ದರಿಂದ ಹರಿ ಹೆದರಿ, ತುಂಬ ಚಿಂತಿತನಾಗಿ ಸಹಾಯಕ್ಕಾಗಿ ಜಗುವಿನತ್ತ ನೋಡಿದ.

"ಬಾಯ್ಮುಚ್ಚು" ಜಗು ಆರ್ಭಟಿಸಿದ. "ನನಗೆ ಊಟ ಕೊಡು, ಈ ಹುಡುಗನಿಗೂ ಇನ್ನೊಂದು ತಟ್ಟೆ ತೊಗೊಂಡು ಬಾ. ಇವನಿಗೆ ಹುಷಾರಿಲ್ಲ. ನಾಳೆ ಬೆಳಗ್ಗೆ ಅವನನ್ನು ಆಸ್ಪತ್ರೆಗೆ ಕರೆದುಕೊಂಡು ಹೋಗುತ್ತೇನೆ. ಇಂದು ರಾತ್ರಿ ಅವನು ಇಲ್ಲೇ ಮಲಗುತ್ತಾನೆ."

ಕೀರಲು ಮತ್ತು ಹರಿತವಾದ ಹೆಣ್ಣಿನ ಧ್ವನಿ ನಿಲ್ಲದೆ ಸತತವಾಗಿ ಮುಂದುವರಿಯಿತು. ಹಗ್ಗದ ಮಂಚದ ಮೇಲಿದ್ದ ಗುಂಪು ಚಲಿಸಿ, ವ್ಯಕ್ತಿಗಳಾಗಿ ಬೇರ್ಪಟ್ಟಿತು. ಈ ಪೈಕಿ ಒಂದು ವ್ಯಕ್ತಿ ಕೆಳಗಿಳಿದು, ಕೆಸರಿನಲ್ಲೇ ಹೋಗಿ, ಅವರಿಬ್ಬರಿಗೂ ತಗಡಿನ ತಟ್ಟೆಗಳಲ್ಲಿ ಊಟ ತಂದು ಕೊಟ್ಟಿತು.

"ನಮಗೇ ತಿನ್ನಲು ಸಾಕಷ್ಟಿಲ್ಲ, ಅಂಥದ್ದರಲ್ಲಿ ಇನ್ನೂ ಒಬ್ಬನನ್ನು ಊಟಕ್ಕೆ ಕರೆತಾ" ತಟ್ಟೆಗಳನ್ನು ಅವರ ಮುಂದೆ ಚಾಚುತ್ತಾ, ಆ ಹೆಂಗಸು ಅರಚಿತು, "ನನ್ನ ಮಕ್ಕಳ ಪಾಲನ್ನು ನಿನ್ನ ಹೊಸ ಸ್ನೇಹಿತನಿಗೆ ಕೊಡುವೆನೆಂದು ಭಾವಿಸಿದ್ದೀಯೇನು? ನಾವು ಉಪವಾಸ

ಬಿದ್ದಿರುತ್ತೀವೆಂದು ತಿಳಿದಿದ್ದೀಯೇನು?''

''ಸಾಕು ನಿಲ್ಲಿಸು'' ಜಗು ಅವಳತ್ತ ಕೆಟ್ಟ ಮುಖಮಾಡಿ ಕೋಪದಿಂದ ಹೇಳಿದ, ''ನಾಲಿಗೆಯನ್ನು ಬಿಗಿಹಿಡಿ. ಇಲ್ಲದಿದ್ದರೆ ನಾನು ಸೀದಾ ಹೆಂಡದಂಗಡಿಗೆ ಹೋಗುತ್ತೇನೆ. ನೀನು ನನಗಾಗಿ ಮಾಡಿರುವ ಈ ದರಿದ್ರ ಊಟಕ್ಕೆ ಬದಲು ಕುಡಿಯುತ್ತೇನೆ, ಅಷ್ಟೇ.''

''ಹೋಗು, ಹೋಗು'' ಅವಳು ಕೂಗಿದಳು, ''ನಾನೇನು ನಿನ್ನನ್ನು ತಡೆದಿಟ್ಟಿಲ್ಲ. ನಿನಗೆ ಬೇಕಾಗಿರುವುದೂ ಅದೇ. ಹೆಂಡದಂಗಡಿಗೆ ಹೋಗಲು ನಿನಗೊಂದು ನೆಪ ಬೇಕು, ಅಷ್ಟೆ. ನೀನು ಹೋಗಿ ವಿಷ ಸೇವಿಸಿದರೆ, ನನಗೇನು? ವಿಷ ಸೇವಿಸಿ, ನೀನು ಸಾಯುತ್ತೀ, ಅಷ್ಟೆ. ಹೂಂ.. ನಿನ್ನ ತಿಥಿಗೆ ಬಂದು ನಾನು ನಗುತ್ತೇನೆ... ನಾನು ಮಕ್ಕಳೊಡನೆ ಹಳ್ಳಿಗೆ ಹೋಗು-ತ್ತೇನೆ. ಅಲ್ಲಿ ಉಪವಾಸ ಬೀಳುತ್ತೇವೆ, ಹದ್ದುಗಳು ನಮ್ಮ ಮೂಳೆಗಳನ್ನೂ ಕಿತ್ತು ತಿನ್ನುತ್ತವೆ.''

ತಟ್ಟೆಯ ಮುಂದೆ ಕುಳಿತಿದ್ದ ಹರಿಯ ತಲೆ ಬಗ್ಗಿತ್ತು. ಅವನು ಒಂದೇ ಒಂದು ತುಣುಕು ರೊಟ್ಟಿಯನ್ನೂ ತಿನ್ನಲು ಇಷ್ಟಪಡಲಿಲ್ಲ. ಆದರೆ ಜಗು ಎಲ್ಲವನ್ನೂ ಗಬಗಬನೆ ತಿಂದು, ಎದ್ದು ನಿಂತು, '' ಆಗಲಿ, ನೀನು ಅಷ್ಟು ಬಲಾತ್ಕರಿಸಿದ ಮೇಲೆ ನಾನು ಹೋಗೇ ಹೋಗುತ್ತೇನೆ'' ಎಂದು ಹೇಳಿ ಅಲ್ಲಿಂದ ಮಾಯವಾದ. ಹರಿಯೊಬ್ಬನೇ ಆ ಹೆಂಗಸಿನ ಜೊತೆ ಉಳಿಯಬೇಕಾಯಿತು.

ಆದರೆ ಜಗು ಹೋದ ಕೂಡಲೇ ಅವಳು ಮೌನವಾದಳು. ಅವಳು ಹಗ್ಗದ ಮಂಚವೇರಿ ಕುಳಿತಳು. ಚಿಂದಿ ಬಟ್ಟೆಯೊಂದನ್ನು ತಲೆಗೆ ಹೊದ್ದುಕೊಂಡಳು. ಬಟ್ಟೆಯ ಸಂದಿಯಿಂದ ಹರಿಯನ್ನು ದಿಟ್ಟಿಸಿ ನೋಡಿದಳು. ಅವನೂ ಅವಳನ್ನು ದಿಟ್ಟಿಸಿ ನೋಡಿದ. ನಂತರ ಜೋರಾಗಿ ಸೊರಗುಟ್ಟಿ ತನ್ನ ಪಕ್ಕದಲ್ಲಿ ಮಲಗಿದ್ದ ಮಗುವನ್ನು ತಟ್ಟಲಾರಂಭಿಸಿದಳು. ಅವಳು ಜೋರಾಗಿ ನಿಟ್ಟುಸಿರು ಬಿಟ್ಟದ್ದು ಹರಿಗೆ ಕೇಳಿಸಿತು.

''ಹೂಂ, ಮಲಕ್ಕೊ... ಮಲಕ್ಕೊ'' ಅವಳು ಹೇಳಿದಳು. ಅವಳೇನು ತನಗೆ ಹೇಳುತ್ತಿದ್ದಾಳೋ, ಇಲ್ಲವೆ ಮಗುವಿಗೋ ಎಂಬುದು ಹರಿಗೆ ಗೊತ್ತಾಗಲಿಲ್ಲ. ''ಮಲಗು-ವುದು, ನಿದ್ದೆ ಮಾಡುವುದು ಬಿಟ್ಟು, ಬೇರೆ ಮಾಡುವುದಾದರೂ ಏನು? ಇಲ್ಲದಿದ್ದರೆ, ಸಾಯಬೇಕೊ? ಗಂಡಸರು ಪಡಖಾನೆಗೆ ಹೋಗಿ ಕುಡಿದು ಮರೆಯುತ್ತಾರೆ. ಆದರೆ ನಾವೇನೂ ಮಾಡಲಾಗದು. ಆದ್ದರಿಂದ, ನಾವು ಮಲಗಿ ನಿದ್ದೆ ಮಾಡಬೇಕು, ಅಷ್ಟೆ'' ಅವಳು ಮಗುವನ್ನು ತಟ್ಟುತ್ತಾ, ನಿಟ್ಟುಸಿರು ಬಿಡುತ್ತಾ ಮತ್ತೆ ಮತ್ತೆ ಹೇಳಿದಳು.

ಹರಿಗೆ ಅವಳೊಡನೆ ಮಾತನಾಡಬೇಕೆನಿಸಿತು. ಇಂತಹ ಕಹಿ ಮತ್ತು ವಿಷಾದದ ದನಿಯಲ್ಲಿ ಅವಳು ಮಾತನಾಡುವುದಕ್ಕೆ ಕಾರಣವೇನೆಂಬುದು ಹರಿಗೆ ಗೊತ್ತಿತ್ತು. ತಮ್ಮಪ್ಪ ಕತ್ತಲೆಯಲ್ಲಿ ಹಳ್ಳಿಯಿಂದ ಹಟ್ಟಿಗೆ ಹಿಂದಿರುಗುವುದನ್ನು ಕಾಯುತ್ತಾ ನಡು ರಾತ್ರಿಯಲ್ಲಿ ತಾನು ಮತ್ತು ಲೀಲ, ಗುಡಿಸಿಲಲ್ಲಿ ಹೀಗೆ ಮಾತನಾಡುತ್ತಾ ಕುಳಿತಿರುತ್ತಿದ್ದುದು ಅವನ ನೆನಪಿಗೆ ಬಂತು. ತನಗಾಗಿ, ಲೀಲಳಿಗಾಗಿ ಮತ್ತು ತನ್ನ ತಾಯಿಗಾಗಿ ಈ ಹೆಂಗಸು ಈ ರೀತಿ ಮಾತನಾಡುತ್ತಿದ್ದಾಳೇನೊ ಎಂದು ಹರಿಗನಿಸಿತು. ಅವಳ ಬಗ್ಗೆ ಅವನ ಭೀತಿ ಮರೆಯಾಯಿತು.

'' ಅವನು ಪ್ರತಿ ರಾತ್ರಿ ಕುಡಿಯುತ್ತಾನಾ?'' ಕೊನೆಗೆ ಹರಿ ಅವಳನ್ನು ಕೇಳಿದ.

ಆ ಹೆಂಗಸು ತಲೆಯಾಡಿಸುತ್ತಾ,'' ಇಲ್ಲ. ಅವನು ಈ ಜೋಪಡ್‌ಪಟ್ಟಿಯಲ್ಲಿರುವ ಇತರರಷ್ಟು ಕೆಟ್ಟವನಲ್ಲ. ಅವನಿಗೆ ತುಂಬ ದುಃಖವಾಗಿರುವಾಗ ಅಥವಾ ಚಿಂತೆಯಿದ್ದಾಗ

ಮಾತ್ರ ಕುಡಿಯುತ್ತಾನೆ.''

''ನಮ್ಮಪ್ಪ ಪ್ರತಿ ರಾತ್ರಿ ಕುಡಿಯುತ್ತಾನೆ'' ಹರಿ ಹೇಳಿದ. ಅವನು ಹಿಂದೆ ಯಾರಿಗೂ ಈ ವಿಷಯ ತಿಳಿಸಿರಲಿಲ್ಲ. ಆದರೆ ತಮ್ಮ ಆಹಾರವನ್ನು ಕಸಿಯಲು ಬಂದಿದ್ದಾನೆಂದು ಹೇಳಿ, ತನ್ನ ಮೇಲೆ ರೇಗಿ ಕೂಗಾಡಿದ್ದ ಒಬ್ಬ ಅಪರಿಚಿತ ಹೆಂಗಸಿಗೆ ಬಹಿರಂಗವಾಗಿ ಈ ವಿಷಯ ಹೇಳುತ್ತಿದ್ದ.

''ಹೌದೆ? ಅವನು ಪ್ರತಿ ರಾತ್ರಿ ಕುಡಿಯುತ್ತಾನಾ? ನಿನ್ನ ತಾಯಿಗೆ ಹೊಡೆದ. ಬಡಿಯುತ್ತಾನಾ? ನಿಮ್ಮನ್ನೆಲ್ಲಾ ಉಪವಾಸ ಕೆಡವುತ್ತಾನಾ?'' ಆಸಕ್ತಿಯಿಂದ ಅವಳು ಕೇಳಿದಳು.

ಹರಿ, ಹೌದೆನ್ನುವಂತೆ ತಲೆಯಾಡಿಸಿ, ಮಾತನಾಡುವ ಬದಲು ಕೆಮ್ಮಿದ. ಅವನೇನೂ ಅವಳಿಗೆ ಹೆಚ್ಚು ಹೇಳಬೇಕಾಗಿರಲಿಲ್ಲ. ಅವಳಿಗೆ ಎಲ್ಲವೂ ಗೊತ್ತಿತ್ತು.

''ಮಲಗಿಕೊ, ಮಗ. ನಾಳೆ ಬೆಳಗ್ಗೆ ಆಸ್ಪತ್ರೆಯಿಂದ ನಿನಗೆ ಔಷಧಿ ತಂದುಕೊಡುತ್ತೇವೆ. ಅಲ್ಲಿರುವ ವೈದ್ಯರಲ್ಲಿ ನೆಗಡಿ ಕೆಮ್ಮಿಗೆ ಔಷಧವಿದೆ. ನಾನೂ ನನ್ನ ಮಗುವನ್ನು ಅಲ್ಲಿಗೆ ಕರೆದೊಯ್ಯಬೇಕು. ನನ್ನ ಮಗುವೂ ಅಸ್ವಸ್ಥವಾಗಿದೆ. ಅವಳಿಗೆ ಜ್ವರ.'' ಅವಳು ತನ್ನ ಪಕ್ಕದಲ್ಲಿದ್ದ ಮಗುವನ್ನು ತಟ್ಟುತ್ತಾ ಹೇಳಿದಳು.

ಹರಿ ಮುದುಡಿಕೊಂಡು ಬೆಂಚಿನ ಮೇಲೆ ಮಲಗಿದ. ನಿದ್ರೆ ಮಾಡಲು ಪ್ರಯತ್ನಿಸಿದ. ತನ್ನ ಕುಟುಂಬದ ಸಂಕಟವನ್ನು ಹೆಚ್ಚಿಸಲು ಜಗು ತನ್ನನ್ನೇಕೆ ಇಲ್ಲಿಗೆ ಕರೆತಂದ ಎಂದು ಯೋಚಿಸಿದ.

* * *

ಮಾರನೆ ಬೆಳಗ್ಗೆ ಕೆಸರಿನ ಬೆಟ್ಟದ ಮತ್ತೊಂದು ಪಾರ್ಶ್ವದಲ್ಲಿ ಅಂದರೆ, ಸಂಪದ್ಯುಕ್ತ, ಅನುಕೂಲಸ್ಥ ಮತ್ತು ಸುಖವಾದ ಜೀವಿಗಳಿದ್ದ ಪಾರ್ಶ್ವದಲ್ಲಿ-ಆಸ್ಪತ್ರೆಗೆ ಹೋಗುವ ಮಾರ್ಗದಲ್ಲಿ ಜಗುವಿನ ಹಿಂದೆ ಹೋಗುತ್ತಿದ್ದಾಗ ಹರಿ ಹೇಳಿದ, ''ನಾನು ಖಾನಾವಳಿಯಲ್ಲೇ ಇರುತ್ತೇನೆ. ಜಗು, ನನಗೆ ಇಲ್ಲಿ ಜಾಗವಿಲ್ಲ. ನಾನು ವಾಪಸ್ ಹೋಗುತ್ತೇನೆ.''

ಜಗು ಅವನನ್ನು ತೀಕ್ಷ್ಣವಾಗಿ ನೋಡಿದ,'' ಆ ಹೆಂಗಸು ಹೋಗೆಂದು ನಿನಗೆ ಹೇಳಿದಳೇನು? ಅವಳ ಮಾತು ಕೇಳಬೇಡ. ಅವಳೊಬ್ಬ ಹೆಣ್ಣು ಪಿಶಾಚಿ, ರಾಕ್ಷಸಿ.''

''ಇಲ್ಲ, ಅವಳೇನೂ ಹೇಳಲಿಲ್ಲ'' ಹರಿ ಥಟ್ಟನೆ ನುಡಿದ, ''ನಿಮ್ಮ ಮಗು ಕಾಯಿಲೆ ಬಿದ್ದಿದೆ. ಅವಳಿಗೆ ಮಾಡಬೇಕಾದ ಕೆಲಸ ಬೇಕಾದಷ್ಟಿದೆ. ಅಲ್ಲದೆ ಮನೆಯೂ..''

''ಹೂಂ! ''ಜಗು ಯೋಚಿಸುತ್ತಾ ಹೇಳಿದ, ''ಮಳೆಗಾಲದಲ್ಲಿ ಈ ಮನೆ ಇರಬೇಕಾದಷ್ಟು ಚೆನ್ನಾಗಿರುವುದಿಲ್ಲ. ಬೇಸಿಗೆಯಲ್ಲಿ ಮತ್ತು ಇತರ ಕಾಲದಲ್ಲಿ ನಾವು ವಾಸಿಸುತ್ತಿರುವ ಜಾಗ ಅಷ್ಟೇನೂ ಕೆಟ್ಟದಾಗಿರುವುದಿಲ್ಲ. ನಮ್ಮಲ್ಲಿ ನೀರಿನ ಪೂರೈಕೆ ಇಲ್ಲ. ಆದ್ದರಿಂದ ನೀರು ಹೊತ್ತು ತರಲು ಇತರ ಹೆಂಗಸರ ಜೊತೆ ಅವಳು ಪಂಪ್‌ನ ಬಳಿ ಸಾಲಿನಲ್ಲಿ ನಿಲ್ಲಬೇಕು. ಆದರೆ ಮಳೆಗಾಲದಲ್ಲಿ, ಎಲ್ಲೆಲ್ಲೂ ನೀರಿರುವಾಗ, ಪರಿಸ್ಥಿತಿ ಇನ್ನೂ ಕೆಟ್ಟದಾಗಿರುತ್ತದೆ.'' ಅವನು ತಲೆಯಾಡಿಸಿದ. ತನ್ನನ್ನು ಅವನ ಮನೆಗೆ ಕರೆದುಕೊಂಡು ಹೋದದ್ದು ತಪ್ಪಾಯಿತು ಎಂಬುದು ಜಗುವಿನ ಅರಿವಿಗೆ ಬಂದಿದೆ ಎಂದು ಹರಿ ಭಾವಿಸಿದ. ಅನುಕಂಪದಿಂದ ಮತ್ತು ಹರಿಗೆ ಸಹಾಯ ಮಾಡಬೇಕೆಂಬ ಸದಿಚ್ಛೆಯಿಂದ ಜಗು ಅವನನ್ನು

ಕರೆತಂದಿದ್ದ. ಹರಿಗೆ ಇದು ಗೊತ್ತಿತ್ತು. ಅವನಿಗೆ ವಂದನೆ ಸೂಚಿಸಬೇಕೆಂಬ ಇಚ್ಛೆ ಬಂದರೂ ಹಾಗೆ ಹೇಳಲಾಗಲಿಲ್ಲ.

ತಗಡಿನ ಛಾವಣಿಯುಳ್ಳ, ಮುರಿದ ಕಟ್ಟಡವೇ ಆ ಆಸ್ಪತ್ರೆಯಾಗಿದ್ದು, ತಗಡಿನ ಮೇಲೆ ಮಳೆಯ ನೀರು ಸದ್ದು ಮಾಡುತ್ತಾ ಬೀಳುತ್ತಿತ್ತು. ಆಸ್ಪತ್ರೆಯ ವರಾಂಡದಲ್ಲಿ ಮತ್ತು ಹೊರಗೆ ಜನ ಮಳೆಯಲ್ಲಿ ಸಾಲಾಗಿ ನಿಂತಿದ್ದು, ವೈದ್ಯರು ತಮ್ಮನ್ನು ಪರೀಕ್ಷಿಸುವುದನ್ನು ಎದುರು ನೋಡುತ್ತಿದ್ದರು. ಆ ಉದ್ದನೆಯ 'ಕ್ಯೂ' ನೋಡಿ, ಮ್ಲಾನ ಮುಖದಿಂದ ಜಗು ಹೇಳಿದ, ''ಓ, ಇಲ್ಲಿ ತುಂಬ ಹೊತ್ತು ಹಿಡಿಯುತ್ತದೆ.''

''ನಾನು ಕಾಯುತ್ತೇನೆ'' ಹರಿ ಹೇಳಿದ, ''ನೀನು ದಯವಿಟ್ಟು ಖಾನಾವಳಿಗೆ ಹೋಗು. ನಾನು ಇಲ್ಲಿ ಒಬ್ಬನೇ ಕಾಯುತ್ತೇನೆ.''

ಎಲ್ಲವೂ ಏರುಪೇರಾಗಿದ್ದಕ್ಕಾಗಿ ತುಂಬ ಲಜ್ಜಿತನಾದ ಜಗು ಕಾಲೆಳೆದುಕೊಂಡು ಅಲ್ಲಿಂದ ಹೊರಟು ಹೋದ.

ಹರಿ ಕಾಯುತ್ತಾ ನಿಂತಿದ್ದಾಗ ಒಂದು ಕೈಯಲ್ಲಿ ಮಗುವನ್ನು ಎತ್ತಿಕೊಂಡು, ಮತ್ತೊಂದು ಕೈಯಲ್ಲಿ ಔಷಧಿಗಾಗಿ ಖಾಲಿ ಸೀಸೆ ಹಿಡಿದಿದ್ದ ಜಗುವಿನ ಹೆಂಡತಿ ಮಳೆಯಲ್ಲಿ ಬಂದು, ಸಾಲಿನ ಹಿಂದೆ ನಿಂತದ್ದನ್ನು ಹರಿ ನೋಡಿದ. ಅವನು ಆಕೆಯ ಬಳಿಗೆ ಹೋಗಿ ಹೇಳಿದ, ''ನಾನು ಔಷಧಿ ತರುತ್ತೇನೆ. ಕೊಡು, ನಾನು ಮಗುವನ್ನು ಎತ್ತಿಕೊಳ್ಳುತ್ತೇನೆ.'' ಅಚ್ಚರಿಯಿಂದ ಅವಳು ಹರಿಯನ್ನು ನೋಡಿದಳು. ಬೇಡವೆನ್ನುವಂತೆ ತಲೆಯಾಡಿಸುತ್ತಾ ನುಡಿದಳು, ''ಬೇಡ...ಬೇಡ, ನಾನೇ ತೆಗೆದುಕೊಳ್ಳುತ್ತೇನೆ.'' ತಾನು ಅವಳಿಗೆ ಸಹಾಯ ಮಾಡುವಂತಿಲ್ಲ ಎಂದು ಅರಿತ ಹರಿ, ಅಲ್ಲಿಂದ ಕಾಲ್ತೆಗೆದ.

* * *

ನಗರದಲ್ಲಿ ಬೇರಡೆಗೆ ಹೋಗಲು ಯಾವುದೇ ಜಾಗವಿರಲಿಲ್ಲವಾದ್ದರಿಂದ, ಇಡೀ ಮಳೆಗಾಲ, ಹರಿ ಖಾನಾವಳಿಯಲ್ಲೇ ಇರಬೇಕಾಯಿತು. ಆ ನಗರದಲ್ಲಿ ಹರಿಯ ಏಕೈಕ ಸ್ನೇಹಿತನಾಗಿದ್ದ, ನೆರೆಯ ಪಾನ್‌ವಾಲಾನ ಅಂಗಡಿಯೂ ಸಹ ಮುಚ್ಚಿತ್ತು. ಒಂದು ದಿನ, ತನ್ನನ್ನು ಮೊದಲ ಸಲ ಶ್ರೀಕೃಷ್ಣ ಖಾನಾವಳಿಗೆ ಕರೆತಂದಿದ್ದ ದೊಡ್ಡ ಕಟ್ಟಡದ ಕಾವಲುಗಾರ ಬಂದು ಹರಿಯನ್ನು ಕರೆದ. ಮಳೆಗೆ ಅಡ್ಡಲಾಗಿ ಅವನು ಒಂದು ದೊಡ್ಡ ಕರಿಯ ಛತ್ರಿ ಹಿಡಿದಿದ್ದ.

''ಏ ಹುಡುಗ, ಹೇಗಿದ್ದೀ?'' ಮಳೆಯ ಹನಿಗಳ ಶಬ್ದವನ್ನು ಮೀರಿ ಅವನು ಜೋರಾಗಿ ಕೇಳಿದ, ''ಇನ್ನೂ ಇಲ್ಲೇ ಇದ್ದೀಯಾ? ಇಲ್ಲೇ ಕೆಲಸ ಮಾಡುತ್ತಿದ್ದೀಯಾ? ನಿನಗಿಷ್ಟವಾಯಿತ? ಎಲ್ಲ ಸರೀಗಿದೆ ತಾನೆ?''

ಹರಿ ತಲೆಯಾಡಿಸಿ ನಗಲು ಪ್ರಯತ್ನಿಸಿದ. ಅವನಿಂದಾಗಿಯೇ ಹರಿಗೆ ಒಂದು ಆಸರೆ, ಕೆಲಸ, ಆಹಾರ ಮತ್ತು ಗೆಳೆಯರು ಸಿಕ್ಕಿದ್ದರು. ಇದಕ್ಕಾಗಿ ತಾನು ಅವನಿಗೆ ಆಭಾರಿಯಾಗಿರ-ಬೇಕೆಂಬುದು ಹರಿಗೆ ಗೊತ್ತು. ಆದರೆ ಆ ಕೆಲಸ, ಆಹಾರ ಮತ್ತು ವಸತಿ ಎಂತಹುದೆಂಬುದೂ ಅವನಿಗೆ ಗೊತ್ತಿತ್ತು. ಆದರೂ, ''ಚೆನ್ನಾಗಿದೆ... ಚೆನ್ನಾಗಿದೆ'' ಎಂದು ಹರಿ ಹೇಳಿದ. ಮುಂಬೈನಲ್ಲಿ ಅನೇಕರ ಪಾಡು ನೋಡಿದರೆ ಇದೇ ಉತ್ತಮ ಎಂಬ ಅರಿವು ಅವನಿಗೆ ಬಂದಿತ್ತು.

''ನಿನಗೆ ಗೊತ್ತೆ ಹುಡುಗ? ಸೀಬರ್ಡ್‌ನಲ್ಲಿ ಆ ರಾತ್ರಿ ನೀನು ನೋಡಲು ಬಂದಿದ್ದ

ಜನ ಈಗ ಹಿಂದಿರುಗಿದ್ದಾರೆ. ಅವರು ಕಳೆದ ವಾರ ವಿದೇಶದಿಂದ ಬಂದರು. ನೀನು ಅಲ್ಲಿಗೆ ಪುನಃ ಬಂದು ಅವರನ್ನೇಕೆ ನೋಡಬಾರದು? ಅವರ ಫ್ಲ್ಯಾಟ್‌ನಲ್ಲೇ ನಿನಗಾಗಿ ಒಂದು ಕೆಲಸಕ್ಕೆ ಏಕೆ ಪ್ರಯತ್ನಿಸಬಾರದು? ''

ಹರಿಗೆ ಬೆರಗುಂಟಾಯಿತು. ದೀರ್ಘ ಕಾಲದಿಂದ ಅವರ ಬಗ್ಗೆ ಯೋಚನೆಯನ್ನೇ ಬಿಟ್ಟಿದ್ದ. ಅತಿಗೆ ಮನೆಯಲ್ಲಿನ ತನ್ನ ಕೆಲಸ, ಪಾನ್‌ವಾಲಾನ ಅಂಗಡಿಯಲ್ಲಿ ಗಡಿಯಾರದ ರಿಪೇರಿಯ ಕಲಿಕೆ ಹಾಗೂ ಮನೆಗೆ ತೆಗೆದುಕೊಂಡು ಹೋಗಲು ಹಣವನ್ನು ಹೆಚ್ಚು ಹೆಚ್ಚಾಗಿ ಉಳಿಸುವ ಇಚ್ಛೆ–ಇವುಗಳಿಗಾಗಿ ಅವನ ಇಡೀ ಸಮಯ ಮತ್ತು ಶ್ರಮ ವಿನಿಯೋಗವಾಗು-ತ್ತಿತ್ತು. ಮಾರನೆ ದಿನ ಮತ್ತು ಅದರ ನಂತರದ ದಿನ ಬಿಟ್ಟು, ಭವಿಷ್ಯದ ಬಗ್ಗೆ ಆಲೋಚಿಸಲೂ ಸಹ ಅವನಿಗೆ ಸಮಯವೇ ಇರಲಿಲ್ಲ. ಮುಂಬೈನ ಮೊದಲ ರಾತ್ರಿಯ ಅನುಭವ ಅವನ ತಲೆಯಲ್ಲಿ ಸುಳಿಯಲಾರಂಭಿಸಿತು. ದೀಪಗಳು, ಬೃಹತ್ ಕಟ್ಟಡಗಳು ಮತ್ತು ಜನಸಂದಣಿ-ಯನ್ನು ನೋಡಿ ತಾನು ಬೆರಗಾದದ್ದು, ಫ್ಲ್ಯಾಟ್‌ಗಳುಳ್ಳ ಸೌಧಗಳ ಸಾಲುಗಳು, ಯಕ್ಷಿಣಿಯೋ ಎಂಬಂತೆ ತನ್ನನ್ನು ಮೇಲಕ್ಕೊಯ್ದ ಲಿಫ್ಟ್, ಬೆಳಗುತ್ತಿದ್ದ ಕೊಠಡಿಗೆ ಸೇರಿದ ಮಿನುಗುವ ಬಾಗಿಲು ಮತ್ತು ಬಿಳಿಯ ಉಡುಪು ಧರಿಸಿದ್ದ ಆ ಒರಟು ಸೇವಕ– ಈ ಎಲ್ಲದರ ಬಗ್ಗೆ ಆಲೋಚಿಸಿದ. ಪಾತ್ರೆಗಳನ್ನು ತೊಳೆಯುವಾಗ, ಹಿಟ್ಟನ್ನು ನಾದುವಾಗ, ರೊಟ್ಟಿಗಳನ್ನು ಮಾಡುವಾಗ, ಗಿರಾಕಿಗಳಿಗೆ ರೊಟ್ಟಿ-ತೊವ್ವೆ ಇಲ್ಲವೆ ಚಹಾ ನೀಡುವಾಗ ಅವನಿಗೆ ಈ ಆಲೋಚನೆಗಳೇ ಬರುತ್ತಿದ್ದವು. ಈ ಎಲ್ಲವನ್ನು ಹೀಗೆಯೇ ಬಿಟ್ಟು ಹೋಗುವುದೇ? ಎತ್ತರವಾದ ಆ ಫ್ಲ್ಯಾಟ್‌ಗಳ ಶ್ರೀಮಂತರ ಮಿನುಗುವ ಪ್ರಪಂಚದಲ್ಲಿ ತನಗೆ ಜಾಗ ಸಿಗುವುದೆ? ಸೇವಕರು, ಕಾರುಗಳು, ವಿಶ್ರಾಂತ ದಿನಗಳು, ಹಣ ಮತ್ತು ಸ್ವಾತಂತ್ರ್ಯದ ವಿಶ್ವದ ಆ ಕಿನ್ನರ ಕಥೆಯಲ್ಲಿ ತನಗೆ ಪಾತ್ರವುಂಟೆ?– ಈ ಎಲ್ಲ ಆಲೋಚನೆಗಳು ಅವನಿಗೆ ಬಂದವು.

ಅವುಗಳನ್ನು ಕುರಿತು ಯೋಚಿಸಿ, ಯೋಚಿಸಿ ಅವನಿಗೆ ಜ್ವರವೇ ಬಂದಂತಾಯಿತು. ಆ ರಾತ್ರಿ ಅವನಿಗೆ ನಿದ್ರೆ ಬರುವಂತೆ ತೋರಲಿಲ್ಲ. ಪಾನ್‌ವಾಲಾನ ಸಲಹೆ ಕೇಳಿ, ಒಂದು ಬಾರಿ ಮಧ್ಯಾಹ್ನದ ಬಿಡುವಿದ್ದಾಗ, ತನ್ನ ಅದೃಷ್ಟವನ್ನು ಏಕೆ ಪರೀಕ್ಷಿಸಬಾರದು ಎಂದು ಹರಿ ಆಲೋಚಿಸಿದ.

* * *

ಅಂದು ರಾತ್ರಿ ಹಿಂದೂ ಮಹಾಸಾಗರದ ಕಡೆಯಿಂದ ಚಂಡಮಾರುತ ಬೀಸಿ ನಗರವನ್ನು ಅಪ್ಪಳಿಸಿತು. ಬಾನನ್ನು ಕಡುಗಪ್ಪಾಗಿ ಮುಚ್ಚಿದ್ದ ಮೋಡಗಳ ಮೂಲಕ ಸಿಡಿಲುಗಳ ಆರ್ಭಟದೊಡನೆ ಅದು ಪ್ರಾರಂಭವಾಗಿತ್ತು. ಸಿಡಿಲಿನ ಆರ್ಭಟವು ಒಂದು ಸೌಧದಿಂದ ಮತ್ತೊಂದಕ್ಕೆ ಪ್ರತಿಧ್ವನಿಸುತ್ತಿತ್ತು. ಮಾರನೆ ದಿನ, ಬೆಳಗಾಗುವ ಮುನ್ನವೇ ಮಳೆ ಹುಯ್ಯಲಾರಂಭಿಸಿತು. ಮತ್ತೊಮ್ಮೆ ರಸ್ತೆಗಳಲ್ಲೆಲ್ಲಾ ನೀರು ನುಗ್ಗಿತು. ಸಮುದ್ರದ ಕಡೆಯಿಂದ ಬೀಸುತ್ತಿದ್ದ ಬಿರುಗಾಳಿಯಿಂದಾಗಿ ನಗರದ ಗೋಡೆಗಳು ಮತ್ತು ಕಿಟಕಿಗಳ ಮೇಲೆ ಮಳೆ ರಾಚುತ್ತಿತ್ತು. ಪಾರ್ಕಿನ ಬೃಹತ್ ವೃಕ್ಷಗಳ ಪೈಕಿ ಒಂದು, ರಸ್ತೆಗೆ ಅಡ್ಡಲಾಗಿ, ಬೇರು ಸಮೇತ ಉರುಳಿ ಬಿದ್ದು ಸಂಚಾರಕ್ಕೆ ತಡೆಯುಂಟುಮಾಡಿತು. ಒಂದರ ಹಿಂದೆ ಒಂದರಂತೆ ಜಮಾಯಿಸಿದ ವಾಹನಗಳು ಉನ್ಮತ್ತವಾಗಿ ಹಾರ್ನ್ ಮಾಡಿ, ಕೂಗಲಾರಂಭಿಸಿದವು. ರಸ್ತೆಗಳಲ್ಲಿ ಎಲ್ಲೆಲ್ಲೋ ನಿಂತವು. ತನ್ನ ಮೈಮೇಲಿನ ಒದ್ದೆ ಬಟ್ಟೆಗಳಿಂದಾಗಿ ನಡುಗುತ್ತಿದ್ದ

ಹರಿ, ಖಾನಾವಳಿಯ ಬಾಗಿಲಲ್ಲಿ ನಿಂತು ಈ ಎಲ್ಲವನ್ನೂ ನೋಡುತ್ತಿದ್ದ.

ಅಂದು ಖಾನಾವಳಿಯಲ್ಲಿ ಕೇವಲ ಕೆಲವೇ ಗಿರಾಕಿಗಳಿದ್ದರು. ರಸ್ತೆಗಳಲ್ಲಿ ಪಾದಚಾರಿಗಳೂ ಸಹ ಓಡಾಡುತ್ತಿರಲಿಲ್ಲ. ಚಹಾಕ್ಕಾಗಿ ಬಂದಿದ್ದ ಒಬ್ಬ ಲಾರಿ ಡ್ರೈವರ್, ಇಡೀ ದಿನ ಅಲ್ಲೇ ಕುಳಿತಿರಬೇಕಾಗಿತ್ತು. ಅವನ ಲಾರಿ, ಗಾಲಿಯವರೆಗಿನ ನೀರಿನಲ್ಲಿ ನಿಂತು ಬಿಟ್ಟಿತ್ತು. ಅವನಲ್ಲಿ ಒಂದು ಟ್ರಾನ್ಸಿಸ್ಟರ್ ರೇಡಿಯೋ ಇತ್ತು. ಅದನ್ನು ತನ್ನ ಚಹಾ ಲೋಟದ ಪಕ್ಕದಲ್ಲಿಟ್ಟುಕೊಂಡಿದ್ದ. ಅವನು, ಅದರ ಕಾರ್ಯಕ್ರಮಗಳನ್ನು ಕೇಳುತ್ತಾ, ತಿಂದು ಕುಡಿಯುತ್ತಿದ್ದ. ಹುಡುಗರೂ ಅದನ್ನು ಕೇಳುತ್ತಾ, ಅಲ್ಲಲ್ಲೇ ಓಡಾಡುತ್ತಿದ್ದರು. ಮುಂಬೈ ಸಿನೆಮಾದ ಹಾಡುಗಳನ್ನೂ, ಮಧ್ಯೆ ಮಧ್ಯೆ ಟೂತ್‌ಪೇಸ್ಟ್, ಸ್ವಚ್ಛಪಡಿಸುವ ಪುಡಿಗಳು, ಖಾದ್ಯತೈಲಗಳು, ಮುಖದ ಕ್ರೀಮ್‌ಗಳು ಮುಂತಾದವುಗಳ ಬಗ್ಗೆ ಜಾಹಿರಾತುಗಳನ್ನೂ ಅವರು ಕೇಳಿದರು. ಒಂದು ನಾಟಕದಲ್ಲಿ ರಾಜ ಮತ್ತು ರಾಣಿಯರ ಬಗ್ಗೆಯೂ, ಗೆದ್ದ ಮತ್ತು ಸೋತ ಯುದ್ಧಗಳ ಬಗ್ಗೆಯೂ ಕೇಳಿದರು. ನಂತರ ನಾಟಕದ ಕೊನೆಯಲ್ಲಿ ರಾಜ ಸತ್ತು, ರಾಣಿ ತನ್ನ ಕೊನೆಯ ಹಾಡನ್ನು ಹಾಡಿದಾಗ ಪ್ರಸಾರಕನು ಸುದ್ದಿಯನ್ನು ಓದಲಾರಂಭಿಸಿದ.

ಸುದ್ದಿಯೆಲ್ಲಾ ಚಂಡಮಾರುತಕ್ಕೇ ಸಂಬಂಧಿಸಿತ್ತು. ಹನ್ನೆರಡು ತಾಸುಗಳಲ್ಲಿ ಹತ್ತು ಇಂಚು ಮಳೆ ಹೇಗೆ ಬಿತ್ತು, ಇಡೀ ನಗರವೇ ಹೇಗೆ ಅಸ್ತವ್ಯಸ್ತಗೊಂಡಿದೆ ಎಂಬುದನ್ನು ತಿಳಿಸಲಾಯಿತು. ''ಹತ್ತು ಮೀನು ದೋಣಿಗಳು ಸಮುದ್ರದಲ್ಲಿ ನಾಪತ್ತೆಯಾಗಿರುವುದಾಗಿ ವರದಿಯಾಗಿದೆ. ಅನೇಕ ಮೀನುಗಾರರೂ ಸತ್ತಿರಬಹುದೆಂದು ಶಂಕಿಸಲಾಗಿದೆ'' ಎಂದು ಪ್ರಸಾರಕ ತಿಳಿಸಿದ.

ಹರಿ, ಹಠಾತ್ತನೆ ಚೀತ್ಕರಿಸಿ ರೇಡಿಯೋದತ್ತ ಕಿವಿಗೊಟ್ಟ. ''ಎಲ್ಲಿ?''ಎಂದು ಕೂಗಿದ. ಪ್ರಸಾರಕನಿಂದ ಅವನು ಉತ್ತರವನ್ನು ಬಯಸಿದಂತಿತ್ತು, ''ಎಲ್ಲಿ?''

ಅದನ್ನು ಕೇಳಿ ಹುಡುಗರು ನಗಲಾರಂಭಿಸಿದರು. ಲಾರಿ ಡ್ರೈವರ್ ಸಹ ಹಲ್ಕಿರಿದ. ಆದರೆ ಹರಿಗೆ ಉತ್ತರ ಸಿಕ್ಕಿತು.

''ಚಂಡಮಾರುತದ ರಭಸ ಕಡಿಮೆಯಾದೊಡನೆ ಅಲಿಬಾಗ್‌ನಿಂದ ಶೋಧನಾ ತಂಡಗಳನ್ನು ಕಳಿಸಲಾಗುವುದು.''

''ಅಲಿಬಾಗ್!''ತನ್ನನ್ನೇ ನೋಡುತ್ತಿದ್ದ ಮೂರು ಮುಖಗಳತ್ತ ತಿರುಗಿ ಹರಿ ಕೂಗಿದ, ''ಅಯ್ಯೋ, ಅದು ನನ್ನ ಊರು! ನನ್ನ ನೆಲ!''

''ಇರಲಿ ಬಿಡು, ಹುಡುಗ, ಇರಲಿ ಬಿಡು'' ದಪ್ಪ ಮೀಸೆಯ, ಕೆಂಪು ಪೇಟದ ಲಾರಿ ಡ್ರೈವರ್ ಹೇಳಿದ, ''ನೀನೇನು ಮೀನುಗಾರನಲ್ಲ, ಅಲ್ಲವಾ? ನೀನೇನು ದೋಣಿಯಲ್ಲಿ ಕುಳಿತಿಲ್ಲ, ಅಲ್ಲವಾ? ಬೇಕಾದಷ್ಟು ಒಳ್ಳೆಯ ಆಹಾರ ಮತ್ತು ಬಿಸಿ ಚಹಾ ಇರುವ ಖಾನಾವಳಿಯೊಂದರಲ್ಲಿ ನೀನು ಸುರಕ್ಷಿತವಾಗಿದ್ದಿ. ಅಷ್ಟೊಂದು ಗಾಬರಿಯಾಗಬೇಡ.''

ಜಗು ತಮ್ಮ ಮನೆಗೆ ಹರಿಯನ್ನು ಕರೆದುಕೊಂಡು ಹೋಗಿದ್ದಾಗ ಆದ ಹಗರಣದ ನಂತರ ಅವನು ಹರಿಯೊಡನೆ ಮಾತನಾಡುತ್ತಲೇ ಇರಲಿಲ್ಲ. ಈಗ ಸ್ವಲ್ಪ ಅಸಮಾಧಾನದಿಂದಲೇ ಕೇಳಿದ, ''ಏನು ವಿಷಯ? ನಿಮ್ಮಪ್ಪ ಒಬ್ಬ ಮೀನುಗಾರನೆ? ಆ ದೋಣಿಗಳ ಪೈಕಿ ಒಂದು ನಿಮ್ಮಪ್ಪನದೆ?''

ಹರಿ ತಲೆಯಾಡಿಸುತ್ತಾ, "ಇಲ್ಲ" ಎಂದು ಹೇಳಿ, ತಾನೇ ಏಕಾಂಗಿಯಾಗಿ ಚಿಂತಿಸಲು ಅಡಿಗೆ ಮನೆಯೊಳಗೆ ಹೋದ. ನಿಜ, ಆ ದೋಣಿಗಳ ಪೈಕಿ ಒಂದರ ಮಾಲೀಕ ತನ್ನಪ್ಪನೇನಾಗಿ-ರಲಿಲ್ಲ. ತನ್ನ ಕುಟುಂಬ ಯಾವುದೇ ದೋಣಿಯನ್ನು ಹೊಂದಿರಲಿಲ್ಲ. ಆದರೆ ಮೀನು ಹಿಡಿಯಲು ಹೋದವರು ತನ್ನ ಗ್ರಾಮದ ಜನ. ಸಾಪತ್ತೆಯಾಗಿರುವವರಲ್ಲಿ ಗೊತ್ತಿದ್ದ ಜನ, ಸ್ನೇಹಿತರು ಮತ್ತು ನೆರೆಹೊರೆಯವರಿರಬಹುದು. ಹಠಾತ್ತನೆ ಅವನಿಗೆ ಬಿಜುವಿನ ದೋಣಿಯ ನೆನಪಾಯಿತು. ಈ ವೇಳೆಗೆ ಅದನ್ನು ನೀರಿನಲ್ಲಿ ಬಿಟ್ಟಿರಬಹುದು, ಆಳವಾದ ಸಮುದ್ರದಲ್ಲಿ ಅದು ಸಂಚರಿಸುತ್ತಿರಬಹುದು ಎಂದು ಭಾವಿಸಿದ.

ಕ್ಷಿತಿಜದ ಉದ್ದಕ್ಕೂ ಕಾಣುವ ದೋಣಿಗಳ ಪಟಗಳು ಮತ್ತು ರಾತ್ರಿಯ ವೇಳೆ ಕಾಣುವ ಹಡಗಿನ ದೀಪಗಳನ್ನು ಕುರಿತು ಅವನು ಆಲೋಚಿಸಿದ. ಸಂಜೆಗಳಲ್ಲಿ ಕಡಲಿನಿಂದ ತಂದ ಮೀನು,ಹೊಳೆಯುತ್ತಿರುವ ಆ ಮೀನುಗಳ ಬುಟ್ಟಿಗಳಿಗಾಗಿ ಹೆಂಗಸರುಗಳಲ್ಲಿ ನಡೆಯುತ್ತಿದ್ದ ಜಗಳಗಳು ಅವನ ಮನಃಪಟಲದ ಮೇಲೆ ಹಾದುಹೋದವು.

ತನ್ನಲ್ಲಿದ್ದ ಬಲೆ ಮತ್ತು ಅದನ್ನು ಹಿಡಿರು ಆಳವಿಲ್ಲದ ಜಾಗಗಳಲ್ಲಿ ಮೀನು ಹಿಡಿಯಲು ತಾನು ಓಡಾಡುತ್ತಿದ್ದುದು ನೆನಪಿಗೆ ಬಂದಿತು. ತಾನು ಹಿಡಿದ ಏಡಿಗಳನ್ನು ಕಾಗೆಗಳು ಕಚ್ಚಿಕೊಂಡು ಹೋಗುತ್ತಿದ್ದುದನ್ನೂ, ಮೀನುಗಳನ್ನು ಹುಡುಕುತ್ತಾ ಹದ್ದುಗಳು ಕೆಳಮಟ್ಟದಲ್ಲಿ ಹಾರುತ್ತಾ ಅಲೆಗಳ ಮೇಲೆ ಎರಗುತ್ತಿದ್ದುದನ್ನೂ ನೆನೆದ. ತಮ್ಮ ಗುಡಿಸಿಲ ಬಳಿ, ಕೊರಕಲ ಪಕ್ಕದ ಕಲ್ಲಿನ ಮೇಲೆ ಕ್ರೌಂಚ ಪಕ್ಷಿ ನಿಂತಿರುತ್ತಿದ್ದುದೂ, ಮೀನ್ಮುಳ್ಳಿಯು ಮರಗಳಿಂದ ಹಾರುವಾಗ ಕಾಣುತ್ತಿದ್ದ ನೀಲಿ ಬಣ್ಣವೂ ಅವನ ಮನಸ್ಸಿನಲ್ಲಿ ಮೂಡಿತು. ಕಡಲಲ್ಲಿ ಬಂಡೆಯ ಮೇಲೆ ಹೂಗಳನ್ನು ಹಾಕಲು ಲೀಲ ಹೂಬುಟ್ಟಿಯೊಡನೆ ಬರುತ್ತಿದ್ದುದೂ, ಬೇಲ ಮತ್ತು ಕಮಲ ಬಂಡೆಗಳ ಮೇಲೆ ಕುಳಿತು ಚಿಪ್ಪುಗಳನ್ನು ಕೀಳುತ್ತಿದ್ದುದೂ ನೆನಪಿಗೆ ಬಂದಿತು. ಪಿಂಟೊ ಬೊಗಳುತ್ತಿದ್ದುದು ಅವನಿಗೆ ಕೇಳಿಸಿದಂತಾಯಿತು. ಅವರುಗಳನ್ನೆಲ್ಲಾ ನೋಡುವ ಹಂಬಲ ಉಂಟಾಯಿತು. ಬೆಂಕಿಯ ಪಕ್ಕದಲ್ಲಿ ಹಿಮ್ಮಡಿಯ ಮೇಲೆ ಕುಳಿತು, ತನ್ನ ತಲೆಯನ್ನು ಮಂಡಿಗಳ ಮೇಲಿಟ್ಟುಕೊಂಡು, ಕಣ್ಣುಗಳನ್ನು ಮುಚ್ಚಿಕೊಂಡು ಸುಂದರವೂ ಉಜ್ವಲವೂ ಆದ ಅವನ್ನೆಲ್ಲಾ ಮನಸ್ಸಿನಲ್ಲಿ ಮತ್ತೆ ಕಾಣಲು ಯತ್ನಿಸಿದ.

* * *

ನಿಲ್ಲುವ ಇಲ್ಲವೆ ನಿಧಾನವಾಗುವ ಸೂಚನೆಯನ್ನೇ ನೀಡದೆ, ಕಡಲ ಕಡೆಯಿಂದ ಸತತವಾಗಿ ಸುರಿಯುವ ಮುಂಗಾರು ಮಳೆಯಿಂದ, ಹಳೆಯದಾದ ಮತ್ತು ಕಿತ್ತು ಹೋಗಿದ್ದ ತಮ್ಮ ಗುಡಿಸಿಲ ಛಾವಣಿಗೂ ಮತ್ತು ಬಂಗಲೆಯ ಕಿಟಿಕಿ, ಬಾಗಿಲುಗಳಿಗೂ ವಿಶೇಷ ರಕ್ಷಣೆ ನೀಡಲು, ಹುಡುಗಿಯರು ಒಟ್ಟಿಗೆ ಕುಳಿತು ಬೇಗ ಬೇಗ ತೆಂಗಿನ ಗರಿಗಳ ಚಾಪೆಗಳನ್ನು ಹೆಣೆದರು. ಮುಂಗಾರಿನ ಬೃಹತ್ ಕಪ್ಪು ಮೋಡಗಳು ಸಮುದ್ರದಿಂದ ಆಕಾಶದವರೆಗೆ ಪಸರಿಸಿರುವಂತೆ ಹಾಗೂ ಅದನ್ನು ಸಂಧಿಸಲು ದೊಡ್ಡ ಅಲೆಗಳು ಏಳುತ್ತಿರುವಂತೆ ಕಾಣುತ್ತಿತ್ತು. ನೀರಿನ ಬೃಹತ್ ಹಾಳೆಯೊಂದು ಭೂಮಿಯನ್ನೂ, ಆಕಾಶವನ್ನೂ, ಸಂಮಿಳಿತಗೊಳಿಸಿರುವಂತೆ ತೋರುತ್ತಿತ್ತು.

ಎಲ್ಲ ಮೀನು ದೋಣಿಗಳನ್ನೂ ಕಡಲ ಚಾಚು ಪ್ರದೇಶಕ್ಕೆ ಎಳೆದು ತಂದು ಲಂಗರು ಹಾಕಲಾಗಿತ್ತು. ಎತ್ತರದ ಮುಂಗಾರು ಅಲೆಗಳೊಡನೆ ಅವೆಲ್ಲಾ ತೂಗಾಡುತ್ತಾ

ಒಂದಕ್ಕೊಂದು ಬಡಿಯುತ್ತಿದ್ದವು. ಅವುಗಳ ಪಟಗಳು ಮತ್ತು ನಿಶಾನೆಗಳನ್ನು ತೆಗೆದು ಹಾಕಿದ್ದುದರಿಂದ, ನಿಶಾನೆಯ ಸ್ತಂಭಗಳು ಬೋಳು ಬೋಳಾಗಿ ಕಾಣುತ್ತಿದ್ದವು. ಗ್ರಾಮಸ್ಥರು ಆದಷ್ಟೂ ಮಟ್ಟಿಗೆ ಗುಡಿಸಿಲುಗಳಲ್ಲೇ ಇರುತ್ತಿದ್ದರು. ಅನಿವಾರ್ಯವಾದಾಗ ಮಾತ್ರ ದೊಡ್ಡ ಕಪ್ಪು ಛತ್ರಿಗಳನ್ನು ಹಿಡಿದು ಹೊರಗೆ ಹೋಗುತ್ತಿದ್ದರು. ಕೆರೆಗಳು ಮತ್ತು ಕೊರಕಲುಗಳು ತುಂಬಿದ್ದವು. ಜಮೀನುಗಳ ಒಳಗೆ ನೀರು ನುಗ್ಗಿ ಕೊಚ್ಚೆಯಾಗಿತ್ತು. ಜೊಂಡು ವ್ಯಾಪಕವಾಗಿ ಬೆಳೆದಿತ್ತು. ರಾತ್ರಿಯ ವೇಳೆ ಕಪ್ಪೆಗಳು ಒಂದೇ ಸಮನೆ ವಟಗುಟ್ಟುತ್ತಿದ್ದವು. ಗುಡಿಸಿಲುಗಳು ತೇವವೂ ಮಬ್ಬಾಗಿಯೂ ಇದ್ದವು. ಗುಡಿಸಿಲುಗಳ ಮೇಲೆ ಒಂದೇ ಸಮನೆ ಬಡಿಯುತ್ತಿದ್ದ ಮಳೆಯಿಂದಾಗಿ ಛಾವಣಿಯಿಂದ ಮಣ್ಣಿನ ನೆಲದ ಮೇಲೆ ನೀರು ಸೋರಿ ಎಲ್ಲವನ್ನೂ ಒದ್ದೆ ಮಾಡಿತ್ತು. ಅವು ಮತ್ತೆ ಒಣಗುವ ಸಾಧ್ಯತೆಯೇ ಇಲ್ಲವೇನೊ ಎಂಬ ಭಾವನೆ ಉಂಟಾಗಿತ್ತು.

ಇಂತಹ ಮಳೆಯಲ್ಲಿ ಕಡಲಲ್ಲಿ ಹೋಗುವುದು ಸಾಧ್ಯವಿರಲಿಲ್ಲವಾದ್ದರಿಂದ ಮೀನುಗಾರರು ಸೋಮಾರಿಗಳಾಗಿದ್ದರು. ಮೀನುಗಳೂ ಇರಲಿಲ್ಲ. ಸಾಮಾನ್ಯವಾಗಿ ಹೆಂಗಸರ ಕೆಲಸವೆನಿಸಿದ, ಹಗ್ಗಗಳನ್ನು ಹೊಸೆಯುವುದು, ತೆಂಗಿನ ಗರಿಗಳನ್ನು ಹೆಣೆಯುವ ಕಾರ್ಯವನ್ನು ಗಂಡಸರೂ ಮಾಡುತ್ತಿದ್ದರು. ವರ್ಷದ ಯಾವುದೇ ಕಾಲಕ್ಕಿಂತ ಹೆಚ್ಚಾಗಿ ಈಗ ಅವರು ಹೆಂಡವನ್ನು ಕುಡಿಯುತ್ತಿದ್ದರು. ಆದರೆ ಲೀಲಳ ತಂದೆ ಕುಡಿಯುವುದನ್ನೇ ಬಿಟ್ಟಿದ್ದ.

ಅವನು ಆಸ್ಪತ್ರೆಯ ಹೊರಗೆ ಕುಳಿತು, ಹೋಗಿ ಬರುವ ನರ್ಸ್‌ಗಳು ಮತ್ತು ವೈದ್ಯರುಗಳನ್ನು ನೋಡುತ್ತಾ ತನ್ನ ಹೆಂಡತಿಗೆ ಅಗತ್ಯವಾದದ್ದೆಲ್ಲಾ ಸಿಗುತ್ತಿರುವ ಬಗ್ಗೆ ಖಚಿತ ಪಡಿಸಿಕೊಂಡಿದ್ದ. ಪಿಂಗಾಣಿ ಹುಕ್ಕವನ್ನು ಸೇದುತ್ತಾ, ಅವನು ವರಾಂಡದಲ್ಲಿ ಬಗ್ಗಿ ಕುಳಿತು ಮಳೆಯ ನೀರು ಕೆಳಗೆ ಬೀಳುವುದನ್ನು ನೋಡುತ್ತಿರುತ್ತಿದ್ದ. ಲೀಲ, ವಾರಕ್ಕೊಮ್ಮೆ ತಪ್ಪದೆ ಬರುತ್ತಿದ್ದಳು. 'ಮೊನ್ ರಿಪೊಸ್' ನಲ್ಲಿ ತಾನು ಗಳಿಸಿದ ಹಣದಲ್ಲಿ ಸ್ವಲ್ಪವನ್ನು ತನ್ನಪ್ಪ ತಂಬಾಕು, ಚಹಾ ಮತ್ತು ತಿನಿಸುಗಳನ್ನು ಕೊಳ್ಳಲು ಸಾಧ್ಯವಾಗುವಂತೆ ಅವನಿಗೆ ಕೊಡುತ್ತಿದ್ದಳು. ಈಗ ಹೆಚ್ಚು ಮೃದುವೂ, ಶಾಂತವೂ ಆಗಿದ್ದ ತಂದೆಯನ್ನೂ, ಹಾಗೂ ಹಿಂದಲ ವಾರಕ್ಕಿಂತ ಹೆಚ್ಚು ಆರೋಗ್ಯವಂತಳಾಗಿ ಕಾಣುತ್ತಿದ್ದ ತಾಯಿಯನ್ನೂ ನೋಡಲು ಭಾರಿ ಮಳೆಯಲ್ಲೂ, ಒದ್ದೆಯಾದ ಮತ್ತು ಕೆಸರಿನಿಂದ ಕೂಡಿದ ಬಸ್‌ನಲ್ಲಿ ಪ್ರಯಾಣ ಮಾಡುವುದೂ ಸಾರ್ಥಕ ಎಂದು ಅವಳಿಗನಿಸಿತ್ತು. ಈ ಎಲ್ಲ ಭೇಟಿಗಳೂ ಹರ್ಷದಾಯಕ-ವಾಗಿರುತ್ತಿದ್ದವು. ಪರಸ್ಪರ ಬೀಳ್ಕೊಡುವಾಗ ಅವರೆಲ್ಲಾ ಕಂಬನಿ ಸುರಿಸುವುದು ಸಾಮಾನ್ಯವಾಗಿತ್ತು.

ಕೆಲವು ಸಲ, ದಿನಸಿ ಕೊಳ್ಳಲು ಹುಡುಗಿಯರೆಲ್ಲಾ ಒಟ್ಟಿಗೆ ಹಳ್ಳಿಗೆ ಹೋಗುತ್ತಿದ್ದರು. ಮಳೆಯ ರಭಸ ಸ್ವಲ್ಪ ಕಡಿಮೆಯಾಗುವವರೆಗೆ ಅವರು ಕಾಯಬೇಕಾಗಿತ್ತು. ಹಳ್ಳಿಯಲ್ಲಿ ಎಲ್ಲರೂ ಮನೆಯೊಳಗೇ ಇರುತ್ತಿದ್ದುದರಿಂದ ಇಡೀ ಗ್ರಾಮವೇ ಖಾಲಿಯಾಗಿರುವಂತೆ ಭಾಸವಾಗುತ್ತಿತ್ತು.

ಆದರೆ, ಮುಂಗಾರಿನ ಮೂರು ತಿಂಗಳು ಮೀನುಗಾರರು ಮನೆಯೊಳಗೇ ಕುಳಿತಿರುವುದೂ ಸಾಧ್ಯವಿರಲಿಲ್ಲ. ಅವರ ಧಾನ್ಯಗಳ ದಾಸ್ತಾನು ಕರಗುತ್ತಿತ್ತು. ಅವರ ಆಹಾರದ ಪ್ರಮಾಣವೂ ಕ್ರಮೇಣವಾಗಿ ಕಡಿಮೆಯಾಗುತ್ತಿತ್ತು. ಅವರ ಕುಟುಂಬಗಳ ಸದಸ್ಯರು ಹಸಿವಿನಿಂದ ಸಂಕಟಪಡುತ್ತಿದ್ದು, ಅವರ ಕೆನ್ನೆಗಳು ಬತ್ತಿ ಗುಳಿ ಬೀಳುತ್ತಿದ್ದವು. ಮಳೆ ಸ್ವಲ್ಪ ಕಡಿಮೆಯಾದಾಗ

ಅವರು ಕಡಲ ದಂಡೆಗೆ ಹೋಗುವರು, ತಮ್ಮ ದೋಣಿಗಳಲ್ಲಿ ಹತ್ತಿ ಕುಳಿತುಕೊಳ್ಳುವರು. ಆಕಾಶವನ್ನು ನೋಡುತ್ತಾ ಹವಾಮಾನದ ಬಗ್ಗೆ ಮಾತನಾಡುವರು.

ಒಂದು ದಿನ ಮಳೆ ನಿಂತಿತ್ತು. ಕ್ಷಿತಿಜದ ಉದ್ದಕ್ಕೂ ಬೂದು ಬಣ್ಣದ ಭಾರಿ ಮೋಡಗಳಿದ್ದವು. ಆದರೆ ಅವು ಪರಸ್ಪರ ಸಮೀಪಿಸಿ ದಟ್ಟವಾಗುವ ಸೂಚನೆಗಳಿರಲಿಲ್ಲ. ಮೀನುಗಾರರ ಒಂದು ತಂಡ ತಮ್ಮ ದೋಣಿಗಳೊಡನೆ ಕಡಲ ಮೇಲೆ ಹೊರಟಿತ್ತು. ಅಲೆಗಳ ಮೇಲೆ ದೋಣಿಗಳ ಸಮತೋಲನವನ್ನು ಉಳಿಸಿಕೊಳ್ಳಲು ಜನ ಒಂದು ಪಾರ್ಶ್ವದಿಂದ ಮತ್ತೊಂದರತ್ತ ಜಿಗಿದಾಡುತ್ತಿದ್ದುದನ್ನು, ಹಳ್ಳಿಯ ಅಂಗಡಿಯಿಂದ ಚೀಲದಲ್ಲಿ ಧಾನ್ಯವನ್ನು ಹೊತ್ತು ತರುತ್ತಿದ್ದ ಲೀಲ ನೋಡಿದಳು. ತನ್ನ ಹೊಸ ದೋಣಿಯನ್ನು ಆ ಕಾಲದಲ್ಲಿ ಸಮುದ್ರದಲ್ಲಿ ಬಿಟ್ಟು ಅದನ್ನು ಅಪಾಯಕ್ಕೀಡು ಮಾಡುವ ಇಚ್ಛೆ ಇಲ್ಲದ ಬಿಜು, ದಂಡೆಯ ತುದಿಯಲ್ಲಿ ನಿಂತು ಕೂಗುತ್ತಿದ್ದ.

"ಏ ಮೂರ್ಖರಾ, ವಾಪಸ್ ಬನ್ನಿ. ಇಂತಹ ಹವಾಮಾನವನ್ನು ಎದುರಿಸುವ ಸಾಮರ್ಥ್ಯ ನಿಮ್ಮ ದೋಣಿಗಳಿಗಿಲ್ಲ."

"ಇಂದಿನ ಹವಾಮಾನ ಸೊಗಸಾಗಿದೆ, ನಿನಗೆ ಕಾಣಲ್ಲವಾ?" ಒಬ್ಬ ಜೋರಾಗಿ ಕೂಗಿದ, "ಮುದುಕಿಯರಂತೆ ಮನೆಯಲ್ಲಿ ಕೂತು ನಮಗೆ ಸಾಕಾಗಿದೆ."

"ನೀವು ಮುಳುಗಿ ಸಾಯುತ್ತೀರಿ" ಬಿಜು ಎಚ್ಚರಿಸಿದ, "ನಿಮ್ಮ ದೋಣಿಗಳು ಒಡೆದು ನುಚ್ಚು ನೂರಾಗುತ್ತವೆ." ಆದರೆ ಅವನ ಮಾತಿಗೆ ಅವರು ಸುಮ್ಮನೆ ನಕ್ಕರು. ವಾಸ್ತವವಾಗಿ ಮತ್ತೆ ಕಡಲಲ್ಲಿರುವುದು ಅವರನ್ನು ಪುಳಕಿತಗೊಳಿಸಿತ್ತು.

ಅಲ್ಲೇ ಮತ್ತಷ್ಟು ಹೊತ್ತು ನಿಂತು ನೋಡಲು ಲೀಲ ಇಷ್ಟಪಡಲಿಲ್ಲ. ಅಲೆಗಳಲ್ಲಿ ಭಯಂಕರವಾಗಿ ತೂಗಾಡುತ್ತಿದ್ದ ದೋಣಿಗಳನ್ನು ನೋಡಿ ಅವಳಿಗೆ ಭೀತಿಯುಂಟಾಗಿತ್ತು. ಅವಳಿಗೆ ಅವರ ಬಗ್ಗೆ ಹೆಚ್ಚು ಆತಂಕವೂ ಆಗಿತ್ತು. ಅವಳು ಮನೆಯನ್ನು ಸೇರಿ ಹೆಚ್ಚು ಹೊತ್ತೇನಾಗಿರಲಿಲ್ಲ, ಅಶುಭಕರವಾದ ಸಿಡಿಲುಗಳ ಶಬ್ದವನ್ನು ಕೇಳಿದಳು. ಇಡೀ ರಾತ್ರಿ ಮಿಂಚುತ್ತಿತ್ತು ಹಾಗೂ ಸಿಡಿಲುಗಳು ಮೊಳಗುತ್ತಿದ್ದವು. ತೆಂಗಿನ ಮರಗಳು ಕಿರುಗುಟ್ಟುತ್ತಾ ಅಪಾಯಕರ ರೀತಿಯಲ್ಲಿ, ಅವರ ಗುಡಿಸಿಲ ಮೇಲೇ ಬೀಳುವಂತೆ ತೂಗಾಡುತ್ತಿದ್ದವು. ಬಿರುಗಾಳಿ ಮತ್ತು ಕಡಲ ಶಬ್ದ ಎಷ್ಟು ಜೋರಾಗಿತ್ತೆಂದರೆ, ಹುಡುಗಿಯರು ತಮಗೆ ಭಯವೆಂದು ಹೇಳಿಕೊಳ್ಳದೆ, ಕಿವಿನೋವೆಂಬ ನೆಪದಿಂದ ಹೊದಿಕೆಗಳೊಳಗೆ ಸೇರಿಕೊಂಡಿದ್ದರು.

ಅಂದು ಮುಂಜಾನೆ, ಆ ಮಳೆಗಾಲದಲ್ಲೇ ಅತ್ಯಂತ ಭೀಕರವೆನಿಸಿದ ಚಂಡಮಾರುತ ಬೀಸಿತು. ತಮ್ಮ ಗುಡಿಸಿಲು ಚಂದಿ ಚಂದಿಯಾಗಿ ಹಾರಿ ಹೋಗುವುದೆಂದು ಅನೇಕ ಸಲ ಅವರಿಗೆ ಅನಿಸಿತ್ತು. ತೆಂಗಿನ ಮರಗಳ ಪೈಕಿ ಒಂದು ತಮ್ಮ ಗುಡಿಸಿಲ ಛಾವಣಿಯ ಮೇಲೆ ಬೀಳುವುದೆಂದು ಲೀಲ ಹೆದರಿದಳು. ಕಡಲ ನೀರು ನಿಮಿಷ ನಿಮಿಷಕ್ಕೂ ಏರುತ್ತಿದ್ದು, ತಗ್ಗು ಪ್ರದೇಶದಲ್ಲಿನ ಆ ನೀರು ಒಂದು ಸರೋವರದಂತೆ ಕಾಣುತ್ತಿತ್ತು. ಬೇಲ ಮತ್ತು ಕಮಲ ಹೆದರಿಕೆಯಿಂದ ಮತಿಗೆಟ್ಟವರಂತೆ ಮಾತನಾಡುತ್ತಿದ್ದರು. ಆದರೆ ಲೀಲ, ಹೆಚ್ಚು ಹೆಚ್ಚು ಮೌನಳಾಗುತ್ತಿದ್ದಳು. ಕಡಲಿಗೆ ಹೋಗಿದ್ದ ದೋಣಿಗಳನ್ನು ಅವಳು ನೋಡಿದ್ದಳು. ಆದರೆ ಆ ವಿಷಯವನ್ನು ತನ್ನ ತಂಗಿಯರಿಗೆ ತಿಳಿಸಿರಲಿಲ್ಲ.

ಮೂರು ದಿನಗಳ ನಂತರ ಬಿರುಗಾಳಿ ಕಡಿಮೆಯಾಯಿತು. ಮತ್ತೆ ಎರಡು ದಿನಗಳ

ನಂತರ ಮೋಡಗಳು ಚದುರಿದವು ಹಾಗೂ ಮಂದವಾದ ಸೂರ್ಯನ ಬೆಳಕು ಕಂಡಿತು. ಬಂಡೆಗಳತ್ತ ಹೋಗಿ, ಬುಟ್ಟಿಯಲ್ಲಿದ್ದ ಹೂವು ಮತ್ತು ಕುಂಕುಮವನ್ನು ಅರ್ಪಿಸುವುದು ಸಾಧ್ಯವೇ ಎಂಬುದನ್ನು ತಿಳಿಯಲು ಮೂವರು ಹುಡುಗಿಯರೂ ಕಡಲ ದಂಡೆಗೆ ಓಡಿದರು. ಅಲೆಗಳ ನೀರು ಅವರಿಗೆ ಬಡಿಯುತ್ತಾ, ಅವರನ್ನು ಹೆಚ್ಚು ಹೆಚ್ಚು ಒದ್ದೆ ಮಾಡುತ್ತಿದ್ದಾಗ ಅವರು ಚೀರುತ್ತಿದ್ದರು. ಆ ವೇಳೆಗೆ ಅವರ ಹಿಂದಿನ ಮನೆಯ ಹೀರಾಬಾಯಿ, ಹಳ್ಳಿಯಿಂದ ವಾಪಸ್ ಬರುತ್ತಾ ಅವರನ್ನು ನೋಡಿ, ಮೀನು ದೋಣಿಗಳ ಅದ್ಭುತ ಸಂಗತಿಯನ್ನು ಹೇಳಲು ಅಲ್ಲೇ ನಿಂತಳು. ಇಬ್ಬರು ಚಿಕ್ಕ ಹುಡುಗಿಯರೂ ಭಯಗೊಂಡರು. ಹೆಚ್ಚು ವಿವರಗಳನ್ನು ತಿಳಿಯಲು ಲೀಲ ಕಾತುರಗೊಂಡಳು.

ದೋಣಿಗಳು ನಾಲ್ಕು ದಿನಗಳ ಕಾಲ ನಾಪತ್ತೆಯಾಗಿದ್ದವು. ಬಿರುಗಾಳಿ ಕಡಿಮೆಯಾಗ-ಲಾರಂಭಿಸಿದ ಮೇಲೆ ಅಲಿಬಾಗ್‌ನಲ್ಲಿ ನೌಕಾಬಲದ ಮತ್ತು ಕರಾವಳಿ ಕಾವಲು ಪಡೆಯ ಶೋಧನಾ ತಂಡವೊಂದು ಹೊರಟಿತು. ಬಿಜು ಸಹ ತಂಡದ ಜೊತೆ ಬರುವುದಾಗಿ ಒತ್ತಾಯಿಸಿದ. ಮುಂದೆ ಅವನೇ ಮಾರ್ಗದರ್ಶಿಯಾದ. ಮೀನುದೋಣಿಗಳ ಅವಶೇಷಗಳನ್ನು ಮೊದಲು ಪತ್ತೆಹಚ್ಚಿದ್ದು ಅವನೇ. ಮೂರು ದೋಣಿಗಳು ಮುಳುಗಿಹೋಗಿದ್ದವು. ಇತರೆ ದೋಣಿಗಳು ಮುರಿದು ಜಖಂ ಆಗಿದ್ದವು. ಹೊಟ್ಟೆಗಿಲ್ಲದೆ, ಅಸ್ವಸ್ಥರಾಗಿದ್ದ ಇತರರನ್ನು ರಕ್ಷಿಸಿ ವಾಪಸ್ ಕರೆತರಲಾಯಿತು.

ನೌಕಾ ಮತ್ತು ಕರಾವಳಿ ರಕ್ಷಣಾ ಪಡೆಯವರು ಬಿಜುವನ್ನು ಪ್ರಶಂಸಿಸಿ, ಅವನಿಗೆ ವಂದನೆ ಸೂಚಿಸಿದರು. ಆದರೆ ರಕ್ಷಿಸಲ್ಪಟ್ಟ ಮೀನುಗಾರರು ಮಾತನಾಡುವಷ್ಟೂ ಶಕ್ತಿಯಿಲ್ಲದೆ, ದಣಿವಿನಿಂದ ಕಾಲೆಳೆದುಕೊಂಡು ಮನೆಗಳಿಗೆ ಹೋದರು.

''ಹೋಗಬೇಡಿರೆಂದು ನಾನು ಅವರಿಗೆ ಹೇಳಿದ್ದೆ. ಬೆಂಕಿಪೊಟ್ಟಣದಂತಹ ಆ ದೋಣಿಗಳಿಗೆ ಹವಾಮಾನವು ಮಾರಕವಾಗಿತ್ತು'' ಚಾಚು ಪ್ರದೇಶದಲ್ಲಿ ನಿಂತು, ಅವರ ದೋಣಿಗಳಿಗೆ ಲಂಗರು ಹಾಕಿ ಕಟ್ಟುವುದರ ಮೇಲ್ವಿಚಾರಣೆ ನಡೆಸಿದ್ದ ಬಿಜು ಗಟ್ಟಿಯಾಗಿ ಹೇಳುತ್ತಿದ್ದ. ಅವನಿಗೆ ಅದೊಂದು ಮಹಾನ್ ದಿನವಾಗಿತ್ತು. ಎಲ್ಲರಿಗೂ ಕಾಣುವ ರೀತಿಯಲ್ಲಿ ಅವನ ಸ್ವಂತ ಉತ್ಕೃಷ್ಟ ದೋಣಿಯು ತನ್ನ ಸಾಮರ್ಥ್ಯವನ್ನು ತೋರಿಸಿತ್ತು.

ಈ ಮಂದ ಬುದ್ಧಿಯ ಮೀನುಗಾರರು, ಅದರ ಸಾಮರ್ಥ್ಯವನ್ನು ಒಪ್ಪಲು ನಿರಾಕರಿಸಿದ್ದದ್ದು ಅವನಿಗೆ ವಿಷಾದವುಂಟುಮಾಡಿತ್ತು. ''ಒಪ್ಪಬೇಕು, ನೀವೆಲ್ಲಾ ಒಪ್ಪಲೇಬೇಕು'' ಬಿಜು ಆರ್ಭಟಿಸಿದ.

''ಇಂತಹ ಹವಾಮಾನಕ್ಕೆ ಡೀಸಲ್ ಎಂಜಿನ್‌ವುಳ್ಳ ದೋಣಿ ಬೇಕು. ನಿಮ್ಮ ನೌಕಾಪಟದ ದೋಣಿಗಳು, ನಿಮ್ಮನ್ನು ಮುಳುಗಿಸಲು ಸಹಾಯಕಾರಿಯಾಗುತ್ತವೆ, ಅಷ್ಟೆ.''

ಅವನ ಮಾತನ್ನು ಕೇಳುತ್ತಿದ್ದ ಮೀನುಗಾರರ ಹೆಂಡತಿಯರಲ್ಲಿ ಕೆಲವರು ಇನ್ನೂ ಅಲ್ಲೇ ನಿಂತಿದ್ದರು. ಅವರ ಪೈಕಿ ಒಬ್ಬಳು ಗೊಣಗಿದಳು, ''ಹೌದು, ಹೌದು, ಬಿಜು. ಆದರೆ ನಿನ್ನಲ್ಲಿರುವಂತಹ ದೋಣಿಯನ್ನು ಹೊಂದುವುದು ಯಾರಿಗೆ ತಾನೆ ಸಾಧ್ಯ?''

''ನಿಜ, ನಮ್ಮದು ದುರ್ಬಲವೂ, ನಿರುಪಯುಕ್ತವೂ ಆಗಿರಬಹುದು'' ಮತ್ತೊಬ್ಬಳು ಹೇಳಿದಳು, ''ಆದರೆ... ನಾವು ಬದುಕಬೇಕು, ನಮ್ಮ ಗಂಡಸರೂ ಮೀನು ಹಿಡಿಯಬೇಕು.''

ಬಿಜು ಅವರನ್ನು ದುರುಗುಟ್ಟಿಕೊಂಡು ನೋಡಿದ. ಆದರೆ ಅವನ ಬಡಾಯಿ ಸ್ವಲ್ಪ

ಕಡಿಮೆಯಾಯಿತು. ''ಒಂದಲ್ಲ ಒಂದು ದಿನ, ಪ್ರತಿಯೊಬ್ಬರೂ ನನ್ನಲ್ಲಿರುವಂತಹ ದೋಣಿಯನ್ನು ನಿರ್ಮಿಸಬೇಕು'' ಬಿಜು ಅವರಿಗೆ ಹೇಳಿದ, ''ಬದಲಾವಣೆಗಳಾಗಬೇಕು, ಆಗಲೇ ನೀವು ಸುಧಾರಿಸುವುದು, ಗೊತ್ತಾಯಿತಾ?'' ಆ ಹೆಂಗಸರು ಹಿಂದಿರುಗುತ್ತಿದ್ದಂತೆ ಅವನು ಮತ್ತೆ ಕೂಗಿ ಹೇಳಿದ, ''ಸುಧಾರಣೆ! ಬದಲಾವಣೆ!'' ಈಗಾಗಲೇ ಮತ್ತೆ ಪ್ರಾರಂಭವಾಗಿದ್ದ ಗಾಳಿ ಮತ್ತು ಮಳೆಗೆ ತನ್ನ ದೋಣಿಯನ್ನು ಒಡ್ಡುವ ಮುನ್ನ ಅದನ್ನು ನೋಡಲು ಕೆಸರಿನ ದಂಡೆಯ ಮೂಲಕ ಚಾಚು ಪ್ರದೇಶದತ್ತ ನಡೆದು ಹೋದ. ಮರದ ಕಟ್ಟೆಗಳ ಮೇಲೆ ಮಳೆಯ ನೀರು ಬಿದ್ದು ಒದ್ದೆಯಾದ ಮರಳಿನಲ್ಲಿ ಕವಲೊಡೆದು ಹರಿಯುತ್ತಿತ್ತು.

ಇನ್ನೂ ದಂಡೆಯ ಮೇಲೆ ನಿಂತು ನೋಡುತ್ತಿದ್ದ ಜನರ ಗುಂಪಿನಲ್ಲಿದ್ದ ಒಬ್ಬ ವ್ಯಕ್ತಿಯನ್ನು ಬಿಜು ಗುರುತಿಸಿದ. ''ಏಯ್, ನೀನು?'' ಉಂಗುರ ಹಾಕಿದ್ದ ತನ್ನ ದಪ್ಪನೆಯ ಬೆರಳನ್ನು ಅವನತ್ತ ತೋರಿಸುತ್ತಾ ಕೂಗಿದ, ''ನೋಡಿಲ್ಲಿ, ನನ್ನಲ್ಲಿ ಎಂತಹ ಸೊಗಸಾದ ದೋಣಿಯಿದೆ ಎಂಬುದು ಈಗ ನಿನಗೆ ಗೊತ್ತಾಯಿತಾ?'' ಬಿಜು ಗಟ್ಟಿಯಾಗಿ ನಗುತ್ತಾ ಅಬ್ಬರಿಸಿದ. ತನ್ನ ದೋಣಿಯನ್ನು ಕಟ್ಟುತ್ತಿದ್ದಾಗ ಹಾಸ್ಯ ಮಾಡಿದ್ದ ಆ ಕಾರ್ಖಾನೆಯ ನಿವೇಶನದ ಕಾವಲುಗಾರ ತನಗೆ ಈಗ ಉತ್ತರ ಕೊಡದೆ ಜಾಗ್ರತೆ ಹೋಗಲು ಹವಣಿಸುತ್ತಿದ್ದುದನ್ನು ನೋಡಿ, ಬಿಜು ಗಹಗಹಿಸಿ ನಕ್ಕ. ತಾನು ಹಿಂದೆ ತಿಳಿಸಿದ್ದಂತೆ ಗ್ರಾಮಸ್ಥರಾಗಲಿ, ಅವರ ದೋಣಿಗಳಾಗಲಿ, ಅವರ ಕುಶಲತೆಯಾಗಲಿ ಕಳಪೆಯಲ್ಲ ಎಂಬುದು ಈಗ ಕಾವಲುಗಾರನ ಅರಿವಿಗೆ ಬಂದಿರಬೇಕು; ಆದರೆ ಅದನ್ನು ಒಪ್ಪಿಕೊಳ್ಳಲು ಅವನು ಇಷ್ಟಪಡದೆ ತನ್ನ ಗುಡಿಸಿಲಿಗೆ ಧಾವಿಸಿದ.

''ನೋಡಿದಿರಾ?'' ಹುಡುಗಿಯರಿಗೆ ವರ್ಣಿಸುತ್ತಿದ್ದ ಹೀರಾಬಾಯಿ ನಗುತ್ತಾ, '' ಇದು ಬಿಜುವಿನ ಅತ್ಯಂತ ಹೆಮ್ಮೆಯ ದಿನ'' ಎಂದು ಹೇಳಿದಳು.

''ಅದೇನೊ ಸರಿ'' ಲೀಲ ನುಡಿದಳು, ''ಆದರೂ ಇತರ ಮೀನುಗಾರರು ಮತ್ತು ಹೆಂಡತಿಯರಿಗೆ ಏನೆನಿಸಿರಬಹುದು?''

ಹೀರಾಬಾಯಿ, ಆಕಾಶದತ್ತ ತನ್ನ ಕೈಗಳನ್ನೆತ್ತಿ,'' ಅವರಿಗೆ ಯಾವಾಗಿನಂತೆಯೇ ಅನಿಸಿರುತ್ತದೆ, ಮಗಳೆ'' ಎಂದು ಹೇಳಿ ನಿಟ್ಟುಸಿರು ಬಿಟ್ಟಳು. ''ಅದನ್ನು ದೇವರಿಗೇ ಬಿಡೋಣ'' ಎಂದು ಹೇಳಿ, ಹಿಂದಿರುಗಿ ತೆಂಗಿನ ಮರಗಳ ಸಾಲಿದ್ದ ತೀರದತ್ತ ನಿಧಾನವಾಗಿ ಹೋದಳು.

ಅಂದು ರಾತ್ರಿ, ಲೀಲ, ಬೇಲ ಮತ್ತು ಕಮಲ ತಮ್ಮ ಗುಡಿಸಿಲಿನಲ್ಲಿ ತೇವವಾಗಿದ್ದ ಮತ್ತು ಹೊಗೆಯಾಡುತ್ತಿದ್ದ ಬೆಂಕಿಯ ಸುತ್ತ ಕುಳಿತಿದ್ದರು. ಬಂಗಲೆಯಲ್ಲಿ ತಂಗಿದ್ದ ವ್ಯಕ್ತಿ, ತಮಗೆ ನೀಡಿದ ಹಣದಿಂದಾಗಿ ತಾವು ಊಟ ಮಾಡುವುದು ಸಾಧ್ಯವಾಗಿರುವುದಕ್ಕಾಗಿ ಅವರಿಗೆ ಕೃತಜ್ಞತಾ ಭಾವನೆ ಉಂಟಾಗಿತ್ತು. ಮಳೆಗಾಲದಿಂದಾಗಿ ಆ ವ್ಯಕ್ತಿ ಓಡಿಹೋಗದೆ ಅಲ್ಲೇ ಇದ್ದು, ಮುಂಗಾರನ್ನೇ ನಿರೀಕ್ಷಿಸುತ್ತಾ ಅಲ್ಲೇ ಸುತ್ತ ಮುತ್ತ ಓಡಾಡಿಕೊಂಡಿದ್ದ. ತಮ್ಮ ತಂದೆ ಮತ್ತು ಸೋದರನ ಗೈರು ಹಾಜರಿಯಲ್ಲಿ ಆತನ ಇರುವಿಕೆಗಾಗಿಯೂ ಹುಡುಗಿಯರು ಆಭಾರಿಗಳಾಗಿದ್ದರು. ಹೊರಗೆ ಬೀಸುತ್ತಿದ್ದ ಬಿರುಗಾಳಿಯ ಶಬ್ದವನ್ನು ಆಲಿಸುತ್ತಾ ಅವರು ಹರಿಯನ್ನು ನೆನೆದರು. ಹರಿಯೇಕೆ ಬರಲಿಲ್ಲ? ತಾನು ಮುಂಬೈನಲ್ಲಿ ಸುಖವಾಗಿರುವುದಾಗಿ

ತಿಳಿಸುವ ಒಂದು ಕಾರ್ಡು ಮಾತ್ರ ಬರೆದಿದ್ದಾನೆ. ಆದರೆ ಅವನೇಕೆ ಹಿಂದಿರುಗಿಲ್ಲ? ಕತ್ತಲೆಯಲ್ಲಿ ಕಪ್ಪೆಗಳು ಒಟಗುಟ್ಟುತ್ತಿದ್ದವು. ತೆಂಗಿನ ಮರಗಳಿಂದ ಜಾರಿ ಬೀಳುತ್ತಿದ್ದ ನೀರು ತಮ್ಮ ಛಾವಣಿಯ ಮೇಲೆ ಬಿದ್ದು ತೊಟ್ಟಿಕ್ಕುತ್ತಿದ್ದ ಸದ್ದನ್ನು ಅವರು ಮೌನವಾಗಿ ಕೇಳುತ್ತಿದ್ದರು.

ಕೊನೆಗೆ, ''ಹರಿ ಯಾವಾಗ ಬರಬಹುದು?'' ಕೆಸರಿನ ನೆಲದ ಮೇಲೆ ತನ್ನ ಬೆರಳುಗಳಿಂದ ಚಿತ್ರ ಬರೆಯುತ್ತಾ ಬೇಲ ಕೇಳಿದಳು.

''ಈಗಂತೂ ಅವನು ಬರಲಾರ- ಮಳೆಗಾಲದಿಂದಾಗಿ ದೋಣಿಗಳ ಸಂಚಾರ ನಿಂತು ಹೋಗಿರುತ್ತೆ'' ಲೀಲ ವಿವೇಕಿಯಂತೆ ಹೇಳಿದಳು, ''ಬಹುಶಃ ಮುಂಗಾರು ಮುಗಿದ ಮೇಲೆ ಅವನು ಬರುತ್ತಾನೆ. ಬಹುಶಃ ದೀಪಾವಳಿಗೆ ಬರುತ್ತಾನೆ.''

# 11

''ನೀನು ಒಂದಲ್ಲ ಒಂದು ದಿನ ವಾಪಸ್ ಹೋಗುತ್ತೀ ಮಗು. ಆ ಬಗ್ಗೆ ಚಿಂತಿಸಬೇಡ'' ಪಾನ್‌ವಾಲಾ ಕರುಣೆಯಿಂದ ಹೇಳಿದ, ''ನೀನು ತುಂಬ ದೂರವೇನೂ ಬಂದಿಲ್ಲ. ಖಂಡಿತ ವಾಪಸ್ ಹೋಗುತ್ತೀ.''

''ಎಂದು?'' ಹರಿ ಕಾತುರದಿಂದ ಕೇಳಿದ, ''ನಾನು ಈಗಲೇ ಹೋಗಲು ಇಚ್ಛಿಸುತ್ತೇನೆ.''

''ಏ ಹುಡುಗ, ಮಳೆಗಾಲ ಮುಗಿಯುವವರೆಗೆ ನೀನು ಕಾಯಬೇಕು. ಮಳೆಗಾಲದಲ್ಲಿ ದೋಣಿಗಳು ರೇವಾಸ್‌ಗೆ ಹೋಗಬಹುದು. ಆ ವೇಳೆಗೆ ನೀನು ಹೆಚ್ಚು ಹಣವನ್ನು ಉಳಿಸಿರಬಹುದು, ಅಲ್ಲವೆ? ನಾನೂ ಬೇಗ ಬೇಗ ಗುಣಮುಖನಾಗುತ್ತಿದ್ದೇನೆ. ಗಡಿಯಾರದ ರಿಪೇರಿಯ ಬಗ್ಗೆ ನಿನಗೆ ಇನ್ನೂ ಹೆಚ್ಚು ಕಲಿಸಲು, ನಾನು ಸದ್ಯದಲ್ಲೇ ಅಂಗಡಿಗೆ ಬರಲಾರಂಭಿಸುತ್ತೇನೆ. ನೀನೇ ಸ್ವತಃ ಗಡಿಯಾರವನ್ನು ರಿಪೇರಿ ಮಾಡಲಾರಂಭಿಸಿದ ಮೇಲೆ ನಿನಗೆ ಸಿಗುವ ಮಜೂರಿಯನ್ನು ನೀನು ಉಳಿಸಬಹುದು. ಅದು ನಿನ್ನದೇ, ನನ್ನದಲ್ಲ. ಕೇಳಲು ಈ ಮಾತು ಹಿತವಾಗಿರುತ್ತದೆ, ಅಲ್ಲವಾ? ನೀನು ಹಳ್ಳಿಗೆ ಹಿಂದಿರುಗಿದ ಮೇಲೆ, ಗಡಿಯಾರ ರಿಪೇರಿ ಕೆಲಸ ಮಾಡಬಹುದು.''

ಆ ವೃದ್ಧನ ಅಜ್ಞಾನಕ್ಕಾಗಿ ಹರಿಗೆ ನಗು ಬಂತು. ಗ್ರಾಮದಲ್ಲೆಂತಹ ಗಡಿಯಾರಗಳು ಮತ್ತು ಕೈಗಡಿಯಾರಗಳು? ಅಲ್ಲಿ ಸೂರ್ಯನನ್ನು ನೋಡಿ, ಎಲ್ಲರೂ ಸಮಯ ಹೇಳುತ್ತಾರೆ. ಬಿಜುವಿನಲ್ಲಿ ಒಂದು ಗಡಿಯಾರ ಇರಬಹುದು. ಆದರೆ ಉಪ್ಪಿನ ಗಾಳಿಯಿಂದಾಗಿ ಅದು ತುಕ್ಕು ಹಿಡಿದಿರುತ್ತದೆ. ಅದು ಅವನ ಟೆಲಿವಿಷನ್‌ನಷ್ಟೇ ನಿರುಪಯುಕ್ತ. ಆದರೂ ಪಾನ್‌ವಾಲಾ, ಗಡಿಯಾರ ರಿಪೇರಿ ವಿದ್ಯೆಯನ್ನು ಕಲಿಸುತ್ತಿರುವುದು ಅವನಿಗೆ ಹರ್ಷವುಂಟು ಮಾಡಿತ್ತು. ಅದಕ್ಕಾಗಿ ಅವನು ಆಭಾರಿಯಾಗಿದ್ದ. ತನಗೆ ಮನೆಯ ಗೀಳನ್ನು ತಡೆಯುವುದು ಸಾಧ್ಯವಾಗದೆ ಹೋದದ್ದರಿಂದ, ಆ ಪಾನ್‌ವಾಲಾನನ್ನು ಹುಡುಕಿಕೊಂಡು ಹರಿ ಬಂದಿದ್ದ. ಅವನ ಮನೆಯನ್ನು ಹುಡುಕಿ, ದೋಣಿಗಳು ನಾಪತ್ತೆಯಾದ ವಿಷಯವನ್ನು ಅವನಿಗೆ ತಿಳಿಸಿದ. ಕಾಯಿಲೆ ಬಿದ್ದಾಗಿನಿಂದ ಆ ಮುದುಕ ಅಂಗಡಿಗೆ ಬಂದಿರಲಿಲ್ಲ. ಅಂದಿನಿಂದಲೂ ಅಂಗಡಿಯ ಬಾಗಿಲನ್ನು ಮುಚ್ಚಲಾಗಿತ್ತು. ಒಂದು ದಿನ ತನ್ನ ಗಡಿಯಾರದ ಸಲುವಾಗಿ ಬಂದ ಒಬ್ಬ ಗಿರಾಕಿ, ಅಂಗಡಿಯ ಪಕ್ಕದ ಮನೆಯಲ್ಲಿದ್ದ ಜಗುವನ್ನು ಕಂಡು, ಆ ವೃದ್ಧ ಗಡಿಯಾರ ರಿಪೇರಿಯವನಿಗೆ ಏನಾಯಿತು? ಅವನು ರಿಪೇರಿ ಮಾಡಿ ಕೊಡಬೇಕಾದ ಗಡಿಯಾರಗಳ ಗತಿಯೇನು? ಎಂದು ಕೇಳಿದ. ಪಾನ್‌ವಾಲಾನ ಮನೆಯ ವಿಳಾಸವನ್ನು ಜಗು ಕೊಡುತ್ತಿದ್ದುದು ಹರಿಯ ಕಿವಿಗೆ ಬಿತ್ತು.

''ಏನು?'' ತನ್ನ ಕೈಲಿದ್ದ ಬಟ್ಟೆಯನ್ನು ಕೆಳಗೆ ಬೀಳಿಸುತ್ತಾ ಹರಿ ಗಟ್ಟಿಯಾಗಿ ಕೇಳಿದ,''ಅವನೆಲ್ಲಿ ಇರುತ್ತಾನೆ?'' ಜಗುವಿಗೆ ಅವನ ವಿಳಾಸ ಗೊತ್ತಿತ್ತೆಂಬುದೇ ಹರಿಗೆ ತಿಳಿದಿರಲಿಲ್ಲ.

ಜಗು ವಿಳಾಸವನ್ನು ಮತ್ತೆ ತಿಳಿಸಿದ. ಕೂಡಲೇ ತನಗೆ ಒಂದು ತಾಸಿನ ಬಿಡುವು ಕೊಡಬೇಕೆಂದೂ, ಆ ಸಮಯದಲ್ಲಿ ತಾನು ಹೋಗಿ ಪಾನ್‌ವಾಲಾನನ್ನು ನೋಡಿಕೊಂಡು ಬರುವುದಾಗಿಯೂ ಹರಿ ಹೇಳಿದ. ಅವನ ಮನೆಯೇನೂ ಅಂಗಡಿಯಿಂದ ದೂರ ಇರಲಿಲ್ಲ. ರಸ್ತೆಯ ಕೊನೆಯಲ್ಲಿ ಗ್ರಾಂಟ್‌ರೋಡ್ ಸ್ಟೇಷನ್ನಿನ ಪಕ್ಕದಲ್ಲಿ ಬಲಭಾಗದಲ್ಲಿತ್ತು. ಹರಿಗೆ ಸುಲಭವಾಗಿ ಆ ಮನೆ ಸಿಕ್ಕಿತ್ತು. ರಸ್ತೆಗೆ ಸೇರಿದಂತಿದ್ದ ಸಿಹಿತಿನಿಸುಗಳ ಅಂಗಡಿಯನ್ನು ದಾಟಿ, ಶಿಥಿಲವಾಗಿದ್ದ ಮರದ ಮೆಟ್ಟಿಲುಗಳನ್ನು ಶೀಘ್ರವಾಗಿ ಏರಿದ. ಮೊದಲ ಅಂತಸ್ತಿನಲ್ಲಿದ್ದ ಪ್ರಾಣಿ ಪಕ್ಷಿಗಳ ಚಿಕ್ಕ ಚಿಕಿತ್ಸಾಲಯವನ್ನು ದಾಟಿದ. ಒಣಗಿದ ಚೆಂಡುಹೂಗಳ ಹಾರಗಳನ್ನು ತೂಗು ಹಾಕಿದ್ದ ಹೊಸ್ತಿಲಿನ ಮುಂದೆ ರಂಗೋಲಿಯನ್ನು ಹಾಕಿದ್ದ ಬಾಗಿಲುಗಳನ್ನು ದಾಟಿ ಮೇಲಣ ಅಂತಸ್ತಿಗೆ ಹೋದ. ಅಲ್ಲಿ ಒಂದು ಸಣ್ಣ ಕೊಠಡಿ, ಹಳೆಯ ಡಬ್ಬಗಳು ಮತ್ತು ಪೆಟ್ಟಿಗೆಗಳ ತುಂಬ ಗಿಡಗಳಿದ್ದ ಒಂದು ಬಾಲ್ಕನಿ ಪಾನ್‌ವಾಲಾನಿಗೆ ಸೇರಿತ್ತು.

ಅಲ್ಲಿ ಮುರಿದ ಬೆತ್ತದ ಕುರ್ಚಿಯ ಮೇಲೆ ಪಾನ್‌ವಾಲಾ ಕುಳಿತಿದ್ದ. ಅವನು ಬಿಳಿಚಿಕೊಂಡಿದ್ದು, ದುರ್ಬಲನಾಗಿ ಕಾಣುತ್ತಿದ್ದ. ಆದರೆ ಲವಲವಿಕೆಯಿಂದಿದ್ದು, ಗುಣಮುಖ-ನಾಗುತ್ತಿದ್ದ. ಫ್ಲೂನಿಂದ ಪ್ರಾರಂಭವಾದ ಅವನ ಕಾಯಿಲೆ, ದುರ್ಧರಗೊಂಡು ಬ್ರಾಂಕೈಟಿಸ್‌ಗೆ ಪರಿವರ್ತನೆಗೊಂಡಿತ್ತು. ಅವನನ್ನು ಆಸ್ಪತ್ರೆಗೆ ಸೇರಿಸಬೇಕಾಗುವುದೆಂದು ಅವನ ನೆರೆಹೊರೆಯವರು ಯೋಚಿಸಿದರು. ಆದರೆ ಅವನು ತುಂಬ ನಿತ್ರಾಣನಾಗಿದ್ದುದರಿಂದ ಅವನ ಮನೆಯಲ್ಲೇ ಇರಿಸಲು ನಿರ್ಧರಿಸಿದರು. ಪಾಳಿಯಲ್ಲಿ ಅವನಿಗೆ ಊಟ ಮತ್ತು ಬಿಸಿ ಪಾನೀಯವನ್ನು ತಂದು ಕೊಡುತ್ತಿದ್ದರು. ಅವನ ಮನೆಯ ಕೆಳಗಿನ ಫ್ಲಾಟ್‌ನಲ್ಲಿ ವಾಸಿಸುತ್ತಿದ್ದ ಒಬ್ಬ ಡಾಕ್ಟರು, ಉಚಿತವಾಗಿ ಅವನಿಗೆ ಚಿಕಿತ್ಸೆ ನೀಡುತ್ತಿದ್ದರು. ಐವತ್ತು ವರ್ಷಗಳಿಗೂ ಹೆಚ್ಚು ಕಾಲದಿಂದ ಅವರು ನೆರೆಹೊರೆಯಾಗಿದ್ದರು. ಪಾನ್‌ವಾಲಾ ಆ ಬ್ಲಾಕ್‌ನಲ್ಲಿ ಹೆಚ್ಚು ಜನಪ್ರಿಯನಾಗಿದ್ದ, ಎಲ್ಲರ ಒಲುಮೆಯನ್ನೂ ಗಳಿಸಿದ್ದ. ಈಗ ಎಲ್ಲರ ಪೋಷಣೆಗೂ ಒಳಗಾಗಿದ್ದ ಅವನು ಚೇತರಿಸಿಕೊಂಡದ್ದು ಎಲ್ಲರಿಗೂ ನೆಮ್ಮದಿಯುಂಟುಮಾಡಿತ್ತು. ಮಳೆಗಾಲ ಮುಗಿಯುವ ತನಕ ಅವನು ಮನೆಯಲ್ಲೇ ಇದ್ದು ವಿಶ್ರಾಂತಿ ತೆಗೆದುಕೊಳ್ಳಬೇ-ಕೆಂದೂ, ಕೆಲಸಕ್ಕೆ ಹೋಗುವಾಗ ಮಳೆಯಲ್ಲಿ ನೆನೆದು ಮತ್ತೆ ಕಾಯಿಲೆ ಬೀಳಬಾರದೆಂದೂ ಅವರು ಆಗ್ರಹಪಡಿಸಿದ್ದರು. ಹರಿ ಅಲ್ಲಿಗೆ ಬಂದದ್ದು ಕಂಡು ಪಾನ್‌ವಾಲಾಗೆ ತುಂಬ ಸಂತೋಷವಾಗಿತ್ತು. ಸಮೀಪದ ರೇಲ್ವೆ ಸ್ಟೇಷನ್ನಿನ ಛಾವಣಿಗೆ ಹೊದಿಸಿದ್ದ ಉಬ್ಬು-ತಗ್ಗಿನ ಜಿಂಕ್‌ಷೀಟ್ ಹಾಳೆಗಳನ್ನೂ, ಅದರ ಮೇಲೆ ಕುಳಿತು, ರೈಲು ಪ್ರತಿಸಲ ಜೋರಾಗಿ ಶಬ್ದ ಮಾಡಿಕೊಂಡು ಬಂದಾಗ, ಇಲ್ಲವೆ ಕೀರಲು ಶಬ್ದದೊಡನೆ ನಿಲ್ದಾಣ ಬಿಟ್ಟಾಗ ಎಂಜಿನ್‌ನಿಂದ ಹೊರಡುತ್ತಿದ್ದ ದಟ್ಟವಾದ ಹೊಗೆಯಿಂದ ಹೆದರಿ ಗುಂಪು ಗುಂಪಾಗಿ ಹಾರುತ್ತಿದ್ದ ಪಾರಿವಾಳಗಳನ್ನೂ ಅವನು ತದೇಕ ದೃಷ್ಟಿಯಿಂದ ನೋಡುತ್ತಾ ಕುಳಿತಿರುತ್ತಿದ್ದ.

ಅವನ ಕಾಲ ಬಳಿ ಇದ್ದ ಸ್ಟೂಲೊಂದರ ಮೇಲೆ ಹರಿ ಕುಳಿತ. ಪಾನ್‌ವಾಲಾನ ಕಾಯಿಲೆಯಾದ್ಯಂತ ಅವನಿಗೆ ಆಹಾರ ನೀಡಿ ನೋಡಿಕೊಳ್ಳುತ್ತಿದ್ದ ಸಣ್ಣ ಹುಡುಗನೊಬ್ಬ

ಚಹಾ ಅಂಗಡಿಯಿಂದ ತಂದಿದ್ದ ತುಂಬಾ ಸಿಹಿಯಾದ ಚಹಾವನ್ನು ಹರಿ ಕುಡಿದ. ಒಂದಲ್ಲ ಒಂದು ಸಮಯ ಪಾನ್‌ವಾಲಾನಿಂದ ಸಹಾಯ ಪಡೆದಿದ್ದು ಅವನಿಗೆ ಆಭಾರಿಯಾಗಿದ್ದ ಇಂತಹ ಹಲವಾರು ಹುಡುಗರಿದ್ದರು. ಹರಿ ಚಹಾವನ್ನು ಗುಟುಕಿಸುತ್ತಾ ಧುಲ್‌ನ ಬಗ್ಗೆ ಎಲ್ಲವನ್ನೂ ತಿಳಿಸಿದ. ಮೇಧಾವಿ ಮುದಿ ಪಕ್ಷಿಯಂತೆ ಪಾನ್‌ವಾಲಾ, ತನ್ನ ಕತ್ತನ್ನು ಒಂದು ಕಡೆಗೆ ವಾಲಿಸಿ ಕೇಳುತ್ತಿದ್ದ ಹಾಗೂ ತನ್ನ ತೊಡೆಯ ಮೇಲೆ ಸುತ್ತಿಕೊಂಡು ಮಲಗಿದ್ದ ತನ್ನ ಬೂದು ಬಣ್ಣದ ಬೆಕ್ಕನ್ನು ತಟ್ಟುತ್ತಿದ್ದ.

''ಹೌದು'' ಪಾನ್‌ವಾಲಾ ತಲೆಯಾಡಿಸುತ್ತಾ ಹೇಳಿದ, ''ಮುಂಗಾರಿನ ಅಂತ್ಯದ ಸೂಚಕವಾಗಿ ಸದ್ಯದಲ್ಲೇ ತೆಂಗು ದಿನದ ಹಬ್ಬವನ್ನು ಆಚರಿಸಲಾಗುವುದು. ಅಂದು ಎಲ್ಲರೂ ಸಮುದ್ರಕ್ಕೆ ತೆಂಗಿನಕಾಯನ್ನು ಅರ್ಪಿಸುತ್ತಾರೆ ಮತ್ತು ದೋಣಿಗಳು ಸುರಕ್ಷಿತವಾಗಿ ಯಾನವನ್ನು ಪ್ರಾರಂಭಿಸುತ್ತವೆ. ಆಗ ನೀನೂ ದೋಣಿ ಹಿಡಿದು ನಿಮ್ಮೂರಿಗೆ ಹೋಗಬಹುದು. ನೀನು ಮನೆಯನ್ನು ಬಿಟ್ಟು ಬರಬಾರದಿತ್ತು. ಮಗು, ನಿನ್ನ ತಾಯಿ ಮತ್ತು ಸೋದರಿಯರನ್ನು ತೊರೆದು ಬರಬಾರದಿತ್ತು. ನೋಡು, ಎಷ್ಟು ತೆಳ್ಳಗಾಗಿದ್ದಿ, ಅಸ್ವಸ್ಥನಾಗಿದ್ದಿ, ತ್ಚೂ, ತ್ಚೂ !''

''ಅಲ್ಲಾದರೂ ಮಾಡಲು ನನಗೇನೂ ಇರಲಿಲ್ಲ'' ಹರಿ ಸಮರ್ಥಿಸಿಕೊಳ್ಳಲು ಯತ್ನಿಸಿದ. ''ನಮ್ಮಪ್ಪ ಬಹಳ ಹಿಂದೆಯೇ ನಮ್ಮ ಮೀನು ದೋಣಿಯನ್ನು ಮಾರಿಬಿಟ್ಟ. ಇದ್ದ ಒಂದು ಹಸುವನ್ನು ಮಾರಿದ. ನನಗೇನೂ ಕೆಲಸವಿರಲಿಲ್ಲ. ಒಂದು ತುಣುಕು ಭೂಮಿಯಿದ್ದು, ಅದರಲ್ಲಿ ಕಾಯಿಪಲ್ಲೆಯನ್ನು ಮಾತ್ರ ಬೆಳೆಯಲಾಗುತ್ತಿದೆ. ಆ ಜಮೀನಂತೂ ತುಂಬ ಚಿಕ್ಕದು. ಈಗ ಧುಲ್‌ನಲ್ಲಿ ದೊಡ್ಡ ಕಾರ್ಖಾನೆಯೊಂದು ನಿರ್ಮಾಣಗೊಳ್ಳಲಿದೆ, ಅವರು ನಮ್ಮೆಲ್ಲರ ಜಮೀನನ್ನೂ ತೆಗೆದುಕೊಳ್ಳುತ್ತಾರೆ. ನಂತರ ಮೀನುಗಾರಿಕೆಯಾಗಲಿ, ಸಾಗುವಳಿಯಾಗಲಿ ಸಾಧ್ಯವಿಲ್ಲವೆಂದು ಹೇಳುತ್ತಿದ್ದಾರೆ. ಆದ್ದರಿಂದ ಕೆಲಸ ಹುಡುಕುವ ಸಲುವಾಗಿ ನಾನು ಮುಂಬೈಗೆ ಬರಬೇಕಾಯಿತು.''

''ಎಲ್ಲೇ ಆದರೂ ನಿನಗೆ ಕೆಲಸ ಸಿಗುತ್ತದೆ'' ಪಾನ್‌ವಾಲಾ ನೇರವಾಗಿ ಕುಳಿತು ಹಕ್ಕಿಯಂತಹ ತನ್ನ ಕಣ್ಣುಗಳಿಂದ ಹರಿಯನ್ನು ನೋಡುತ್ತಾ, ''ನಿನ್ನ ರಟ್ಟೆ ಬಳಸಲು ನಿನಗೆ ಸಾಧ್ಯವಿರುವ ತನಕ ಈ ಮಾತು ನಿಶ್ಚಯ'' ಎಂದು ಹೇಳಿದ. ಕಡ್ಡಿಯಂತಿದ್ದ ತನ್ನ ಹತ್ತು ಬೆರಳುಗಳನ್ನೆತ್ತಿ ಅಲ್ಲಾಡಿಸುತ್ತಾ, ''ಈ ಬೆರಳುಗಳಿಗೆ ನೀನು ಕೆಲಸ ಕೊಡಬಹುದು. ಅಲ್ಲದೆ ಕಲಿಯುವ, ಬದಲಾಗುವ ಮತ್ತು ಏಳ್ಗೆ ಹೊಂದುವ ಇಚ್ಛೆ ನಿನಗಿರಬೇಕು. ಅವರು ನಿನ್ನ ಜಮೀನನ್ನು ತೆಗೆದುಕೊಂಡಲ್ಲಿ, ಸಾಗುವಳಿಗೆ ಬದಲು ಅವರ ಕಾರ್ಖಾನೆಯಲ್ಲೇ ಕೆಲಸ ಮಾಡುವುದನ್ನು ನೀನು ಕಲಿಯಬೇಕು. ಅದನ್ನು ತಡೆಯಲಾಗದಿದ್ದರೆ, ಅದನ್ನು ಬಳಸಿ-ಕೊಳ್ಳುವುದನ್ನು ಕಲಿಯಬೇಕು, ಹೆದರಬಾರದು.''

''ಕಾಲೇಜುಗಳಲ್ಲಿ ಪದವಿ ಗಳಿಸಿರುವ ಇಂಜಿನಿಯರ್‌ಗಳು ಮಾತ್ರ ಅಲ್ಲಿ ಉದ್ಯೋಗ ಪಡೆಯುವರೆಂದು ನಮ್ಮ ಹಿರಿಯರು ಹೇಳುತ್ತಾರೆ. ಅವರಿಗೆ ಮೀನುಗಾರರಾಗಲಿ, ರೈತರಾಗಲಿ ಬೇಕಿಲ್ಲ. ನಮಗೆ ಅಲ್ಲಿ ಕೆಲಸ ಸಿಗುವುದಿಲ್ಲ.''

''ಹೂಂ !'' ಪಾನ್‌ವಾಲ ಹೂಂಕರಿಸಿ, ಕೆಲ ಸಮಯ ತನ್ನ ತುಟಿಯನ್ನು ಕಚ್ಚಿಕೊಳ್ಳು-ತ್ತಿದ್ದ. ''ಇದ್ದರೂ ಇರಬಹುದು. ಆದರೆ ಕಾರ್ಖಾನೆಯಲ್ಲಿ ಬೇರೆ ಕೆಲಸಗಳೂ ಇರುತ್ತವೆ. ಕಟ್ಟಡವನ್ನು ಕಟ್ಟುವ ಸಮಯದಲ್ಲಿ ಅದನ್ನು ಕಟ್ಟುವವನಾಗಿ, ಇಲ್ಲವೆ ರಸ್ತೆ

ನಿರ್ಮಿಸುವವನಾಗಿ ನಿನಗೆ ಕೆಲಸ ಸಿಗಬಹುದು. ಮುಂದೆ ಇಂಜಿನಿಯರ್‌ಗಳು ಮತ್ತು ತಂತ್ರಜ್ಞರು ವಾಸಿಸಲು ಅಲ್ಲಿನ ಹೊಸ ಮನೆಗಳಿಗೆ ಬರುತ್ತಾರೆ, ತಮಗಾಗಿ ಕೆಲಸ ಮಾಡಲು ಅವರಿಗೆ  ಕೆಲಸಗಾರರು ಬೇಕಾಗುತ್ತದೆ. ಅವರಿಗೆ ಆಹಾರ ಪದಾರ್ಥಗಳು, ಕಾಯಿಪಲ್ಲೆ, ಹಾಲು, ಹಣ್ಣು-ಹಂಪಲುಗಳು, ಮೊಟ್ಟೆಗಳ ಅಗತ್ಯವಿರುತ್ತದೆ. ನೀನು ಬೆಳೆಯುವ ಕಾಯಿಪಲ್ಲೆಯನ್ನೂ ತೆಂಗಿನ ಕಾಯಿಗಳನ್ನೂ ಅವರಿಗೆ ಮಾರಬಹುದು. ನೀನು ಒಂದು ಹಸುವನ್ನಾಗಲೀ, ಇಲ್ಲವೆ ಕೋಳಿಗಳನ್ನಾಗಲೀ ಕೊಂಡು, ಅದರಿಂದಲೇ ಜೀವನ ನಿರ್ವಹಿಸಬಹುದು. ಹೌದು, ಹೌದು, ಖಂಡಿತವಾಗಿ-ಹರಿ, ಈ ಬಗ್ಗೆ ಚಿಂತಿಸು. ಕೆಲಸಕ್ಕೇನು, ಬೇಕಾದಷ್ಟು ಅವಕಾಶವಿರುತ್ತದೆ. ರಿಪೇರಿಗಾಗಿ ಅವರು ಗಡಿಯಾರಗಳು ಮತ್ತು ಕೈಗಡಿಯಾರಗಳನ್ನು ನಿನ್ನಲ್ಲಿಗೆ ತರಬಹುದು'' ಎಂದು ಅವನು ನಗುತ್ತಾ, ಹಲ್ಲಿಲ್ಲದ ತನ್ನ ಕೆಂಪು ಒಸಡನ್ನು ತೋರಿಸಿದ. ''ಆದ್ದರಿಂದ ಗಡಿಯಾರಗಳನ್ನು ರಿಪೇರಿ ಮಾಡುವ ನಿನ್ನ ಸಾಮರ್ಥ್ಯ ವ್ಯರ್ಥವೇನಲ್ಲ. ಧುಲ್‌ನಲ್ಲಿ ನೀನು ಪ್ರಪ್ರಥಮ ಗಡಿಯಾರ ರಿಪೇರಿ ಅಂಗಡಿಯ ಮಾಲೀಕನಾಗಬಹುದು, ಇದಕ್ಕೇನು ಹೇಳುತ್ತಿ?''



ಹರಿ ವಿಸ್ಮಯದಿಂದ ನಕ್ಕ. ಇಂತಹ ಆಲೋಚನೆ ಅವನಿಗೆ ಬಂದೇ ಇರಲಿಲ್ಲ.

''ಓ, ಪಾನ್‌ವಾಲಾ'' ಹರಿ ಗಟ್ಟಿಯಾಗಿ ಕೇಳಿದ, ''ನೀವು ಎಂದು ಮತ್ತೆ ಅಂಗಡಿಗೆ ಬರುತ್ತೀರಿ, ನನಗೆ ಹೆಚ್ಚು ಹೆಚ್ಚಾಗಿ ಕಲಿಸುತ್ತೀರಿ?''

''ಆಗಲಿ, ಆಗಲಿ'' ಪಾನ್‌ವಾಲಾ ತನ್ನ ಮುದಿ ಬೆಕ್ಕನ್ನು ತಟ್ಟುತ್ತಾ ಹೇಳಿದ, ''ನಾನು ಬರುತ್ತೇನೆ... ನಿನಗೆ ಕಲಿಸುತ್ತೇನೆ.. ನನಗಾಗಿ ಕಾಯುತ್ತಿರು. ಇಷ್ಟು ಬೇಗ ಊರಿಗೆ ಓಡಿಹೋಗಬೇಡ.''

''ಇಲ್ಲ'' ಹರಿ ಭರವಸೆ ನೀಡಿದ, ''ನಾನು ಇನ್ನೂ ಹೆಚ್ಚು ಕಲಿಯಲು ಇಷ್ಟಪಡುತ್ತೇನೆ.''

''ಶಾಭಾಸ್!'' ಪಾನ್‌ವಾಲಾ ಹೇಳಿದ, ''ನಿನ್ನಿಂದ ಈ ಮಾತನ್ನು ಕೇಳಬೇಕೆಂದು ನನ್ನ ಆಸೆಯಾಗಿತ್ತು. ಕಲಿಯಬೇಕು, ಕಲಿಯಬೇಕು... ಕಲಿಯಬೇಕು- ಇದರಿಂದ ನೀನು ಏಳ್ಗೆ ಹೊಂದುವೆ, ಬದಲಾಗುವೆ. ಸಂಗತಿಗಳು ಸದಾ ಬದಲಾಗುತ್ತಿರುತ್ತವೆ. ಮಗು, ಯಾವುದೇ ಆದರೂ ಒಂದೇ ರೀತಿ ಇರುವುದಿಲ್ಲ. ಬಹು ಕಾಲದ ಹಿಂದೆ ನಮ್ಮ ಪೃಥ್ವಿ ನೀರಿನಿಂದ ತುಂಬಿದ್ದಾಗ, ಎಲ್ಲ ಜಂತುಗಳೂ ಅದರಲ್ಲಿ ಜೀವಿಸುತ್ತಿದ್ದವು, ಈಜಾಡುತ್ತಿದ್ದವು. ನೀರು ಕಡಿಮೆಯಾಗಿ, ಭೂಮಿ ಕಾಣಿಸಿಕೊಂಡಾಗ ಸಾಗರದ ಈ ಜಂತುಗಳು ತೆವಳಿಕೊಂಡು ಮೇಲೆ ಬಂದು, ಭೂಮಿಯ ಮೇಲೆ ಚಲಿಸುವುದನ್ನು ಕಲಿತವು. ಸಸ್ಯಗಳು ಮರಗಳಾಗಿ ಬೆಳೆದಾಗ, ಅವನ್ನು ಏರುವುದನ್ನೂ ಸಹ ಅವು ಕಲಿತವು. ತಿನ್ನಲು ಸಾಕಷ್ಟು ಸಸ್ಯಗಳಿಲ್ಲ-ದಿದ್ದಾಗ, ಆಹಾರಕ್ಕಾಗಿ ಅವು ಇತರ ಪ್ರಾಣಿಗಳನ್ನು ಬೇಟೆಯಾಡುವುದನ್ನು ಕಲಿತು, ಅವನ್ನು ಕೊಂದು ತಿನ್ನಲಾರಂಭಿಸಿದವು. ಸ್ಥಿತಿಗತಿಗಳು ಹಾಗೇ ಇವೆಯೆಂದು ಭಾವಿಸಬೇಡ. ಇಲ್ಲ. ಅವು ಈಗಲೂ ಬದಲಾಗುತ್ತಿವೆ. ನೀನು ಉಳಿದು, ಬಾಳಲು ಅಪೇಕ್ಷಿಸುವುದಾದರೆ, ನೀನೂ ಬದಲಾಗುವುದು ಅಗತ್ಯ. ಚಕ್ರವು ತಿರುಗುತ್ತಲೇ ಇರುತ್ತದೆ. ಅದು ಎಂದೂ ನಿಲ್ಲುವುದಿಲ್ಲ, ಸ್ಥಿರವಾಗಿರುವುದಿಲ್ಲ. ನೋಡು, ಮುಂಬೈ ಸಹ ಯಾವಾಗಲೂ ಎಂದಿನಂತೆಯೇ ಇಲ್ಲ. ಐವತ್ತು ವರ್ಷಗಳ ಹಿಂದೆ ಇಲ್ಲಿ ಬೆಟ್ಟಗಳು, ಉದ್ಯಾನಗಳು, ಸುಂದರವಾದ ಅರಮನೆಗಳು ಮತ್ತು ಸೌಧಗಳಿದ್ದವು. ಆದರೆ ಆ ಸ್ಥಳಗಳಲ್ಲಿ ಈಗ ಕೊಳಚೆ ಪ್ರದೇಶಗಳು, ಅಂಗಡಿಗಳು, ಸಾರಿಗೆ ಮತ್ತು ಜನರ ಗುಂಪುಗಳಿವೆ. ಹಿಂದೊಮ್ಮೆ ನಾನು ಉದ್ಯಾನವನ, ಗುಲಾಬಿ ಗಿಡಗಳು ಮತ್ತು ಕಾರಂಜಿಗಳಿದ್ದ ಸೌಧವೊಂದರಲ್ಲಿ ವಾಸಿಸುತ್ತಿದ್ದೆ. ಈಗ ರೇಲ್ವೆ ನಿಲ್ದಾಣದ ಮೇಲೆ, ಪಾರಿವಾಳದ ಗೂಡಿನಲ್ಲಿ ವಾಸಿಸುತ್ತಿದ್ದೇನೆ'' ಎಂದು ಹೇಳಿ, ಇದೊಂದು ಹಾಸ್ಯವೆಂಬಂತೆ, ಪಾನ್‌ವಾಲಾ ಗಹಗಹಿಸಿ ನಕ್ಕ. ''ಹೀಗೆ ನಮ್ಮ ಮೀನುಗಾರ ಹರಿ ಮತ್ತು ರೈತ ಹರಿ, ಕೋಳಿ ಸಾಕಣೆಯ ಹರಿ ಇಲ್ಲವೇ ಗಡಿಯಾರ ರಿಪೇರಿಯ ಹರಿಯಾಗುತ್ತಾನೆ!''

ಭಾವೋದ್ರೇಕವುಳ್ಳ ಮತ್ತು ಚೈತನ್ಯಪೂರ್ಣನಾದ ಪಾನ್‌ವಾಲಾನನ್ನು ಕಂಡು ಹರಿ ನಸುನಕ್ಕ. ಅವನು ಇಷ್ಟರಮಟ್ಟಿಗೆ ಗುಣಮುಖನಾಗಿದ್ದರೆ ಅವನು ಸದ್ಯದಲ್ಲೇ ಅಂಗಡಿಗೆ ಬರುತ್ತಾನೆ ಮತ್ತು ತನಗೆ ಮತ್ತಷ್ಟು ಕಲಿಸಿಕೊಡುತ್ತಾನೆ. ತಾನು ಕಲಿಯಬೇಕಾದ್ದು ಇನ್ನೂ ಅಪಾರವಾಗಿದೆ ಎಂಬುದು ಹರಿಗೆ ಗೊತ್ತಿತ್ತು.

''ನೀನು ಅದೃಷ್ಟಶಾಲಿ'' ಪಾನ್‌ವಾಲಾ ಕಣ್ಣುಮಿಟುಕಿಸುತ್ತಾ ತನ್ನ ಕುರ್ಚಿಗೆ ಒರಗಿಕೊಂಡು ಕುಳಿತ. ''ನೀನಿನ್ನೂ ಚಿಕ್ಕವನು. ನೀನು ಬದಲಾಗಬಹುದು, ಕಲಿಯಬಹುದು, ಬೆಳೆಯಬಹುದು. ವೃದ್ಧರಿಗೆ ಸಾಧ್ಯವಿಲ್ಲ, ಆದರೆ ನಿನಗೆ ಸಾಧ್ಯ. ನಿನಗೆ ಖಂಡಿತ

ಸಾಧ್ಯವೆಂಬುದು ನನಗೆ ಗೊತ್ತು.''

* * *

ಮತ್ತೆ ಕಾಲಚಕ್ರ ತಿರುಗಿತು. ಪಾನ್‌ವಾಲಾ ಬದಲಾವಣೆಯ ಬಗ್ಗೆ ತಿಳಿಸಿದ್ದಂತೆ ಸ್ಥಿತಿಗತಿಗಳು ಉತ್ತಮಗೊಂಡವು. ಈ ಮುಂಚೆ ಅವು ಹೇಗೆ ದುರ್ಭರಗೊಂಡಿದ್ದವೋ ಅದಕ್ಕೆ ಪ್ರತಿಯಾಗಿ ಸುಧಾರಿಸಿದ್ದವು. ಸುರಿಮಳೆ ತುಂತುರಾಗಿ ಪರಿವರ್ತಿತಗೊಂಡಿತು. ಪಾನ್‌ವಾಲಾ ತನ್ನ ಅಂಗಡಿಯನ್ನು ತೆರೆಯಲು ವಾಪಸ್ ಬಂದ. ಅವನು ತುಂಬ ಬಿಳಿಚಿಕೊಂಡಿದ್ದು, ದುರ್ಬಲನಾಗಿದ್ದ. ಆದರೆ, ಕೆಲಸವನ್ನು ಭರದಿಂದ ಪ್ರಾರಂಭಿಸಲು ತುಂಬ ಕಾತುರನಾಗಿದ್ದ. ಮಾಡಬೇಕಾದ ರಿಪೇರಿ ಕೆಲಸ ಸಾಕಷ್ಟು ಜಮಾಯಿಸಿದ್ದರಿಂದ, ಹರಿ ಹೆಚ್ಚು ಸಮಯ ಅವನಿಗೆ ಸಹಾಯ ಮಾಡುತ್ತಿದ್ದ. ಅವನು ಖಾನಾವಳಿಯಲ್ಲಿ ಕಳೆಯುತ್ತಿದ್ದ ಸಮಯದ ಅವಧಿ ಕಡಿಮೆಯಾಗಿತ್ತು.

ಇದರಿಂದ ಜಗುವಿಗೆ ಅಸಮಾಧಾನವಾದಂತೇನೂ ಕಾಣಲಿಲ್ಲ. ತನ್ನ ಮನೆಗೆ ಹರಿಯ ಭೇಟಿಯು ನತದೃಷ್ಟಕರವಾಗಿ ಪರಿಣಮಿಸಿದ ಮೇಲೆ, ಅವನನ್ನು ಆಗಾಗ್ಗೆ ನೋಡಲು ಇಲ್ಲವೆ ಮಾತನಾಡಿಸಲು ಜಗು ಹಿಂದೇಟು ಹಾಕುತ್ತಿರುವಂತೆ ತೋರುತ್ತಿತ್ತು. ಹರಿ, ತನ್ನ ಹೆಂಡತಿ ಮತ್ತು ಕುಂಟುಂಬದವರನ್ನು ಕಂಡದ್ದೂ, ಅವರು ವಾಸಿಸುತ್ತಿರುವ ದುಸ್ಥಿತಿಯನ್ನು ನೋಡಿದುದೂ ಜಗುವಿಗೆ ಬಹುಶಃ ವಿಷಾದವುಂಟು ಮಾಡಿತ್ತು. ಆದ್ದರಿಂದ ಕೆಲವು ತಾಸುಗಳ ಕಾಲ ಪಾನ್‌ವಾಲಾನಲ್ಲಿ ಕಳೆಯಲು ಹರಿ ಅನುಮತಿ ಕೇಳಿದಾಗಲೆಲ್ಲಾ, ಜಗು ಎತ್ತಲೋ ನೋಡುತ್ತಾ ಸಮ್ಮತಿಯೊಡನೆ ಸುಮ್ಮನೆ ತಲೆದೂಗುತ್ತಿದ್ದ, ಇಲ್ಲವೆ ಗೊಣಗುತ್ತಿದ್ದ.

ಬೆಟ್ಟದ ಮೇಲೆ ಡಿಸಿಲ್ವಾ ಅವರು ವಾಸಿಸುತ್ತಿದ್ದ ಫ್ಲಾಟ್‌ನ ದೊಡ್ಡ ಕಟ್ಟಡಕ್ಕೆ ಹರಿ ಪುನಃ ಹೋಗಲಿಲ್ಲ. ಅಲ್ಲಿಗೆ ಹೋಗಿ, ಕೆಲಸ ಕೇಳುವಂತಹ ಅಪಮಾನ ಮತ್ತು ಅವಹೇಳನವನ್ನು ತಾನು ಸಹಿಸಲಾರೆ ಎಂದು ಭಾವಿಸಿದ. ಈಗ ಅವನು ಆಶ್ರಯ ಮತ್ತು ರಕ್ಷಣೆಗಾಗಿ ಯಾವುದೇ ಬಿಲಕ್ಕಾದರೂ ತೆವಳಿಕೊಂಡು ಹೋಗುವಂತಹ ಭೀರು ಮತ್ತು ಭ್ರಾಂತ ಹುಡುಗನಾಗಿರಲಿಲ್ಲ. ತನಗೀಗ ಆಯ್ಕೆ ಮಾಡುವ ಮತ್ತು ನಿರ್ಧಾರ ಕೈಗೊಳ್ಳುವ ಸಾಮರ್ಥ್ಯ ಇದೆ ಎಂಬ ಆತ್ಮವಿಶ್ವಾಸ ಅವನಲ್ಲುಂಟಾಗಿತ್ತು. ದೊಡ್ಡ ಶ್ರೀಮಂತರ ಮನೆಯಲ್ಲಿ ಆಳಿನಂತೆ ಕೆಲಸ ಮಾಡಲು ಅವನು ಈಗ ಖಂಡಿತ ಇಷ್ಟಪಡುತ್ತಿರಲಿಲ್ಲ. ಗಾಜಿನ ಮತ್ತು ಪಿಂಗಾಣಿ ಸಾಮಾನುಗಳನ್ನು ಒಡೆದು ಹಾಕುವುದು, ಕೊಳಕಾದ ಕೈ ಬೆರಳುಗಳ ಮತ್ತು ಪಾದಗಳ ಗುರುತನ್ನು ಮಿರುಗುವ ವಸ್ತುಗಳ ಮೇಲೆ ಉಳಿಸುವುದು, ಲಿಫ್ಟ್‌ಗಳು, ಬಾಗಿಲ ಕರೆಗಂಟೆಗಳು, ಟೆಲಿಫೋನ್‌ಗಳು ಮತ್ತು ಕಾರುಗಳ ಬಗ್ಗೆ ತನ್ನ ಅಜ್ಞಾನವನ್ನು ತೋರ್ಪಡಿಸು-ವುದು-ಮುಂತಾದವುಗಳಿಂದಾಗಿ ತಾನೊಬ್ಬ ತಿಳಿಗೇಡಿಯಾಗುತ್ತೇನೆಂದು ಅವನು ಭಾವಿಸಿದ. ಅವನೇನು ನಗರದ ಹುಡುಗನಲ್ಲ. ಹಾಗೆ ಆಗಲು ಅವನಿಗೆ ಇಷ್ಟವೂ ಇರಲಿಲ್ಲ. ಸಮುದ್ರದಲ್ಲಿ ಮೀನುದೋಣಿಗಳು ನಾಪತ್ತೆಯಾದುವೆಂದು ಅವನು ರೇಡಿಯೊದಲ್ಲಿ ಕೇಳಿದಾಗಿನಿಂದಲೂ, ಅವನಿಗೆ ತನ್ನ ಸ್ವಂತ ದೋಣಿಗಳು ಇಲ್ಲವೆ, ತನ್ನ ತಂದೆಯ ಮತ್ತು ಸೋದರರ ದೋಣಿಗಳು ನಾಪತ್ತೆಯಾದುವೇನೋ ಎಂಬಂತೆ ಮನಸ್ಸು ಗೊಂದಲಮಯವಾಗಿತ್ತು. ತಾನು ಥುಲ್‌ಗೆ ಸೇರಿದವನು, ತಾನು ಹೋಗುವುದು ಅಲ್ಲಿಗೇ ಎಂಬುದು ಹರಿಗೆ ಖಚಿತವಾಗಿತ್ತು. ಜೀವನದಲ್ಲಿ ಏನು ಮಾಡಬೇಕೆಂಬುದನ್ನು ಆರಿಸಿಕೊಂಡು ಅದನ್ನು ಸಾಧಿಸುವುದು ಎಂತಹ ಹರ್ಷದಾಯಕ

ವಿಷಯ!

''ಮಳೆಗಾಲ ಮುಗಿದ ಮೇಲೆ ನಾನು ವಾಪಸ್ ಹೋಗುತ್ತೇನೆ'' ಹರಿ ಜಗುವಿಗೆ ಹೇಳಿದ, ''ನನ್ನ ಜಾಗಕ್ಕೆ ಇನ್ನೊಬ್ಬನನ್ನು ನೇಮಿಸಿಕೊಳ್ಳಲು ನೀನು ಇಚ್ಚಿಸಬಹುದಾದ್ದರಿಂದ ಈಗಲೇ ಹೇಳುವುದು ಒಳಿತು.''

ಜಗು ಸುಮ್ಮನೆ ತಲೆಯಾಡಿಸಿ, ಎತ್ತಲೋ ನೋಡಿದ. ''ಎಂದು?''ಅವನು ಕೇಳಿದ.

''ತೆಂಗು ದಿನದ ಹಬ್ಬದ ನಂತರ'' ಹರಿ ಹೇಳಿದ, ''ಹಬ್ಬದ ನಂತರ ಯಾವಾಗಲಾದರೂ ಆಗಬಹುದು.''

''ದೀಪಾವಳಿಯವರೆಗೆ ಇರು'' ಹೊಲಸಾಗಿದ್ದ ಮೇಜಿನ ಮೇಲ್ಭಾಗದತ್ತ ದೃಷ್ಟಿ ಹರಿಸಿ, ಕಂಪಿಸುತ್ತಾ ಅದರ ಮೇಲೆ ¡, ಬಡಿದು, ''ಆ ವೇಳೆಗೆ, ನನಗೆ ಸಹಾಯ ಮಾಡಲು ನನ್ನ ಸೋದರ ಹಳ್ಳಿಯಿಂದ ಬರುತ್ತಾನೆ. ಅಲ್ಲಿಯವರೆಗೆ ಇರು.''

ಹರಿಗೆ ನಿರಾಕರಿಸಬೇಕೆನಿಸಿತು. ಅಷ್ಟು ದೀರ್ಘಕಾಲ ಇರಲು ಅವನಿಗೆ ಇಷ್ಟವಿರಲಿಲ್ಲ. ಆದರೆ ಅವನಿಗೆ ನಿರಾಕರಿಸುವುದೂ ಸಾಧ್ಯವಾಗಲಿಲ್ಲ. ಜಗು ಅವನನ್ನು ತುಂಬ ವಿಶ್ವಾಸದಿಂದ ನೋಡಿಕೊಂಡಿದ್ದ. ಅವನಿಗೆ ಆಹಾರ ಮತ್ತು ಆಶ್ರಯ ನೀಡಿದ್ದ. ಅವನ ಜೀವವನ್ನು ಉಳಿಸಿದ್ದ. ಯಶಸ್ವಿಯಾಗದಿದ್ದಾಗ್ಯೂ, ತನ್ನ ಕುಟುಂಬದ ಒಬ್ಬ ಸದಸ್ಯನನ್ನಾಗಿ ಮಾಡಲು ಯತ್ನಿಸಿದ್ದ. ಆದ್ದರಿಂದ ನಿರಾಕರಿಸಲು ಮನಸ್ಸು ಬರಲಿಲ್ಲ. ಹರಿ, ಮೌನವಾಗಿ ಮೇಜಿನ ಮೇಲಿದ್ದ ಕೊಳಕಾದ ತಟ್ಟೆಗಳನ್ನೆತ್ತಿ,ತೊಳೆಯಲು ಅವನ್ನು ತೆಗೆದುಕೊಂಡು ಹೋದ.

* * *

''ದೀಪಾವಳಿಯ ತನಕ ನಾನು ಹೋಗುವುದಕ್ಕೆ ಜಗು ಬಿಡುವುದಿಲ್ಲ'' ಎಂದು ಹರಿ, ಪಾನ್‌ವಾಲಾನಿಗೆ ಅಸಮಾಧಾನದಿಂದ ಹೇಳಿದ.

''ಏನು, ಬಿಡುವುದಿಲ್ಲವೆ?'' ಪಾನ್‌ವಾಲಾ ಕೇಳಿದ, ''ಏ ಹುಡುಗ, ಅಷ್ಟೊಂದು ಖಿನ್ನನಾಗಬೇಡ. ನಿನಗೆ ಅರಿವಾಗುವುದಕ್ಕೆ ಮುಂಚಿತವಾಗಿಯೇ ದೀಪಾವಳಿ ಬಂದು ಬಿಡುತ್ತದೆ. ಆಕಾಶದತ್ತ ನೋಡು, ಮೋಡಗಳು ಚದುರಿ ಹೋಗುತ್ತಿವೆ. ಸದ್ಯದಲ್ಲೇ ತೆಂಗು ದಿನದ ಹಬ್ಬ ಬರಲಿದೆ. ಆನಂತರ ಬರುವುದೇ ದೀಪಾವಳಿ! ಒಂದರ ಮೇಲೊಂದು ಹಬ್ಬಗಳು ಬರುವುದು ಒಂದು ರೀತಿಯಲ್ಲಿ ಒಳ್ಳೆಯದೆಂದೇ ತೋರುತ್ತದೆ. ದೀಪಾವಳಿಯ ಸಮಯಕ್ಕೆ, ಅಂದರೆ, ಇಡೀ ವರ್ಷದಲ್ಲೇ ಅತ್ಯುತ್ತಮ ದಿನದಂದು ಮನೆಗೆ ಹಿಂದಿರುಗುವುದು ಎಂತಹ ಸೊಗಸು! ಅಲ್ಲಿಯವರೆಗೆ ಇಲ್ಲೇ ಇದ್ದು ಕಲಿ. ನಾನು ನಿನಗೆ ಕಲಿಸಬೇಕಾದ್ದು ಇನ್ನೂ ತುಂಬ ಇದೆ. ನಿನ್ನೆ ನಾನು ನಿನಗೆ ಕೊಟ್ಟಿದ್ದ ಗಡಿಯಾರವನ್ನು ನೀನು ಚೆನ್ನಾಗಿ ರಿಪೇರಿ ಮಾಡಿದ್ದೀ. ಅದನ್ನು ತೆಗೆದುಕೊಂಡು ಹೋಗಲು ಅದರ ಮಾಲೀಕ ಬಂದಾಗ ನಿನಗೆ ಮಜೂರಿ ಕೊಡುವಂತೆ ನಾನು ಅವನಿಗೆ ಹೇಳುತ್ತೇನೆ. ಆದರೂ ಕಲಿಯಬೇಕಾದ್ದು ಬೇಕಾದಷ್ಟಿದೆ. ಇಗೋ, ಜಪಾನಿನಿಂದ ಬಂದ ಈ ಗಡಿಯಾರವನ್ನು ನೋಡು-ಎಲೆಕ್ಟ್ರಾನಿಕ್‌ದು. ನೋಡು, ನನ್ನ ಈ ಇಳಿವಯಸ್ಸಿನಲ್ಲಿ ಹೊಸ ನಮೂನೆಯ ಗಡಿಯಾರದ ಬಗ್ಗೆ ನಾನು ಕಲಿಯಬೇಕಾಗಿದೆ. ನೀನೂ ಇದನ್ನು ಕಲಿಯಬಹುದು. ಹೂಂ, ಕುಳಿತುಕೊ. ನಿನ್ನ ಕೈಯನ್ನು ಒರಿಸಿಕೊ. ಈಗ ಈ ಗಡಿಯಾರದ ಮುಚ್ಚಳವನ್ನು ನಾನು ತೆರೆಯುತ್ತೇನೆ... ನೋಡು....'' ನಂತರ ಅವರಿಬ್ಬರೂ ನಿಗೂಢವಾದ ಆ ಗಡಿಯಾರದ ಒಳಭಾಗವನ್ನು ನೋಡತೊಡಗಿದರು.

ಅಚ್ಚುಕಟ್ಟಾಗಿ ಕೆಲಸ ಮಾಡುತ್ತಿದ್ದ ಅದರ ಸೂಕ್ಷ್ಮ ಭಾಗಗಳ ಅಧ್ಯಯನ ಮಾಡಲಾರಂಭಿಸಿದರು.

ಅವರು ಕೆಲಸ ಮಾಡುತ್ತಿದ್ದಾಗ ಹರಿ ಕೇಳಿದ, ''ಪಾನ್‌ವಾಲಾ, ನೀವು ತೆಂಗು ದಿನವನ್ನೂ, ದೀಪಾವಳಿಯನ್ನೂ ಆಚರಿಸುತ್ತೀರಿ. ಆದರೆ ನೀವು ಹಿಂದೂ ಅಲ್ಲ, ಹೌದಾ? ನೀವು ಪಾರ್ಸಿ ಮತಸ್ಥರಾಗಿದ್ದು, ಪಾರ್ಸಿ ಹಬ್ಬಗಳನ್ನು ಮಾತ್ರ ಆಚರಿಸುತ್ತೀರೆಂದು ನಾನು ತಿಳಿದಿದ್ದೆ.''

''ಓ, ಮಗು ಇಲ್ಲ'' ಪಾನ್‌ವಾಲಾ ತಮಾಷೆಯಾಗಿ ಹೇಳಿದ, ''ಈ ಹಬ್ಬಗಳ ಆಚರಣೆ ಹರ್ಷ ತರುವಂತಹುದು. ಆದ್ದರಿಂದ ಎಲ್ಲ ಹಿಂದೂ ಮತ್ತು ಮುಸ್ಲಿಮರ ಉತ್ಸವಗಳ ಆನಂದದಿಂದ ನಾನೇಕೆ ತಪ್ಪಿಸಿಕೊಳ್ಳಬೇಕು? ಇಲ್ಲ, ಇಲ್ಲ. ನಾನು ಪ್ರತಿಯೊಂದರಲ್ಲೂ ಪಾಲ್ಗೊಳ್ಳಲು, ಪ್ರತಿಯೊಂದರಿಂದಲೂ ಸುಖಪಡಲು ಇಷ್ಟಪಡುತ್ತೇನೆ. ಆದ್ದರಿಂದಲೇ ನಾನು ಇಷ್ಟು ಹರ್ಷಚಿತ್ತನಾಗಿರುತ್ತೇನೆ, ಅಲ್ಲವಾ? ನನ್ನಲ್ಲಿ ಮಂಕುತನ ಇಲ್ಲ, ಅಲ್ಲವಾ?''

ಅವರು ಜಪಾನೀ ಗಡಿಯಾರದ ಬಗ್ಗೆ ಹರ್ಷದಿಂದ ಕೆಲಸ ಮಾಡುತ್ತಿದ್ದಾಗಲೇ, ಹರಿ ರಿಪೇರಿ ಮಾಡಿದ್ದ ರೋಲೆಕ್ಸ್ ಗಡಿಯಾರದ ಮಾಲೀಕ ಬಂದ. ಮಜೂರಿಯನ್ನು ಹರಿಗೆ ಕೊಡಬೇಕೆಂದೂ, ತನಗಲ್ಲವೆಂದೂ ಪಾನ್‌ವಾಲಾ, ಆತನಿಗೆ ತಿಳಿಸಿದ. ಆ ಮನುಷ್ಯ ಸ್ವಲ್ಪ ಗೊಂದಲದಲ್ಲಿ ಬಿದ್ದಂತೆ ಕಂಡಿತು. ಆದರೆ ಪಾನ್‌ವಾಲಾನ ಸೂಚನೆಯಂತೆ ಹತ್ತು ರೂಪಾಯಿಗಳ ನೋಟೊಂದನ್ನು ಹರಿಗೆ ಕೊಟ್ಟ. ಹರಿ ಆ ನೋಟನ್ನೇ ದಿಟ್ಟಿಸಿ ನೋಡಿದ. ತಾನೀಗ ಚಿಕ್ಕವನಲ್ಲ, ತಾನೊಬ್ಬ ಪ್ರೌಢ ಎಂಬ ಭಾವನೆ ಅವನಿಗೆ ಹಠಾತ್ತನೆ ಉಂಟಾಯಿತು.'' ಏನು, ನಿನಗೆ ಸಂತೋಷವಾಗಲಿಲ್ಲವಾ?'' ಎಂದು ಪಾನ್‌ವಾಲಾ ಕೇಳಿದ. ಹರಿ ನಗುವಂತಿರಲಿಲ್ಲ. ಸಮ್ಮತಿಯಿಂದ ಸುಮ್ಮನೆ ತಲೆಯಾಡಿಸಿ, ಆ ಹಣವನ್ನು ಜೋಪಾನವಾಗಿ ತನ್ನ ಜೇಬಿನಲ್ಲಿ ಇಟ್ಟುಕೊಂಡ.

''ಮನೆಗೆ ಹೋಗುವ ಮುನ್ನ, ನನ್ನ ಸೋದರಿಯರಿಗೆ ನಾನು ಉಡುಗೊರೆಯನ್ನು ಒಯ್ಯುತ್ತೇನೆ'' ಹರಿ ಹೇಳಿದ, ''ಗಡಿಯಾರಗಳ ರಿಪೇರಿಯಿಂದ ಲಭಿಸುವ ಎಲ್ಲ ಹಣವನ್ನೂ ಅದಕ್ಕಾಗಿ ಉಳಿಸುತ್ತೇನೆ.''

* * *

ಅಂತೂ ತೆಂಗು ಹಬ್ಬದ ದಿನ ಬಂತು. ಆದರೆ ಮಳೆಗಾಲ ಇನ್ನೂ ಪೂರ್ಣವಾಗಿ ಮುಗಿದಿರಲಿಲ್ಲ. ಆದರೂ ಮುಂಗಾರಿನಂತೆ ಹಗಲು, ರಾತ್ರಿ ಮಳೆ ಸುರಿಯದೆ, ಆಗಾಗ್ಗೆ ತುಂತುರು ಮಳೆ ಬೀಳುತ್ತಿತ್ತು. ಮೋಡಗಳು, ಗಾಳಿಯಲ್ಲಿ ಕೆನೆ ಬಣ್ಣದ ತುಪ್ಪಳದಂತೆ ತೇಲಾಡುತ್ತಿದ್ದವು. ಸಮುದ್ರವೂ ತುಂಬಾ ಶಾಂತವಾಗಿತ್ತು. ಅಲೆಗಳು ಸಾಲುಮರಗಳವರೆಗೆ ಏರಿ, ರಸ್ತೆಗಳಾಚೆ ಅಪ್ಪಳಿಸುತ್ತಿರಲಿಲ್ಲ. ಅವು, ಬಿರುಗಾಳಿಯ ನಂತರ ಮುಲುಕುತ್ತಾ, ದಣಿದಿರುವಂತೆ ತೋರುತ್ತಿದ್ದವು. ನಗರದ ಕಟ್ಟಡಗಳು ಇನ್ನೂ ತೇವವಾಗಿದ್ದು, ಬೂಷ್ಟು ಹಿಡಿದಿದ್ದವು. ಆದರೆ, ಹಿಂದಿನಂತೆ ಹಲವಾರು ಅಡಿಗಳವರೆಗೆ ನೀರು ನಿಂತಿರಲಿಲ್ಲ.

ತೆಂಗು ದಿನದಂದು ಬೆಳಗ್ಗೆ ತುಂತುರು ಮಳೆ ಬಿದ್ದಿತ್ತು. ಆದರೆ ಆಗ ಜನ ಇನ್ನೂ ಮನೆಗಳಲ್ಲೇ ಇದ್ದು, ಮುಂಬೈನ ಪೋಷಕ ದೇವರೆನಿಸಿದ, ಗಜಮುಖ ಗಣೇಶನ ಪೂಜೆ ಮಾಡುತ್ತಿದ್ದರು. ದೇವರ ಮುಂದೆ ಊದುಬತ್ತಿಗಳನ್ನು ಹಚ್ಚಿ, ದುಂಡು ಮಲ್ಲಿಗೆಯ

ಹಾರಗಳನ್ನು ಹಾಕಿ, ಸಿಹಿತಿಂಡಿಗಳ ತಟ್ಟೆಗಳನ್ನು ಮುಂದಿರಿಸಿದ್ದರು. ಮಧ್ಯಾಹ್ನ ಸಮುದ್ರಕ್ಕೆ ಅರ್ಪಿಸುವ ಸಲುವಾಗಿ ತೆಂಗಿನ ಕಾಯಿಗಳನ್ನು ಹಿಡಿದು ಜನ ಗುಂಪು ಗುಂಪಾಗಿ ರಸ್ತೆಗಳಲ್ಲಿ ಬಂದಾಗ ಸೂರ್ಯನು ಬೆಳಗುತ್ತಿದ್ದು, ಬಿರುಮಳೆಯಿಂದ ಅಸ್ತವ್ಯಸ್ತವಾಗಿದ್ದ ನಗರಕ್ಕೆ ಬಂಗಾರದ ಮೆರಗುಕೊಟ್ಟಿದ್ದ.

ಹರಿ ಮತ್ತು ಪಾನ್‌ವಾಲಾ ಚೌಪಾಟಿಗೆ ಹೋಗುತ್ತಿದ್ದ ಸಾವಿರಾರು ಜನರಲ್ಲಿ ಸೇರಿದ್ದರು. ಮುಂಬೈಗೆ ಬಂದ ಮೊದಲ ದಿನ ಹರಿ ಈ ಸ್ಥಳವನ್ನು ಸಂತೆಯ ಪ್ರದೇಶವೆಂದು ಭಾವಿಸಿದ್ದ. ಇಂದು ಅದು ನಿಜವಾಗಿ ಒಂದು ದೊಡ್ಡ ಸಂತೆಯ ಪ್ರದೇಶದಂತೆಯೇ ಕಾಣುತ್ತಿತ್ತು. ಪೋಲಿಸರು ಸಂಚಾರವನ್ನು ನಿರ್ದೇಶಿಸುತ್ತಾ, ಮೆರವಣಿಗೆಗಳು, ಮ್ಯಾರಿನ್ ಡ್ರೈವ್ ಅನ್ನು ದಾಟಿ ಸಾಗರದ ದಂಡೆಗೆ ಹೋಗಲು ಮಾರ್ಗ ಮಾಡಿಕೊಡುತ್ತಿದ್ದರು. ಹರಿಗೆ ಪುನಃ ಮುಂಬೈನ ತನ್ನ ಮೊದಲ ದಿನದ ನೆನಪು ಬಂದಿತು. ಹಿಂದೆಂದಿಗಿಂತಲೂ ಅಲ್ಲಿ ಹೆಚ್ಚು ಸಂಖ್ಯೆಯಲ್ಲಿ ಅಂಗಡಿಗಳು ಎದ್ದಿದ್ದವು. ಆ ಅಂಗಡಿಗಳಲ್ಲಿ ಬಿಸಿ ಬಿಸಿಯಾದ ಖಾರದ ತಿಂಡಿಗಳನ್ನೂ, ಐಸ್‌ಕ್ರೀಮ್‌ಗಳನ್ನೂ, ಬಣ್ಣ ಬಣ್ಣದ ಪಾನೀಯಗಳನ್ನೂ, ಬಲೂನ್‌ಗಳನ್ನೂ, ತಗಡಿನ ಪೀಪಿಗಳನ್ನೂ, ಕಾಗದದ ತುತ್ತೂರಿಗಳನ್ನೂ ಮಕ್ಕಳಿಗೆ ಮಾರಲಾಗುತ್ತಿತ್ತು. ನಿಜ, ಮುಖ್ಯವಾಗಿ ತೆಂಗಿನ ಕಾಯಿಗಳನ್ನು ಮಾರಾಟ ಮಾಡಲಾಗುತ್ತಿತ್ತು. ಬಿರುಗಾಳಿಯ ಕಾಲ ಮುಗಿದು, ಎಲ್ಲವೂ ಸುರಕ್ಷಿತವಾಗಿ ಕೊನೆಗೊಂಡದ್ದಕ್ಕಾಗಿ ವಂದನೆ ಸೂಚಿಸಲು ತೆಂಗಿನ ಕಾಯನ್ನು ಸಾಗರಕ್ಕೆ ಅರ್ಪಿಸುವ ಸಲುವಾಗಿ ಎಲ್ಲರೂ ಅದನ್ನು ಕೊಳ್ಳುತ್ತಿದ್ದರು.

ದೀರ್ಘವಾದ ಅಸ್ವಸ್ಥತೆಯಿಂದಾಗಿ ಇನ್ನೂ ಬಿಳಿಚಿಕೊಂಡು ಬಾಗಿದ್ದ ಪಾನ್‌ವಾಲಾ, ಅಂದು ಹೆಚ್ಚು ಉಲ್ಲಾಸಭರಿತನೂ, ಚೈತನ್ಯಪೂರ್ಣನೂ ಆಗಿದ್ದ. ಅವನು ಹರಿಗೆ ಒಂದು ತೆಂಗಿನ ಕಾಯನ್ನು ತೆಗೆಸಿಕೊಟ್ಟ. ಅದಕ್ಕಾಗಿ ಹರಿ ಹಣಕೊಡಲು ಹೋದಾಗ, ''ಬೇಡ, ನಿನ್ನ ಕುಟುಂಬಕ್ಕೆ ಉಡುಗೊರೆ ಕೊಳ್ಳುವ ಸಲುವಾಗಿ ನಿನ್ನ ಹಣವನ್ನು ಉಳಿಸು''ಎಂದು ಹೇಳಿದ. ಅವರು ತಳ್ಳಿಕೊಂಡು, ಜನರ ಗುಂಪಿನ ಮೂಲಕ ಮುಂದೆ ಸಾಗಿ ಸಮುದ್ರದ ಅಂಚಿಗೆ ಬಂದರು. ಅಲ್ಲಿ ಕೆಲವರು ತಮ್ಮ ಕತ್ತುಗಳಿಗೆ ನೇತುಹಾಕಿಕೊಂಡಿದ್ದ ತಮಟೆಗಳನ್ನು ಬಡಿಯುತ್ತಿದ್ದರು. ಅವರು ಹಿಂದೆ-ಮುಂದೆ ಕುಣಿಯುತ್ತಾ, ತಮ್ಮ ಕೈಗಳನ್ನು ಮುಂದೆ ಚಾಚುತ್ತಾ, ಸೊಂಟವನ್ನು ಬಗ್ಗಿಸುತ್ತಾ ಮುಂದೆ ಸಾಗುತ್ತಿದ್ದಂತೆ ಜೋರಾಗಿ ದೇವ ಘೋಷಣೆಗಳನ್ನು ಕೂಗುತ್ತಿದ್ದರು. ಹೆಂಗಸರು ಹೊಳೆಯುವ ಹೊಸದಾದ ಕಡುಗೆಂಪು, ಹಳದಿ, ಕಡುನೀಲಿ, ಕಿತ್ತಳೆ ಬಣ್ಣಗಳ ಸೀರೆಗಳನ್ನುಟ್ಟು, ಹೂಗಳನ್ನು ಮುಡಿದುಕೊಂಡಿದ್ದರು. ಅವರು ಆಕಾಶದತ್ತ ಕೆಂಪು ಪುಡಿಗಳನ್ನು ಎರಚುತ್ತಿದ್ದು, ಆ ಪುಡಿಗಳು ಅವರ ತಲೆ ಮತ್ತು ಭುಜಗಳ ಮೇಲೆ ಬಿದ್ದು, ಮಧ್ಯಾಹ್ನದ ಬಿಸಿಲಿನಲ್ಲಿ ಫಳಫಳನೆ ಹೊಳೆಯುತ್ತಿದ್ದವು. ಅಲೆಗಳು ಹಿಂದೆ ಹಿಂದೆ ಹೋಗಿದ್ದರಿಂದ, ಚಪ್ಪಟೆಯಾದ ಮತ್ತು ಒದ್ದೆಯಾದ ಮರಳ ಮೇಲೆ ಅವರು ನಡೆಯುತ್ತಿ-ದ್ದರು. ಒದ್ದೆಯಾದ ಮರಳೂ ಹೊಳೆಯುತ್ತಿತ್ತು. ಅದು ಬಂಗಾರದ ಬಣ್ಣದ ಆಕಾಶದಲ್ಲಿ ತೇಲುತ್ತಿದ್ದ ಪಾಟಲ ಬಣ್ಣದ ಮೋಡಗಳನ್ನು ಪ್ರತಿಬಿಂಬಿಸುತ್ತಿತ್ತು. ಮಕ್ಕಳು ಬರಿಗಾಲಿನಲ್ಲಿ ಸಮುದ್ರದತ್ತ ಮರಳ ಮೇಲೆ ಓಡುತ್ತಿದ್ದರು. ಸಮುದ್ರದಲ್ಲಿ ಹೋಗಿ ಆಳವಾದ ಜಾಗದಲ್ಲಿ ತಮ್ಮ ತೆಂಗಿನ ಕಾಯಿಗಳನ್ನು ಮುಳುಗಿಸಲು ಇಚ್ಛಿಸುವ ಜನರನ್ನು ಕರೆದೊಯ್ಯುವ ಸಲುವಾಗಿ ಮೀನುಗಾರರು, ತಮ್ಮ ದೋಣಿಗಳೊಡನೆ ಕಾಯುತ್ತಿದ್ದರು. ಮತ್ತೆ ಕೆಲವರು ತಮ್ಮ

ಕಾಯಿಗಳನ್ನು ಸಮುದ್ರದತ್ತ ಎಸೆಯುತ್ತಿದ್ದರು, ಇಲ್ಲವೆ ನೀರಿನಲ್ಲಿ ಸ್ವಲ್ಪ ದೂರ ಹೋಗಿ ಅವನ್ನು ತೇಲಿಬಿಡುತ್ತಿದ್ದರು. ಸಾವಿರಾರು ಕಾಯಿಗಳು ಏರಿಳಿಯುತ್ತಿದ್ದವು, ತೇಲುತ್ತಿದ್ದವು, ಮುಳುಗುತ್ತಿದ್ದವು. ನೂರಾರು ಹುಡುಗರು ಅಲೆಗಳ ವಿರುದ್ಧ ಬಿದ್ದು ನೀರು ಚಿಮ್ಮಿಸುತ್ತಿದ್ದರು, ಜಿಗಿದಾಡುತ್ತಿದ್ದರು.

ಹರಿ, ಹಠಾತ್ತನೆ ತನ್ನ ಅಕ್ಕಪಕ್ಕದಲ್ಲಿದ್ದ ಇಬ್ಬರು ಹುಡುಗರನ್ನು ತಳ್ಳಿ, ಎದುರಿಗಿದ್ದ ಉದ್ದನೆಯ ವ್ಯಕ್ತಿಯನ್ನು ದಾಟಿ, ಪಾನ್‌ವಾಲಾ ಅಚ್ಚರಿಗೊಳ್ಳುವಂತೆ ಕೂಗಿದ, ''ಇದು ನನ್ನದು! ಇದು ನನ್ನದು.'' ಯಾರೋ ಎಸೆದಿದ್ದ ತೆಂಗಿನ ಕಾಯನ್ನು ಕಸಿದುಕೊಳ್ಳಲು ನೀರಿನೊಳಗೆ ಜಿಗಿದ. ಇತರ ಮೂರು-ನಾಲ್ಕು ಹುಡುಗರೊಡನೆ ಸೆಣಸಾಡಿದ. ಸೊಂಟದವರೆಗಿನ ಆಳದ ನೀರಿನಲ್ಲಿ ಹರಿ ನಿಂತಿದ್ದ. ಚಿಮ್ಮಿದ ನೀರು ಅವನ ಸುತ್ತ ಸುತ್ತಿ ಹೋಗುತ್ತಿತ್ತು. ಅಲ್ಲಿ ಅವನು ತೆಂಗಿನ ಕಾಯನ್ನು ಎತ್ತಿಹಿಡಿದು ಪಾನ್‌ವಾಲಾನತ್ತ ತಿರುಗಿ, ವಿಜಯೋತ್ಸವದಿಂದ ನಗುತ್ತಿದ್ದ.

ಪಾನ್‌ವಾಲಾನೂ ಅಚ್ಚರಿಯಿಂದ ನಗಲಾರಂಭಿಸಿದ. ತನ್ನ ಬಹುಮಾನದೊಡನೆ, ನೀರು ಸುರಿಸುತ್ತಾ ಹರಿ ಅವನ ಬಳಿಗೆ ಬಂದಾಗ, ಒಳಗೊಳಗೇ ನಗುತ್ತಾ ಪಾನ್‌ವಾಲಾ ಹೇಳಿದ, ''ಓ, ಅಂತೂ ನೀನೀಗ ನಿಜವಾಗಿ ನಗರದ ಹುಡುಗನಾದೆ, ಅಲ್ಲವಾ? ನೀನೂ ಕಲಿತೆ, ಅಲ್ಲವಾ? ಹರಿ, ನೀನು ಹೀಗೆ ಮಾರ್ಪಾಡಾಗುವುದನ್ನು ನಾನು ನೋಡುವೆನೆಂದು ಎಂದೂ ಭಾವಿಸಿರಲಿಲ್ಲ.''

ಹರಿಗೆ ನಾಚಿಕೆಯಾಗಲಾರಂಭಿಸಿತ್ತು. ಆ ತೆಂಗಿನಕಾಯನ್ನು ಕೊಡಲು ಯಾರಾದರೂ ಭಿಕ್ಷುಕರಿದ್ದಾರೆಯೇ ಎಂದು ಸುತ್ತ ಮುತ್ತ ನೋಡಿದ. ಆದರೆ ಪಾನ್‌ವಾಲಾನಿಗೇನು ದಿಗ್ಭ್ರಮೆಯಾಗಿರಲಿಲ್ಲ. ಅವನು ನಗುತ್ತಿದ್ದ.

''ಹೌದು, ಹರಿ ಈಗ ನೀನೇ ನಿಭಾಯಿಸಬಲ್ಲೆ'' ಅವನು ಹರ್ಷದಿಂದ ನುಡಿದ, ''ನೀನೀಗ ನಿಭಾಯಿಸಬಲ್ಲೆ. ನಿನ್ನ ಬಗ್ಗೆ ಇನ್ನು ಚಿಂತಿಸುವ ಅಗತ್ಯವಿಲ್ಲವೆಂದು ನನಗನಿಸುತ್ತಿದೆ.''

# 12

ಹರಿ ಧುಲ್‌ಗೆ ಹಿಂದಿರುಗಿದ. ಆದರೆ ದೋಣಿಯಿಂದಲ್ಲ, ಬಸ್ ಮೂಲಕ. ಜಗು ಮತ್ತು ಪಾನ್‌ವಾಲಾ ಒಟ್ಟಿಗೆ ಸೇರಿ ಅವನಿಗೆ ಬಸ್ ಟಿಕೆಟ್ ತೆಗೆಸಿಕೊಟ್ಟಿದ್ದರು. ಪಾನ್‌ವಾಲಾ ತನ್ನ ಅಂಗಡಿಯ ಬಾಗಿಲಿನಿಂದಲೇ ಅವನಿಗೆ ವಿದಾಯ ಹೇಳಿದ. ಬೀಳ್ಕೊಡುಗೆಯ ಉಡುಗೊರೆಯಂತೆ ಮತ್ತೆ ಹತ್ತು ರೂಪಾಯಿಗಳ ನೋಟೊಂದನ್ನು ಅವನಿಗೆ ನೀಡಿ, ಕಣ್ಣೀರನ್ನು ತಡೆದುಕೊಳ್ಳಲು ಪ್ರಯತ್ನಿಸುತ್ತಿದ್ದ. ಬಸ್ ನಿಲ್ದಾಣದವರೆಗೆ ಹರಿಯ ಜೊತೆ ಹೋಗಿ, ಅವನನ್ನು ಸರಿಯಾದ ಬಸ್‌ನಲ್ಲಿ ಕೂಡಿಸುವ ಸಲುವಾಗಿ ಜಗು ಬೆಳಗ್ಗೆ ಬಿಡುವು ಮಾಡಿಕೊಂಡು ಬಂದಿದ್ದ. ''ಹರಿ, ನಿನ್ನ ದುಡ್ಡನ್ನು ಜೋಪಾನವಾಗಿ ಇಟ್ಟುಕೊಂಡಿದ್ದೀ ತಾನೆ.'' ಅವನು ಕಾತುರದಿಂದ ಆಗಾಗ ಕೇಳುತ್ತಿದ್ದ. ''ಜೇಬುಗಳ್ಳರ ಬಗ್ಗೆ ಹುಷಾರಾಗಿರು. ನಿನ್ನ ಜೇಬನ್ನು ಆಗಾಗ ಮುಟ್ಟಿಕೊಳ್ಳಬೇಡ. ನಿನ್ನಲ್ಲಿ ಅಷ್ಟೊಂದು ಹಣವಿರುವುದನ್ನು ನೋಡಲು ಯಾರಿಗೂ ಅವಕಾಶ ಕೊಡಬೇಡ.'' ಹರಿಯಂತೆಯೇ ಅವನಿಗೂ ಸಹ, ಕುಟುಂಬಕ್ಕಾಗಿ ಉಳಿಸಿದ ಹಣ ಸುರಕ್ಷಿತವಾಗಿ ಧುಲ್ ಸೇರಬೇಕೆಂಬ ಇಚ್ಛೆಯಿತ್ತು. ತಾನು ಎಚ್ಚರದಿಂದಿರುವುದಾಗಿ ಹರಿ ಪದೇ ಪದೇ ಭರವಸೆ ನೀಡಬೇಕಾಯಿತು. ಧುಲ್ ತಲುಪಿದೊ-ಡನೆ ಕಾರ್ಡ್ ಬರೆಯುವಂತೆ ತಿಳಿಸಲಾಯಿತು. ಜಗುವಿನೊಡನೆ ಸಂಪರ್ಕ ಇಟ್ಟುಕೊಂಡಿರು-ವಂತೆ ಹೇಳಲಾಯಿತು. ಅಂತೂ ಬಸ್ ಹೊರಟಿತು. ಅವರಿಬ್ಬರೂ ಪರಸ್ಪರ ಕೈಆಡಿಸುತ್ತಾ ವಿದಾಯ ಹೇಳಿದರು.

ನಗರವನ್ನು ಹಿಂದು ಹಿಂದಕ್ಕೆ ಹಾಕುತ್ತಿದ್ದಂತೆ-ಅಂದರೆ ಕೊಳಚೆ ಪ್ರದೇಶಗಳು, ಸಿಪ್ಪೆಯಂತೆ ಸುಲಿದುಕೊಳ್ಳುತ್ತಿದ್ದ ಬೂದು ಬಣ್ಣದ ಮನೆಗಳು, ಕೆಟ್ಟ ವಾಸನೆ ಹೊರಡಿಸುತ್ತಿದ್ದ ತೆರೆದ ಚರಂಡಿಗಳು, ಅಕ್ಕಪಕ್ಕದ ಅಂಗಡಿಗಳು, ಬಸ್ ನಿಲ್ದಾಣಗಳು ಮತ್ತು ವಾಹನ ಸಂಚಾರವನ್ನು ಹಿಂದೆ ಹಾಕಿದ ಮೇಲೆ-ಬಯಲು ಪ್ರದೇಶಗಳ ಸೂಚನೆಯನ್ನು ಕಾಣಲು ಕಿಟಕಿಯಲ್ಲಿ ತನ್ನ ತಲೆ ಹಾಕಿದ. ಬಸ್, ಉದ್ದನೆಯ ಮತ್ತು ಅಗಲವಾದ ಸೇತುವೆಯೊಂದನ್ನು ದಾಟಿತು. ಅದರ ಕೆಳಗೆ ಸಮುದ್ರವಿತ್ತು. ಆದರೆ ಅದು ಧುಲ್‌ನಲ್ಲಿ ತಾನು ನೋಡಿದ್ದಂತಹ ಸಮುದ್ರವಲ್ಲ. ಮುಂಬೈ ಅನ್ನು ಮುಖ್ಯ ಪ್ರದೇಶದಿಂದ ಬೇರ್ಪಡಿಸಿದ ಮತ್ತು ಜೊಂಡಿನಿಂದ ಕೂಡಿದ ಸಮುದ್ರ. ಅಲೆಗಳಿಂದಾಗಿ ಆ ಜೊಂಡು ಮುಳುಗಿ ಮೇಲೇಳುತ್ತಿತ್ತು. ಸಮುದ್ರದಿಂದ ಉಪ್ಪಿನ ಮತ್ತು ಕೆಸರಿನ ವಾಸನ ಬರುತ್ತಿತ್ತು. ತೀರದಲ್ಲಿ ಜೊಂಪೆ ಜೊಂಪೆಯಾಗಿ ಜೊಂಡು ಇದ್ದುದು ಮಾತ್ರವಲ್ಲದೆ, ಮೀನು ದೋಣಿಗಳೂ, ಬಲೆಗಳೂ, ಕಿಟಕಿಯ ಗಾಜುಗಳಂತೆ ಹೊಳೆಯುತ್ತಿದ್ದ ಸಿಂಪಿಗಳ ಗುಡ್ಡೆಗಳೂ ಕಾಣುತ್ತಿದ್ದವು. ಹರಿ, ಭಾವುಕನಾಗಿ ಮೈ ಅಲುಗಿಸಿದ.

ಅಷ್ಟರಲ್ಲೇ ಉತ್ಸಾಹ ಶೂನ್ಯವಾದ ದೊಡ್ಡ ಪ್ರದೇಶವೊಂದು ಬಂದಿತು, ಅದೇ ಥಾಣಾದ ಕಾರ್ಖಾನೆಗಳ ಸಮೂಹ. ಅವು ದುರ್ವಾಸನೆಯ ಹೊಗೆ ಮತ್ತು ನಿರುಪಯುಕ್ತ ರಾಸಾಯನಿಕ ವಸ್ತುಗಳನ್ನು ಹೊರಚೆಲ್ಲುತ್ತಾ ಆಕಾಶದ ಬಣ್ಣವನ್ನೇ ಕೆಡಿಸಿದ್ದವು. ಸುತ್ತ ಮುತ್ತಲ ಭೂಮಿಯೂ ಬಂಜರಾಗಿತ್ತು. ಒಂದೇ ಒಂದು ಹುಲ್ಲುಕಡ್ಡಿಯೂ ಸಹ ಕಾಣುತ್ತಿರಲಿಲ್ಲ. ಅಲ್ಲಲ್ಲಿದ್ದ ಕೆಲವೊಂದು ಮರಗಳಲ್ಲೂ ದೂಳು ತುಂಬಿದ್ದು, ಉಸಿರು ಕಟ್ಟಿಸುವಂತಿದ್ದವು. ರೇವಾಸ್‌ನಿಂದ ಅಲಿಬಾಗ್‌ವರೆಗಿನ ಕರಾವಳಿ ಮಾರ್ಗವೂ ಸಹ ಒಂದಲ್ಲ ಒಂದು ದಿನ ಹೀಗಾಗಬಹುದೆಂದು ಹರಿ ಚಿಂತಿಸಿದ.

ಇಂತಹ ಪರಿವರ್ತನೆ ಪ್ರಾರಂಭವಾಗುವಂತಹ ಕೆಲವು ಸೂಚನೆಗಳೂ ಅಲ್ಲಲ್ಲಿ ಕಾಣುತ್ತಿದ್ದವು. ಹೆದ್ದಾರಿಯನ್ನು ಅಗಲ ಮಾಡಲಾಗುತ್ತಿತ್ತು. ರೇಲ್ವೆ ಸೇತುವೆಯೊಂದು ನಿರ್ಮಾಣಗೊಳ್ಳುತ್ತಿತ್ತು. ದೊಡ್ಡ ಮರಗಳನ್ನು ಕಡಿದು ಹಾಕಲಾಗಿತ್ತು. ಬುಲ್‌ಡೋಜರ್‌ಗಳು ಮತ್ತು ಸ್ಟೀಮ್ ರೋಲರ್ ಯಂತ್ರಗಳು ಕೆಲಸ ಮಾಡುತ್ತಿದ್ದವು. ಆದರೆ ಬಂಗಾರದ ಬಣ್ಣದ ಭತ್ತ ಬಲಿತು ಗದ್ದೆಗಳಲ್ಲಿ ನಿಂತಿತ್ತು. ಅವುಗಳಾಚೆ ನೇರಿಳೆ ಬಣ್ಣದ ಮತ್ತು ಕಂದು ಬಣ್ಣದ ಗುಡ್ಡಗಳಿದ್ದವು. ಆಕಾಶ ಸ್ವಚ್ಛವೂ, ನೀಲಿಯೂ ಆಗಿತ್ತು. ಭತ್ತದ ಗದ್ದೆಗಳ ಮೂಲಕ ಸುತ್ತುವರಿದು ಹರಿಯುತ್ತಿದ್ದ ಮಂದಗತಿಯ ನದಿಯನ್ನು ಅವರು ದಾಟಿದರು. ನಂತರ ದೊಡ್ಡ ಎಲೆಗಳ ಸಾಲ ವೃಕ್ಷಗಳ ಕಾಡಿನ ಮೂಲಕ ಪಯಣಿಸಿದರು. ಅನಂತರ ಕರಾವಳಿ ಮಾರ್ಗದಲ್ಲಿ ಬಸ್ಸು ಓಡಿತು. ಹರಿ ಪುನಃ ತೆಂಗಿನ ಮರಗಳ ಸಾಲುಗಳನ್ನೂ, ದೂರದಲ್ಲಿ ಅಸ್ಪಷ್ಟವಾಗಿ ಕಾಣುತ್ತಿದ್ದ ಕಡಲನ್ನೂ ಕಂಡ.

ಮೇಲೆ ಗುಡಿಯಿದ್ದ ಬೆಟ್ಟದ ಪಾರ್ಶ್ವದ ಹೆದ್ದಾರಿಯಲ್ಲಿ ಹರಿಯನ್ನು ಇಳಿಸಲಾಯಿತು. ದೂಳು ತುಂಬಿದ ಹಳೆ ರಸ್ತೆಯನ್ನು ಅಗಲ ಮಾಡಿ, ಟಾರ್ ಹಾಕಲಾಗುತ್ತಿತ್ತು. ಮಾರ್ಗದ ನಿರ್ಮಾಣಕ್ಕೆ ಅಡ್ಡಿಯಾಗದಂತೆ ಅನೇಕ ಸಾಲ ವೃಕ್ಷಗಳನ್ನೂ, ಆಲದ ಮರಗಳನ್ನೂ ಕಡಿದು ಹಾಕಲಾಗಿತ್ತು. ಥುಲ್ ಮಾತ್ರ ಯಾವುದೇ ರೀತಿಯಲ್ಲೂ ಬದಲಾಗದಂತೆ ತೋರುತ್ತಿತ್ತು. ಸೂರ್ಯನ ಬೆಳಕು ಬೆಟ್ಟದ ಮೇಲೆ ಬಿದ್ದಿದ್ದು, ಅದರ ತುದಿಯಲ್ಲಿ ಘನಾಕೃತಿಯ ಬಿಳಿಯ ಗುಡಿ ಇನ್ನೂ ನಿಂತಿತ್ತು. ಹರಿ ಹೆದ್ದಾರಿ ಬಿಟ್ಟು, ಶಾಂತ ಮತ್ತು ಜಡ ಗ್ರಾಮದ ಮೂಲಕ ಹೋಗುತ್ತಿದ್ದ ಉಬ್ಬು ತಗ್ಗಿನ ರಸ್ತೆಯಲ್ಲಿ ನಡೆದ.

ತೆಂಗಿನ ತೋಟಗಳ ಮೂಲಕ, ದಂಡೆಯ ಮೇಲೆ ಗಂಟುಗಂಟಾದ ಮುದಿ ಸರ್ವೆ ಮರಗಳ ಹಾದಿಯಲ್ಲಿ ಹರಿ ಬಂದ. ಉಪ್ಪನ್ನು ಹಾರಿಸುತ್ತಿದ್ದ ಸ್ವಚ್ಛವಾದ ಗಾಳಿ ಅಲ್ಲಿ ಬೀಸುತ್ತಿತ್ತು. ಅದೇ ಕಡಲು, ನೈಜವಾದ ಕಡಲು, ತೆರೆದ ಕಡಲು, ಮುಂಬೈ ದ್ವೀಪವನ್ನು ಸುತ್ತುವರಿದಿದ್ದ ಸಮುದ್ರದಂತಲ್ಲ. ಸರ್ವೆಮರದ ಬೇರೊಂದರ ಮೇಲೆ ಹರಿ ಕುಳಿತ. ತನ್ನ ಕೈಗಳ ಮೇಲೆ ಗಲ್ಲವನ್ನು ಆಸರೆಯಾಗಿಟ್ಟುಕೊಂಡು ಕಡಲನ್ನು ನೋಡಿದ, ತದೇಕಚಿತ್ತದಿಂದ ಒಂದೇ ಸಮನೆ ನೋಡಿದ. ತನಗೆ ನೆನಪಿದ್ದಂತೆಯೇ ಈ ಕಡಲಿದೆಯೇನೋ ಎಂಬುದನ್ನು ತಿಳಿಯಲು ಅಪೇಕ್ಷಿಸಿದ. ನಿಜ, ಅದು ಅಂತೆಯೇ ಇತ್ತು. ಅಲೆಗಳು ಬರುತ್ತಿದ್ದವು. ಮುಳುಗೇಳುತ್ತಾ ಬರುತ್ತಿದ್ದ ಅವು ಬೆಳ್ಳಿಯ ದಂಡೆಯನ್ನು ಅಪ್ಪಳಿಸುತ್ತಿದ್ದವು. ಮೂರು ಕಪ್ಪು ಬಂಡೆಗಳು ಮುಳುಗಿದ್ದವು. ಆದರೆ ಅವುಗಳ ತುದಿಗಳು, ಅಲೆಗಳ ಕೆನೆಯ ಬಣ್ಣದ ನೊರೆಯ ಮೇಲೆ ಎದ್ದು ಕಾಣುತ್ತಿದ್ದವು. ಮೀನುದೋಣಿಗಳ ಸಮೂಹ ಕ್ಷಿತಿಜದ ಉದ್ದಕ್ಕೂ

ಕಾಣುತ್ತಿತ್ತು. ಗಲ್ ಹಕ್ಕಿಯ ರೆಕ್ಕೆಯಂತೆ, ಇಲ್ಲವೆ ಚಿಟ್ಟೆಯಂತೆ ಕಾಣುತ್ತಿದ್ದ ಅದು ಆಕಾಶದಂಚಿನಲ್ಲಿ ಪ್ರಕಾಶಮಾನವಾಗಿ ದೃಢವಾಗಿ ನಿಂತಂತಿತ್ತು. ತೀರಕ್ಕೆ ಸಮೀಪದಲ್ಲಿ ಎರಡು ಚಿಕ್ಕ ದ್ವೀಪಗಳಿದ್ದವು; ಅಂಧೇರಿ ಮತ್ತು ಕುಂಧೇರಿ. ಬಂಡೆಗಳಿಂದ ಕೂಡಿದ್ದ ಅವು ಹಸುರಾಗಿ ಕಾಣುತ್ತಿದ್ದವು. ಮೂರು ಚಿಕ್ಕ ದೋಣಿಗಳು, ಅವುಗಳ ಸುತ್ತ ಕೆಳಕ್ಕೂ ಮೇಲಕ್ಕೂ ತೂಗಾಡುತ್ತಾ ಹಳ್ಳಿಗೆ ಹಿಂದಿರುಗಲು ಯತ್ನಿಸುತ್ತಿದ್ದವು.

ನೆಮ್ಮದಿಯಿಂದ ಉಸಿರ್ಗರೆದ ಹರಿ ಎದ್ದು, ಸಮುದ್ರ ತೀರದ ಮುಂಜಾವಿನ ವೈಭವದೊಡನೆ ರೂಪುಗೊಂಡಿದ್ದ ಮರಳ ದಿಣ್ಣೆಗಳ ಮೇಲಿನ ಹಾದಿಯನ್ನು ಹಿಡಿದ. ಅಕ್ಕಪಕ್ಕದಲ್ಲಿ ಹೂಗಳು, ಉಜ್ವಲ ವರ್ಣದ ಬಟ್ಟಲಿನಲ್ಲಿ ಅರಳಿದಂತೆ ಕಾಣುತ್ತಿದ್ದವು. ಹರಿ ತನ್ನ ಚಿಕ್ಕ ಜಮೀನನ್ನು ಹಾದು ಹೋದ. ಅದರಲ್ಲಿ ತನ್ನ ಸೋದರಿಯರು ಎಂದಿನ 'ಟಿಂಡಿ'ಯನ್ನು ಬೆಳೆದಿದ್ದನ್ನು ನೋಡಿದ. ಗಳುಗಳಿಂದ ಮಾಡಿದ ಚಪ್ಪರದಲ್ಲಿ ಅವು ದ್ರಾಕ್ಷಿಯ ಬಳ್ಳಿಗಳಂತೆ ತೂಗಾಡುತ್ತಿದ್ದವು. ಬಿಳಿಯ ಬಂಗಲೆ 'ಮೊಸ್ ರಿಪೋಸ್' ಅನ್ನು ದಾಟಿದ. ಮುಂಗಾರಿನಿಂದ ರಕ್ಷಣೆ ನೀಡುವ ಸಲುವಾಗಿ ಹಾಕಿದ್ದ ತೆಂಗಿನ ಗರಿಗಳ ಚಾಪೆಗಳನ್ನು ತೆಗೆದು ಹಾಕಿದ್ದನ್ನು ಅವನು ಗಮನಿಸಿದ. ಹಸಿರು ಬಣ್ಣದ ಹಿನ್ನೆಲೆಯಲ್ಲಿ ಆ ಬಂಗಲೆ ಥಳಥಳಿಸುತ್ತಿತ್ತು. ನಂತರ ಅವನು ಕೊರಕಲ ಬಳಿಗೆ ಬಂದ. ಅಲ್ಲಿ ಎಂದಿನಂತೆ ಕ್ರೌಂಚ ಪಕ್ಷಿಯು ಕಲ್ಲ ಮೇಲೆ ಕುಳಿತು ಮೀನು ಹಿಡಿಯುತ್ತಿತ್ತು. ಮಿನ್ಚುಳ್ಳಿಯು ನೀರು ಚಿಮ್ಮುವಂತೆ ಜಿಗಿಯುತ್ತಿತ್ತು.ಮಂಜಿನಂತೆ ಬಿಳಿಯದಾದ ಹೇರಾನ್ ಪಕ್ಷಿಯು, ಜೊಂಡಿನಿಂದ ಮೇಲ-ಕ್ಕೇಳುತ್ತಿತ್ತು. ಕೊರಕಲ ಮೇಲಿದ್ದ ದಿಮ್ಮಿಯನ್ನು ಅವನು ದಾಟಿದ. ಪ್ಲಮ್ ಮರದಲ್ಲಿ ಹೂಗಳು ಬಿಟ್ಟಿದ್ದನ್ನು ನೋಡಿದ. ಅದರ ನೆರಳಿನಲ್ಲಿ ತಮ್ಮ ಹಳೆಯ ಗುಡಿಸಿಲು ಎಂದಿನಂತೆ ಮಸುಕಾಗಿಯೂ, ಮಂಕಾಗಿಯೂ ಕಾಣುತ್ತಿತ್ತು. ಅದರ ಮಣ್ಣಿನ ಗೋಡೆಗಳು ಕುಸಿಯುತ್ತಿ-ದ್ದುವು. ಅದರ ಛಾವಣಿಯ ಮೇಲೆ ಹೊದಿಸಿದ್ದ ತೆಂಗಿನ ಗರಿಯ ಚಾಪೆಗಳು ಹರಿದು ಇಳಿಬಿದ್ದಿದ್ದವು.

ಇವೆಲ್ಲವನ್ನೂ ತಾನು ಬದಲಿಸಬೇಕು. ಗುಡಿಸಿಲನ್ನು ಮತ್ತೆ ಕಟ್ಟಬೇಕು. ತಾನೀಗ ಮನೆಗೆ ಬಂದಿರುವುದರಿಂದ ಈ ಕೆಲಸಕ್ಕೆ ಮೊದಲ ಗಮನ ಕೊಡಬೇಕು. ಅದನ್ನು ಪ್ರಕಾಶಮಾನವೂ, ಹರ್ಷದಾಯಕವೂ ಮತ್ತು ಉಲ್ಲಾಸಭರಿತವೂ ಆಗುವಂತೆ ಮಾಡಬೇಕು.

* * *

''ಲೀಲ, ಬೇಲ, ಕಮಲ'' ಹರಿ ಕೂಗಿದ.

ನಿಮಿಷ ಮಾತ್ರದಲ್ಲಿ ಲೀಲ ಬಾಗಿಲ ಬಳಿ ಇದ್ದಳು. ತನ್ನ ಹಳೆಯ ಕಡುಗೆಂಪಿನ ಸೀರೆಯುಟ್ಟಿದ್ದಳು. ಕಂದು ಬಣ್ಣದ ಮತ್ತು ಕೌತುಕದಿಂದ ಕೂಡಿದ್ದ ತನ್ನ ಮುಖವನ್ನು ಹೊರಚಾಚಿದಳು.ಹರಿಯನ್ನು ನೋಡಿ ಆನಂದಾಶ್ಚರ್ಯದಿಂದ ಮೇಲುಸಿರೆಳೆದುಕೊಂಡಳು. ಇಬ್ಬರೂ ಪರಸ್ಪರ ದಿಟ್ಟಿಸಿ ನೋಡಿದರು. ನಂತರ ಅವಳು ಕೂಗುತ್ತಾ ಹೊರ ಬಂದು, ''ಹರಿ, ಹರಿ, ನನಗೆ ಗೊತ್ತಿತ್ತು, ನೀನು ಬರುತ್ತೀಯೆಂದು. ನಾಳೆ ದೀಪಾವಳಿ. ನೀನು ಬರುತ್ತೀಯೆಂದು ನನಗೆ ಗೊತ್ತಿತ್ತು.''

''ಹೇಗೆ ಗೊತ್ತಿತ್ತು? ನಾನೇನು ನಿನಗೆ ಕಾಗದ ಬರೆದಿರಲಿಲ್ಲವಲ್ಲ.''

''ಓ, ನನಗೆ ಗೊತ್ತಿತ್ತು'' ಲೀಲ ಮುಗುಳ್ನಕ್ಕಳು, ''ಹರಿ, ನಿನಗಾಗಿ ನಾವು ಸಿಹಿ ತಿಂಡಿ

ಮಾಡಿದ್ದೇವೆ, ಬಾ.''

ಹರಿಗೆ ನೂರಾರು ಪ್ರಶ್ನೆಗಳನ್ನು ಕೇಳುವುದಿತ್ತು. ಎಲ್ಲವನ್ನೂ ಒಟ್ಟಿಗೆಯೇ- ತಮ್ಮ ತಾಯಿಯ ಬಗ್ಗೆ, ತಂದೆಯ ಬಗ್ಗೆ, ಬೇಲ ಮತ್ತು ಕಮಲರ ಬಗ್ಗೆ, ಹಳ್ಳಿಯ ಬಗ್ಗೆ, ಬಿಜುವಿನ ದೋಣಿಯ ಬಗ್ಗೆ, ಹೀಗೆ ಲೆಕ್ಕವಿಲ್ಲದಷ್ಟು. ಅವನು ಲೀಲಳ ಹಿಂದೆ ಮನೆಯೊಳಗೆ ಹೋದ. ಮನೆ ಹಳೆಯದೂ, ದುಸ್ಥಿತಿಯದೂ ಆಗಿರಬಹುದು, ಆದರೆ, ನೆರಳಿದ್ದು, ಎಷ್ಟು ತಂಪಾಗಿದೆ! ತಾನು ಅದಕ್ಕೆ ಆಭಾರಿಯಾಗಿರಬೇಕು.ಹರಿ ಮೌನವಾಗಿ ಗಾಳಿಯನ್ನು ಆಸ್ವಾದಿಸಲಾರಂಭಿಸಿದ. ಕಣ್ಣಿಗೆ ಗೋಚರವಾಗದ ಪಾರಿವಾಳಗಳ ಸದ್ದು ಮಾತ್ರ ಕೇಳುತ್ತಿತ್ತು. ಗಾಳಿಯ ಮೂಲಕ, ತೊಟ್ಟಿಕ್ಕುವ ಮೃದುವಾದ ನೀರ್ಗುಳ್ಳೆಗಳಂತೆ ಆ ಸದ್ದು ಬರುತ್ತಿತ್ತು.

ನಂತರ ಲೀಲ ಹಿತ್ತಾಳೆಯ ತಟ್ಟೆಯೊಂದನ್ನು ಹಿಡಿದು ಅವನತ್ತ ಬಂದಳು. ಅದರಲ್ಲಿ ಸಿಹಿತಿಂಡಿಗಳನ್ನು ಗೋಪುರದಂತೆ ಜೋಡಿಸಿಡಲಾಗಿತ್ತು. ಅಕ್ಕಿಹಿಟ್ಟು, ಕ್ರೀಮ್, ಸಕ್ಕರೆ, ಮೈದಾಹಿಟ್ಟು, ರವೆ ಮತ್ತು ತೆಂಗಿನಕಾಯಿ ತುರಿಯಿಂದ ಲೀಲ ಆ ತಿಂಡಿಗಳನ್ನು ತಯಾರಿಸಿದ್ದಳು.

''ಆದರೆ ನಾನು ಮೊದಲು ಮುಖ, ಕೈಕಾಲು ತೊಳೆಯಬೇಕು. ತುಂಬಾ ದೂಳಾಗಿದೆ'' ಎಂದು ಹೇಳಿ, ಹರಿ ಹಿತ್ತಲ ಕಡೆಗೆ ಹೋದ. ಅಲ್ಲಿ ದೊಡ್ಡ ಮಡಕೆಯೊಂದರಲ್ಲಿ ಬಾವಿಯಿಂದ ಸೇದಿದ್ದ ನೀರನ್ನು ತುಂಬಿಡಲಾಗಿತ್ತು. ನೀರು ಮಡಕೆಯ ಮೇಲಿನಿಂದ ತೊಟ್ಟುತೊಟ್ಟಾಗಿ ಇಳಿಯುತ್ತಿತ್ತು. ಹರಿ ತನ್ನ ಮುಖವನ್ನೂ, ಕೈಗಳನ್ನೂ ತೊಳೆದುಕೊಂಡ. ತಲೆಗೂ ಸ್ವಲ್ಪ ನೀರನ್ನು ಚಿಮುಕಿಸಿಕೊಂಡ. ಮುಂಬೈನಲ್ಲಿ ತಾನಿದ್ದ ಎಲ್ಲ ಒಂಬತ್ತು ತಿಂಗಳಲ್ಲೂ ಇಷ್ಟು ತಂಪಾದ ಮತ್ತು ಹಿತಕರವಾದ ನೀರಿನಲ್ಲಿ ತಾನು ಕೈಕಾಲು ಮುಖ ತೊಳೆದುಕೊಂಡಿರ-ಲಿಲ್ಲವೆಂದು ಅವನಿಗನಿಸಿತು.

ಅವನು ಹಿಂದಿರುಗಿದಾಗ, ಲೀಲ ಟವೆಲ್ ಹಿಡಿದು ಬಾಗಿಲಿನಲ್ಲಿ ನಿಂತಿದ್ದಳು. ಅವಳಿಂದ ಅದನ್ನು ತೆಗೆದುಕೊಂಡು ಚೆನ್ನಾಗಿ ಒರೆಸಿಕೊಂಡ.

''ಇಲ್ಲಿ, ನೀರು ಎಷ್ಟು ಚೆನ್ನಾಗಿದೆ!'' ಹರಿ ಹೇಳಿದ.

''ನಮ್ಮ ಬಾವಿ ನೀರು ಸಿಹಿಯಾಗೇ ಇರುತ್ತೆ. ನಿನಗೇ ಗೊತ್ತಲ್ಲ'' ಲೀಲ ನಗುತ್ತಾ ಹೇಳಿದಳು.

''ಎಷ್ಟು ಸಿಹಿಯಾಗಿದೆ! ನನಗೆ ಮರತೇ ಹೋಗಿತ್ತು.'' ನೀರು ಹಾರುವಂತೆ, ಹರಿ ಜೋರಾಗಿ ತಲೆ ಕೊಡವಿದ. ''ನಾನಂತೂ ತುಂಬ ಮರೆಗುಳಿಯಾಗಿದ್ದೇನೆ, ಲೀಲ. ಅಮ್ಮ ಎಲ್ಲಿ?'' ಕೆಟ್ಟ ಸುದ್ದಿಯ ಸೂಚನೆ ಅವಳ ಮುಖದಲ್ಲಿ ಕಾಣಬಹುದೆಂದು ಭೀತಿಯಿಂದ, ಅವಳ ಮುಖವನ್ನು ನೋಡುವುದಕ್ಕೇ ಅವನು ಹಿಂಜರಿದ. ಆದರೆ ಲೀಲ ಅವನ ಮುಖವನ್ನು ನೇರವಾಗಿ ನೋಡುತ್ತಾ ಹೇಳಿದಳು.

''ಅಮ್ಮ ಅಲಿಬಾಗ್‌ನಲ್ಲಿ ಆಸ್ಪತ್ರೆಯಲ್ಲಿದ್ದಾಳೆ. ಡಿಸಿಲ್ವಾ ಅವರು, ತಮ್ಮ ಕಾರಿನಲ್ಲಿ ಅವಳನ್ನು ಅಲ್ಲಿಗೆ ಕರೆದೊಯ್ದರು. ನನ್ನ ಬಳಿ ಬಸ್‌ಗೆ ಹಣವಿದ್ದಾಗ, ನಾನು ಆಗಾಗ್ಗೆ ಹೋಗಿ ಅವಳನ್ನು ನೋಡಿಕೊಂಡು ಬರುತ್ತೇನೆ. ಈಗ ಅವಳು ತುಂಬಾ ಸುಧಾರಿಸಿದ್ದಾಳೆ.''

''ಹೇಗೆ?''

''ಒಳ್ಳೆಯ ಆಹಾರ ಮತ್ತು ತಕ್ಕ ಔಷಧಗಳಿಂದಲೇ ಇರಬೇಕು. ಒಳ್ಳೆಯ ಆಹಾರವಿಲ್ಲದ

ಕಾರಣ ಅವಳು ರಕ್ತಹೀನತೆಯಿಂದ ನರಳುತ್ತಿದ್ದಳೆಂದು ವೈದ್ಯರು ಹೇಳಿದರು.''

ಹರಿಗೆ ಈ ಮಾತನ್ನು ನಂಬುವುದೇ ಕಷ್ಟವಾಯಿತು. ತಾವು ಸಾಕಷ್ಟು ಆಹಾರ ತಿನ್ನುತ್ತಿರಲಿಲ್ಲವೆಂಬುದು ಹರಿಗೆ ಗೊತ್ತಿತ್ತು. ಆದರೆ ಅದರಿಂದಾಗಿ ಕಾಯಿಲೆ ಬರುತ್ತದೆಂಬುದು ಅವನಿಗೆ ಒಂದು ಹೊಸ ವಿಷಯವಾಗಿತ್ತು. ಅವರೆಲ್ಲಾ ಇನ್ನು ಮುಂದೆ ಉತ್ತಮವಾದ ಆಹಾರ ಸೇವಿಸುವಂತೆ ನೋಡಿಕೊಳ್ಳುವುದು ತನ್ನ ಕರ್ತವ್ಯ ಎಂದು ಅವನಿಗೆ ಅನಿಸಿತು.

''ನನ್ನಲ್ಲಿ ಅನೇಕ ಯೋಜನೆಗಳಿವೆ, ಲೀಲ'' ಅವನು ಬಡಬಡಿಸಿದ, ''ಹೇಳುತ್ತೇನೆ..''

''ಇರಲಿ, ಮೊದಲು ಸಿಹಿಯನ್ನು ತಿನ್ನು, ದೀಪಾವಳಿಗಾಗಿ ನಾವು ಇದನ್ನು ಮಾಡಿದ್ದೇವೆ. ಆದರೆ, ಇಂದಿನಿಂದಲೇ ಹಬ್ಬವನ್ನು ಆಚರಿಸೋಣ'' ಎಂದು ನಗುತ್ತಾ ಹೇಳಿ, ಸಿಹಿತಿಂಡಿಗಳ ತಟ್ಟೆಯನ್ನು ತರಲು ಒಳಗೆ ಹೋದಳು. ತನಗೆ ತುಂಬ ಇಷ್ಟವಾದ, ಹೂರಣವನ್ನು ತುಂಬಿದ ಕರಿಗಡುಬನ್ನು ಎತ್ತಿಕೊಂಡು, ತುಂಬ ಆಸೆಯಿಂದ ತಿನ್ನಲಾರಂಭಿಸಿದ. ಲೀಲ ಯಾವಾಗಲೂ ಮಾಡುವಂತೆ ಅದು ಗರಿಗರಿಯಾಗಿ, ರುಚಿಕರವಾಗಿತ್ತು. ಅವನು ಅದನ್ನು ಇನ್ನೂ ಬಾಯಿಯಲ್ಲಿ ತುಂಬಿಕೊಂಡಿದ್ದಾಗಲೇ ಬೇಲ ಮತ್ತು ಕಮಲ ಬಂದರು.

ಮುಂದೇನು ಮಾಡಬೇಕೆಂಬುದು ಅವರಿಗೆ ಗೊತ್ತಾಗಲಿಲ್ಲ. ಅಪ್ಪಿಕೊಳ್ಳಬೇಕೆ, ಮಾತನಾಡಬೇಕೆ, ಇಲ್ಲವೆ ತಿನ್ನಬೇಕೆ? ಅವರು ಮೂರನ್ನೂ ಒಟ್ಟಿಗೆ ಮಾಡಿ ಗಲಿಬಿಲಿಯುಂಟು ಮಾಡಿದರು. ಹರಿ, ಅವರಿಗಾಗಿ ತಂದಿದ್ದ ಉಡುಗೊರೆಗಳನ್ನು ತೆಗೆದ. ಮುಂಬೈನಲ್ಲಿ ತನ್ನ ಗಡಿಯಾರ ರಿಪೇರಿ ಹಣದಿಂದ ಅದನ್ನು ಕೊಳ್ಳಲು ಪಾನ್‌ವಾಲಾ ಅವನಿಗೆ ಸಹಾಯ ಮಾಡಿದ್ದ. ತಂಗಿಯರಿಗೆ ಬಳೆಗಳು-ಚಿನ್ನ ಮತ್ತು ಬೆಳ್ಳಿಯ ಮೆರಗಿನಿಂದ ಫಳಫಳ ಹೊಳೆಯುತ್ತಿದ್ದ ಲೋಹದ ಬಳೆಗಳು -ಮತ್ತು ಲೀಲಳಿಗಾಗಿ ಒಂದು ಸೀರೆ. ಅದು ಗ್ರಾಮದಲ್ಲಿ ಕೊಳ್ಳಬಹುದಾದ ಕೈಮಗ್ಗದ ಒರಟು ಸೀರೆಯಲ್ಲ, ಸೂಕ್ಷ್ಮವಾದ ರೇಷ್ಮೆ ಬಟ್ಟೆಯಿಂದ ತಯಾರಾದ ಕಾರ್ಖಾನೆಯ ಸೀರೆಯಾಗಿತ್ತು. ಹೊಸದಾಗಿ ಅರಳಿದ ಬೆಳಗಿನ ಹೂಗಳಂತೆ, ಕಡುಗೆಂಪು ಮತ್ತು ಬಿಳಿಯ ಪಟ್ಟೆಗಳನ್ನು ಅದು ಹೊಂದಿತ್ತು. ಸೀರೆಯನ್ನು ಸರಿಯಾಗಿ ನೋಡಲೆಂದು ಅವನು ಮಡಿಕೆಗಳನ್ನು ಬಿಡಿಸಿದಾಗ ಅವರು ನಿಬ್ಬೆರಗಾದರು. ಅಷ್ಟೊಂದು ಸುಂದರವಾದ, ದುಬಾರಿಯಾದ ಮತ್ತು ನೀಟಾದ ಸೀರೆ, ಹಿಂದೆ ಯಾವಾಗಲೂ ಅವರ ಮನೆಗೆ ಬಂದಿರಲಿಲ್ಲ. ಲೀಲ ಜೋರಾಗಿ ಉದ್ಗಾರ ತೆಗೆದಳು. ಚಿಕ್ಕ ಹುಡುಗಿಯರಿಬ್ಬರೂ ಸಂತೋಷದಿಂದ ಚೀರಿ, ತಮ್ಮ ಕೈಗಳನ್ನು ಬಾಯಿಗೆ ಒತ್ತಿಕೊಂಡರು.

''ಹರಿಯಣ್ಣಾ, ನಿನಗೆ ಇಷ್ಟೊಂದು ದುಡ್ಡು ಎಲ್ಲಿಂದ ಬಂತು? ಇಷ್ಟು ಹಣವನ್ನು ನೀನು ಹೇಗೆ ತಾನೆ ಖರ್ಚು ಮಾಡಿದೆ?''

''ನಾನು ಮನೆಗೂ ಸಹ ಹಣ ತಂದಿದ್ದೇನೆ. ಮುಂಬೈನಲ್ಲಿ ಗಳಿಸಿದ ಎಲ್ಲ ಹಣವನ್ನೂ ನಾನು ಉಳಿಸಿದ್ದೇನೆ. ಅಲ್ಲಿ ನಾನು ಯಾವುದಕ್ಕೂ ಹಣ ಖರ್ಚುಮಾಡಲಿಲ್ಲ. ನಾನು ಅಲ್ಲಿ ಸಿನೆಮಾಕ್ಕೆ ಹೋಗಲಿಲ್ಲ, ಏಕೆ, ಒಂದು ಸಿಗರೇಟ್ ಸಹ ಕೊಳ್ಳಲಿಲ್ಲ. ನನಗೆ ಎರಡು ಕೆಲಸಗಳಿದ್ದವು'' ಹರಿ ಜಂಬದಿಂದಲೇ ಹೇಳಿದ. ಅವನು ಇನ್ನೇನೂ ಮಾಡುವಂತಿರಲಿಲ್ಲ. ತನ್ನಂತೆಯೇ ಅವರೂ ಸಹ ಹರ್ಷಪಡುತ್ತಿದ್ದಾರೆಂದು ಅವನಿಗೆ ಗೊತ್ತಿತ್ತು. ''ನಾನು ಒಂದು ಖಾನಾವಳಿಯಲ್ಲಿ ಕೆಲಸಮಾಡುತ್ತಿದ್ದೆ. ಅದರ ಮಾಲೀಕ ನನಗೆ ಉಚಿತವಾಗಿ ಊಟವನ್ನೂ, ವಸತಿಯನ್ನೂ ಕೊಟ್ಟಿದ್ದ. ಸಂಬಳವನ್ನೂ ನೀಡುತ್ತಿದ್ದ. ನಾನು ಅಲ್ಲೇ ಪಕ್ಕದಲ್ಲಿದ್ದ

ಗಡಿಯಾರದ ಅಂಗಡಿಯೊಂದರಲ್ಲೂ ಸಹ ಕೆಲಸ ಮಾಡುತ್ತಿದ್ದೆ. ನಾನು ಸರಿಪಡಿಸಿದ ಗಡಿಯಾರಗಳಿಗಾಗಿ ನನಗೆ ಮಜೂರಿ ಸಿಗುತ್ತಿತ್ತು. ಗಡಿಯಾರಗಳ ರಿಪೇರಿ ವಿದ್ಯೆಯನ್ನು ನಾನೀಗ ಕಲಿತಿದ್ದೇನೆ, ಗೊತ್ತಾ?''

''ಏನು, ಗಡಿಯಾರಗಳನ್ನು ರಿಪೇರಿ ಮಾಡುತ್ತೀಯಾ?'' ಬೇಲ ಮತ್ತು ಕಮಲ ಅಚ್ಚರಿಯಿಂದ ಉದ್ಗಾರ ತೆಗೆದರು.

''ಏನು ಗಡಿಯಾರದ ರಿಪೇರಿಯಾ?'' ಲೀಲ ನಿರುತ್ಸಾಹದಿಂದ ಕೇಳಿದಳು. ಅವಳ ಮುಖ ಕಳೆಗುಂದಿತು. ದೋಣಿಯನ್ನು ಯಾವಾಗ ತೆಗೆದುಕೊಂಡು ಹೋಗಬೇಕು ಮತ್ತು ಮೀನುಗಳೊಡನೆ ಯಾವಾಗ ಹಿಂದಿರುಗಬೇಕು ಎಂದು ತಿಳಿಯಲು ಥುಲ್‌ನಲ್ಲಿ ಯಾರೂ ಗಡಿಯಾರವನ್ನು ನೋಡುತ್ತಿರಲಿಲ್ಲವಾದ್ದರಿಂದ, ಅವಳಿಗೆ ಇದೊಂದು ನಿರುಪಯುಕ್ತ ವಿದ್ಯೆ ಎನಿಸಿತ್ತು. ಸಮುದ್ರದ ಅಲೆಗಳು ಮತ್ತು ಸೂರ್ಯ ಹಳ್ಳಿಗರಿಗೆ ಸಮಯವನ್ನು ತಿಳಿಸುತ್ತಿದ್ದವು.

ಅವಳಿಗೆ ನಿರಾಸೆಯಾಯಿತೆಂಬುದು ಹರಿಗೂ ಗೊತ್ತಾಯಿತು. ''ಲೀಲ, ಇಲ್ಲಿ ಯಾವ ಗಡಿಯಾರವೂ ಇಲ್ಲ ಎಂಬುದು ನನಗೆ ಗೊತ್ತು. ಆದರೆ ಕಾರ್ಖಾನೆ ಏಳುವವರೆಗೆ ಮತ್ತು ವಸತಿಗಳು ನಿರ್ಮಾಣವಾಗುವವರೆಗೆ ಕಾಯೋಣ. ಆಗ ಇಲ್ಲಿ ಸುತ್ತಮುತ್ತ ಗಡಿಯಾರವುಳ್ಳ ಅನೇಕರಿರುತ್ತಾರೆ. ಆಗ ಗಡಿಯಾರಗಳಿಗೆ ಎಣ್ಣೆ ಹಾಕಿ ರಿಪೇರಿ ಮಾಡುವವನು ಥುಲ್‌ನಲ್ಲಿ ನಾನೊಬ್ಬನೇ ಆಗಿರುತ್ತೇನೆ. ಆದ್ದರಿಂದ ಇಂತಹ ರಿಪೇರಿಗಾಗಿ ಅವರು ಮುಂಬೈಗೆ ಹೋಗುವ ಅಗತ್ಯವಿರುವುದಿಲ್ಲ. ಹೀಗೆ, ಇಲ್ಲೂ ಬದಲಾವಣೆಗಳಾಗುತ್ತವೆ, ಲೀಲ.''

''ನಿಜವಾಗಿ?'' ಅವಳು ಸಂಶಯದಿಂದಲೇ ಕೇಳಿದಳು, ''ಯಾವಾಗ,? ಅದಕ್ಕೆ ಎಷ್ಟು ಸಮಯ ಹಿಡಿಯುತ್ತದೆ? ಅಲ್ಲಿಯವರೆಗೆ ನಾವೇನು ಮಾಡಬೇಕು?''

''ಆದರೆ, ನಾನು ನನ್ನೊಡನೆ ಹಣವನ್ನೂ ತಂದಿದ್ದೇನೆ. ಈ ವಿಷಯವನ್ನು ಕುರಿತು, ನಿನ್ನೊಡನೆ ಮತ್ತು ಅಮ್ಮನನ್ನು ನೋಡಲು ಹೋದಾಗ ಅವಳೊಡನೆ ಚರ್ಚಿಸುತ್ತೇನೆ.'' ಹರಿ ತನ್ನ ತಂದೆಯ ವಿಷಯವನ್ನು ಪ್ರಸ್ತಾಪಿಸಲಿಲ್ಲ. ಅವನು ನಿರುಪಯೋಗಿ ಎಂಬುದು ಅವನಿಗೆ ಗೊತ್ತಿತ್ತು. ''ಹಣವನ್ನು ಯಾವುದಾದರೂ ಉಪಯುಕ್ತ ಉದ್ದಿಮೆಗಾಗಿ ಬಳಸಬಹುದು. ನಾವು ಸ್ವಲ್ಪ ಕೋಳಿಗಳನ್ನು ಕೊಂಡು, ನಮ್ಮ ಜಮೀನಿನಲ್ಲಿ ಕೋಳಿ ಸಾಕಣೆ ಕೇಂದ್ರವನ್ನು ಪ್ರಾರಂಭಿಸಬಹುದು. ಪೇಟೆಯಲ್ಲಿ ಮಾರುವಷ್ಟು ಕಾಯಿಪಲ್ಲೆಯನ್ನು ನಮ್ಮ ಪುಟ್ಟ ಜಮೀನಿನಲ್ಲಿ ಬೆಳೆಯುವುದು ಸಾಧ್ಯವಿಲ್ಲ. ಆದರೆ ಕೋಳಿ ಸಾಕಣೆ ಕೇಂದ್ರವನ್ನು ಸ್ಥಾಪಿಸುವುದಕ್ಕೆ ಅದು ಸಾಕಷ್ಟು ದೊಡ್ಡದಾಗೇ ಇದೆ. ಹಳ್ಳಿಯಲ್ಲಿ ಮೊಟ್ಟೆಗಳ ಮಾರಾಟ-ದೊಡನೆ ನಮ್ಮ ಈ ಉದ್ಯಮವನ್ನು ಪ್ರಾರಂಭಿಸಬಹುದು. ಕಾರ್ಖಾನೆಯು ಪ್ರಾರಂಭವಾಗಿ, ಕೆಲಸಗಾರರೆಲ್ಲಾ ಇಲ್ಲಿಗೆ ವಾಸಿಸಲು ಬಂದಾಗ ನಾವು ಅವರಿಗೆ ಕೋಳಿಗಳನ್ನೂ ಮಾರ-ಬಹುದು. ಕೋಳಿ ಸಾಕಣೆ ಕೇಂದ್ರದಿಂದ ನಾವು ನೆಮ್ಮದಿಯಾಗಿ ಜೀವನ ನಿರ್ವಹಿಸಬಹುದು.'' ಬೇಲ ಮತ್ತು ಕಮಲ ಹರ್ಷದಿಂದ ಕೂಗಿದರು. ಇದೊಂದು ಸೊಗಸಾದ ಯೋಜನೆಯೆಂದು ಅವರು ಭಾವಿಸಿದರು. ಅವರು ಸಿಹಿತಿಂಡಿಗಳ ತಟ್ಟೆಯನ್ನು ಮತ್ತೊಮ್ಮೆ ಸುತ್ತ ರವಾನಿಸಿದರು.

''ನಾನು ನನ್ನ ಗಡಿಯಾರದ ಅಂಗಡಿಯನ್ನು ತೆರೆದಾಗ, ನೀವಿಬ್ಬರೂ ಕೋಳಿ ಸಾಕಣೆ ಕೇಂದ್ರವನ್ನು ನೋಡಿಕೊಳ್ಳಬಹುದು'' ಹರಿ ಅವರಿಗೆ ತಿಳಿಸಿದ, ''ನಾನು ಕೋಳಿ ಸಾಕಣೆ ಕೇಂದ್ರವನ್ನು ಪ್ರಾರಂಭಿಸಿ, ಅದನ್ನು ನಿಮಗೆ ವಹಿಸಿಕೊಡುತ್ತೇನೆ'' ಅವರತ್ತ ನಗುತ್ತಾ ಹೇಳಿದ.

ಅವರಿಗೆ ಈ ಯೋಜನೆ ಮೆಚ್ಚುಗೆಯಾಗಿತ್ತೆಂಬುದು ಅವನಿಗೆ ತಿಳಿಯಿತು.

''ಅದು ಧುಲ್‌ನಲ್ಲೇ ಪ್ರಪ್ರಥಮ ಕೋಳಿ ಸಾಕಣೆ ಕೇಂದ್ರ'' ಕಮಲ ಹೇಳಿದಳು, ''ಖೆಮ್‌ನಲ್ಲಿ ಒಂದಿದೆ ಮತ್ತು ಅಲಿಬಾಗ್‌ನಲ್ಲಿ ಕೆಲವಿವೆ. ಆದರೆ ಧುಲ್‌ನಲ್ಲಿ ಇದು ಮೊದಲನೆಯದು. ಅದು ನಮ್ಮದೇ ಆಗಿರುತ್ತದೆ.''

''ಹಿಂದೆ ಇಲ್ಲೂ ಒಂದಿತ್ತು'' ಲೀಲ ಅವರ ನೆನಪಿಗೆ ತಂದಳು, ''ವೃದ್ಧ ಸಾಬು ಒಂದನ್ನಿಟ್ಟುಕೊಂಡಿದ್ದ. ಅವನ ತೋಟದಲ್ಲಿ ಈಗಲೂ ಸಹ ಮುರಿದ ಬೇಲಿಗಳನ್ನೂ, ತಂತಿಯ ಬಲೆಗಳನ್ನೂ ನೋಡಬಹುದು. ಅದು ವಿಫಲಗೊಂಡಿತು.''

''ಅದಕ್ಕೆ ಕಾರಣವೆಂದರೆ ಧುಲ್‌ನಲ್ಲಿ ಅವನ ಮೊಟ್ಟೆಗಳನ್ನೂ, ಕೋಳಿಗಳನ್ನೂ ಕೊಳ್ಳುವವರು ಯಾರೂ ಇರಲಿಲ್ಲ, ಲೀಲ'' ಹರಿ ವಿವರಿಸಿದ, ''ಅಲ್ಲದೆ ಮಾರಾಟಕ್ಕಾಗಿ ಅವನ್ನು ಮುಂಬೈಗೆ ಒಯ್ಯಲು ಅವನಲ್ಲಿ ವ್ಯಾನ್ ಇರಲಿಲ್ಲ. ಆದರೆ ಈಗ ಧುಲ್‌ಗೆ ಜನರೇ ಬರುತ್ತಾರೆ- ಸಾವಿರಾರು ಜನ. ನಮಗೆ ಪೂರೈಸಲಾಗದಷ್ಟು ಕೊಳ್ಳುವವರು ಇರುತ್ತಾರೆ, ನೋಡುತ್ತಿರು ಲೀಲ, ಇದು ಖಂಡಿತ ಏಳ್ಗೆಯಾಗುತ್ತದೆ. ಎಂದೂ ವಿಫಲಗೊಳ್ಳುವುದಿಲ್ಲ. ಅಲ್ಲದೆ ಅಮ್ಮನಿಗೂ ಸಹ ತಿನ್ನಲು ಸಾಕಷ್ಟು ಮೊಟ್ಟೆಗಳು ಮತ್ತು ಕೋಳಿಗಳು ಇರುತ್ತವೆ.'' ಲೀಲಳು ಹರ್ಷಚಿತ್ತಳಾಗುವಂತೆ ಅವಳನ್ನು ಪುಸಲಾಯಿಸಲು ಅವನು ಯತ್ನಿಸಿದ.

ಈ ಮಾತಿನಿಂದ ಅವಳು ಕೂಡಲೇ ಮುಗುಳ್ನಕ್ಕಳು. ''ಅಮ್ಮನಿಗೆ ಅವು ತುಂಬ ಉತ್ತಮ ಆಹಾರ ಅವಳೂ ಸಹ ಸಹಾಯ ಮಾಡಬಹುದು.''

''ನೀನು ನನಗೆ ಎಲ್ಲವನ್ನೂ ತಿಳಿಸು. ಎಲ್ಲ ವಿಷಯವನ್ನೂ ಹೇಳು. ನೀನು ಏನೂ ಬರೆಯಲೇ ಇಲ್ಲ.''

''ನೀನೆಲ್ಲಿದ್ದೀ ಎಂಬುದೇ ನಮಗೆ ಗೊತ್ತಿರಲಿಲ್ಲ. ಯಾರಾದರೂ ಮುಂಬೈಗೆ ಹೊರಟರೆ ಅವರೊಡನೆ ಸಂದೇಶ ಕಳಿಸುತ್ತಿದ್ದೆವು. ಆದರೆ ಯಾರಿಗೂ ನಿನ್ನನ್ನು ಪತ್ತೆ ಹಚ್ಚುವುದಾಗ-ಲಿಲ್ಲ.''

ಹರಿ ಒಪ್ಪಿಗೆಯಿಂದ ತಲೆಯಾಡಿಸಿದ. ''ನಾನು ಸ್ವಲ್ಪ ಕಾಲ ಸ್ವಂತವಾಗಿ ನನ್ನ ಕಾಲ ಮೇಲೆ ನಿಲ್ಲಲು ಇಚ್ಛಿಸಿದೆ, ಅಪ್ಪ...'' ಅವನಿಗೆ ಹೇಳಲಿಷ್ಟವಿಲ್ಲದಿದ್ದರೂ ಈ ಪದ ಅವನ ಬಾಯಿಂದ ಕೊನೆಗೂ ಹೊರಟಿತು, ''ಅಪ್ಪ ಎಲ್ಲಿ?''

ತನ್ನ ಸೋದರಿಯರ ಗಟ್ಟಿಯಾದ ಮಾತು ಮತ್ತು ಹರ್ಷೋದ್ಗಾರಗಳಿಂದ, ತನ್ನ ತಂದೆ ಒಳಗಿದ್ದು, ಎಂದಿನಂತೆ ಕುಡಿದು ಹಗಲಿನ ನಿದ್ರೆ ಮಾಡುತ್ತಿಲ್ಲವೆಂದು ಅವನಿಗೆ ಖಚಿತವಾಗಿತ್ತು.

''ಅವನು ಅಲಿಬಾಗ್‌ನಲ್ಲಿದ್ದಾನೆ'' ಲೀಲ ನಿಧಾನವಾಗಿ ಹೇಳಿದಳು, ''ಅವನು ಅಮ್ಮನ ಜೊತೆ ಹೋದ. ಡಿಸಿಲ್ವಾ ಅಮ್ಮನನ್ನು ಅಲ್ಲಿಗೆ ಕರೆದುಕೊಂಡು ಹೋದಾಗ, ಅಪ್ಪ ಆವೇಶಗೊಂಡ. ಅವನಿಗೆ ಕಡುಗೋಪ ಬಂದಿತ್ತು. ಅವನು ಕೂಗುತ್ತಾ, ಅರಚುತ್ತಾ ನೀರಿನ ಮಡಕೆಗಳನ್ನು ಒಡೆದು ಹಾಕಿದ. ಅವನು ಕುಡಿದಿದ್ದ. ಆದರೆ ಈಗ ಅವನು ಕುಡಿಯುವುದು ಬಿಟ್ಟು, ಅಮ್ಮನನ್ನು ಆಸ್ಪತ್ರೆಯವರು ಸರಿಯಾಗಿ ನೋಡಿಕೊಳ್ಳುತ್ತಾರೋ, ಇಲ್ಲವೋ ಎಂಬ ಬಗ್ಗೆ ನಿಗಾ ಇಡಲು ಅವಳನ್ನು ಹಿಂಬಾಲಿಸಿ ಅಲಿಬಾಗ್‌ಗೆ ಹೋದ. ಅಂದಿನಿಂದ ಅವನು ಅಲ್ಲೇ ಇದ್ದಾನೆ. ಇಲ್ಲಿಗೆ ಒಂದು ಸಲವೂ ಬಂದೇ ಇಲ್ಲ. ನಾನು ಅಮ್ಮನನ್ನು ನೋಡಲು ಹೋದಾಗಲೆಲ್ಲಾ, ಅವಳ ಕೊಠಡಿಯ ಹೊರಗೆ ವರಾಂಡದಲ್ಲಿ ಕುಳಿತಿರುತ್ತಾನೆ. ಇಲ್ಲವೆ,

ಆಸ್ಪತ್ರೆಯ ಹೊರಗೆ ಕಾಂಪೌಂಡ್‌ನಲ್ಲಿರುತ್ತಾನೆ. ಅವಳಿಗೆ ತನ್ನ ಅಗತ್ಯ ಬೇಕಾಗಬಹುದೆಂದು, ಅವಳು ತನ್ನನ್ನು ಕರೆಯಲು ಸಾಧ್ಯವಾಗುವಂತೆ ಸಮೀಪದಲ್ಲೇ ಇರುತ್ತಾನೆ.''

''ಅಲ್ಲೂ ಅವನು ಕುಡಿಯುತ್ತಾನಾ?''

ಲೀಲ, ಇಲ್ಲವೆನ್ನುವಂತೆ ತಲೆಯಾಡಿಸಿದಳು. ''ಇರಲಾರದು. ಅವನು ಕುಡಿಯುವುದನ್ನು ಬಿಟ್ಟಿರುವಂತೆ ತೋರುತ್ತದೆ. ಅವನಲ್ಲಿ ದುಡ್ಡಿಲ್ಲ. ಡಿಸಿಲ್ವಾ ದುಡ್ಡು ಕೊಟ್ಟರು.ನಾನೂ ಕೊಡುತ್ತೇನೆ, ಆದರೆ ಊಟಕ್ಕೆ ಸಾಕಾಗುವಷ್ಟೇ ವಿನಹ, ಹೆಂಡಕ್ಕೆ ಆಗುವಷ್ಟಲ್ಲ. ಅವನೂ ಹೆಚ್ಚು ಹಣ ಕೇಳುವುದಿಲ್ಲ. ಅವನು ಇನ್ನು ಮುಂದೆ ಕುಡಿಯುವುದಿಲ್ಲವೆಂದು ತಿಳಿದಿದ್ದೇನೆ.''

''ಆ ಖಾನೇಕರ್ ಜನ, ಪುನಃ ಬಂದಿದ್ದರೆ?''

''ಇಲ್ಲ, ಅವರು ನಮ್ಮ ಪಾಡಿಗೆ ನಮ್ಮನ್ನು ಬಿಟ್ಟಿದ್ದಾರೆ,'' ಲೀಲ ನೆಮ್ಮದಿಯಿಂದ ಉಸಿರ್ಗರೆದಳು, ''ಪಿಂಟೊವಿನ ಪ್ರಕರಣದ ನಂತರ ಅವರಿಗೂ ಕೆಟ್ಟದೆನಿಸಿರಬಹುದು.''

ಅವರೆಲ್ಲಾ ಮೌನವಾಗಿ ಕುಳಿತು ಪಿಂಟೊ ಬಗ್ಗೆ, ತಮ್ಮ ತಂದೆಯ ಬಗ್ಗೆ, ತಮ್ಮ ಜೀವನದಲ್ಲಿ ಆಗುತ್ತಿರುವ ಈ ಹೊಸ ಬದಲಾವಣೆಗಳ ಬಗ್ಗೆ ಆಲೋಚಿಸುತ್ತಿದ್ದರು. ನಂತರ ಲೀಲ ಎದ್ದು, ''ಹರಿ, ನಾವೆಲ್ಲಾ ಕಡಲ ದಂಡೆಗೆ ಹೋಗೋಣ. ನಿನ್ನ ಆಗಮನದ ಸಂತೋಷಕ್ಕೆ, ಅಡುಗೆಗಾಗಿ ಮೀನು ತರೋಣ. ಬನ್ನಿ, ನಾವೆಲ್ಲಾ ಹೋಗೋಣ. ದಾರಿಯಲ್ಲಿ ಹೋಗುತ್ತಿರುವಾಗ ಎಲ್ಲವನ್ನೂ ತಿಳಿಸುವಿಯಂತೆ.''

ಆದರೆ ಅವರು ಕಡಲ ದಂಡೆಗೆ ಹೋದಾಗ, ಮುಳುಗುತ್ತಿರುವ ಸೂರ್ಯನ ಬೆಳಕಿನಿಂದ ಇಡೀ ಆಕಾಶವೇ ಹೊಳೆಯುತ್ತಿದ್ದು, ಆದರ ಪ್ರತಿಬಿಂಬವು ಕಡುಗೆಂಪು, ಗುಲಾಬಿ ಮತ್ತು ಕಡುನೀಲಿ ಬಣ್ಣಗಳಲ್ಲಿ ಮರಳ ದಂಡೆಯ ಮೇಲೆ ಬಿದ್ದಿರುವುದನ್ನು ಕಂಡು ತುಂಬ ಹರ್ಷಗೊಂಡಿದ್ದ ಹರಿಗೆ ಮಾತನಾಡಲಾಗಲಿಲ್ಲ. ತೇವಗೊಂಡಿದ್ದ ಮರಳ ಮೇಲೆ ಅವನು ಓಡುತ್ತಾ, ತನ್ನ ಬರಿಗಾಲ ಕೆಳಗೆ ಅದರ ಸ್ಪರ್ಶವನ್ನು ಆನಂದದಿಂದ ಅನುಭವಿಸುತ್ತಾ ಇದ್ದ. ಬೇಲ ಮತ್ತು ಕಮಲ, ಅವನನ್ನು ಅಟ್ಟಿಸಿಕೊಂಡು ಓಡಿದರು. ಲೀಲ ನಗುತ್ತಾ ನೋಡುತ್ತಿ-ದ್ದಳು. ಹರಿ, ತನ್ನ ತಲೆಯನ್ನು ಹಿಂದಕ್ಕೆ ತಳ್ಳಿ ಜೋರಾಗಿ ಹೂಂಕರಿಸಿದಾಗ, ಸಮುದ್ರದಲ್ಲಿನ ಗಲ್ ಪಕ್ಷಿಗಳು ಮಿಯ್‌ಗುಡುತ್ತಾ ಆಕಾಶದತ್ತ ಹಾರಿದವು. ತಾನೊಬ್ಬ ಹೊಸ ಮನುಷ್ಯನೆಂಬ ಭಾವನೆ ಅವನಿಗುಂಟಾಯಿತು. ಬಲವಾಗಿ ಮುಚ್ಚಳ ಹಾಕಿದ್ದ ಪೆಟ್ಟಿಗೆಯಿಂದ ಹೊರಬಂದು, ಮೊದಲ ಸಲ ಬೆಳಕನ್ನು ಕಂಡು, ಸ್ವಚ್ಛವಾದ ಗಾಳಿಯನ್ನು ಸೇವಿಸುವ ವ್ಯಕ್ತಿಯಂತಾಗಿದ್ದ. ಅವನಿಗೆ ಹೊಸ ಜನ್ಮ ಬಂದಂತಾಗಿತ್ತು, ಗೂಡಿನಿಂದ ಹೊರಬಂದ ಚಿಟ್ಟೆಯಂತೆ. ಬೇಲ ಮತ್ತು ಕಮಲ ಅವನ ಒಂದೊಂದು ಕೈ ಹಿಡಿದು ನಡೆಯುತ್ತಿದ್ದರು.

ಅವರು ಸಮುದ್ರದ ದಂಡೆಯಲ್ಲಿ ನಗು ನಗುತ್ತಾ ನಡೆಯುತ್ತಾ, ಹಳ್ಳಿಯ ಹೆಂಗಸರನ್ನೂ, ಮಟ್ಟಸವಾದ ಮಣ್ಣಿನ ಮೇಲೆ ಹರಡಿದ್ದ ಹಾಗೂ ಬೊಂಬಿನ ಚಪ್ಪರಕ್ಕೆ ತೂಗುಹಾಕಿದ್ದ ಹಾವು ಮೀನುಗಳನ್ನು ಹಾರಿಸಿಕೊಂಡು ಹೋಗಲು ಕೆಳಮುಟ್ಟದಲ್ಲಿ ಹಾರುತ್ತಿದ್ದ ಗಲ್‌ಪಕ್ಷಿಗಳನ್ನೂ ನೋಡುತ್ತಿದ್ದರು. 'ಮುಂಬೈ ಬಾತು' ಎಂಬ ಹೆಸರಿನ ಇಂತಹ ಒಂದು ಮೀನನ್ನು ಒಂದು ಗಲ್ ತನ್ನ ಕೊಕ್ಕಿನಲ್ಲಿ ಕಚ್ಚಿಕೊಂಡು ಮೇಲೆ ಹಾರಿದಾಗ, ಇತರ ಗಲ್‌ಗಳು ಅದರ ಮೇಲೆರಗಿ ಅದನ್ನು ಕೆಳಗೆ ಬೀಳಿಸಿದವು. ಮನೆಯ ಅಂಗಳದಲ್ಲಿ ಕೋಳಿಗಳು ಜಗಳವಾಡುವಂತೆ ಬಣ್ಣ ಬಣ್ಣದ ಗಲ್‌ಗಳೂ ಸಹ, ಅಲೆಯು ಬಡಿಯುತ್ತಿದ್ದ ತೀರದುದ್ದಕ್ಕೂ

ಒಂದರ ಮೇಲೊಂದು ಬಿದ್ದು ಮುಂದು ಮುಂದಕ್ಕೆ ಹಾರುತ್ತಾ, ಜಗಳವಾಡುತ್ತಾ ಮಿಯ್‌ಗುಡುತ್ತಿದ್ದವು.



"ಮೀನುಗಳ ವೃದ್ಧಿಗೆ ಇದು ಒಳ್ಳೆಯ ಕಾಲವೆ?" ಹರಿ ಕೇಳಿದ.

"ಇದೀಗ ಋತು ಪ್ರಾರಂಭವಾಗಿದೆ. ಅದು ಒಳ್ಳೆಯದಾಗಿರಲೆಂದು ಆಶಿಸೋಣ" ಎಂದು ಲೀಲ ಉತ್ತರಿಸಿದಳು.

ನಂತರ ಹರಿ, ಉತ್ತರ ಅಶುಭವಾಗಿರಬಹುದೆಂಬ ಶಂಕೆಯಿಂದ ಪ್ರಶ್ನೆ ಕೇಳುವುದಕ್ಕೇ

ಹಿಂಜರಿಯುತ್ತ ಕೇಳಿದ, ''ಚಂಡಮಾರುತದಲ್ಲಿ ನಾಪತ್ತೆಯಾಗಿದ್ದ ದೋಣಿಗಳನ್ನು ಪತ್ತೆ ಹಚ್ಚಲಾಯಿತೆ?''

''ಓ, ನೀನೂ ಅದನ್ನು ಕೇಳಿದ್ದಿಯಾ?'' ಅಚ್ಚರಿಯಿಂದ ಅವರು ಕೇಳಿದರು. ನಂತರ, ಬಿಜುವಿನ ಶಕ್ತಿಯುತವಾದ ದೋಣಿಯ ಮುಂದಾಳತ್ವದಲ್ಲಿ ಶೋಧನಾ ತಂಡವೊಂದು ಹೋದ ಬಗ್ಗೆ ಮತ್ತು ಮೀನುಗಾರರನ್ನು ವಾಪಸ್ ಕರೆತಂದ ಬಗ್ಗೆ ವಿವರಿಸಿದರು. ಮುಳುಗಿ ಹೋದ ಅಲಿಬಾಗ್‌ನ ಮೂವರನ್ನು ಬಿಟ್ಟು ಉಳಿದವರು ಜರ್ಝರಿತಗೊಂಡಿದ್ದರೂ ಜೀವಂತವಾಗಿದ್ದರೆಂದು ತಿಳಿಸಿದರು.

''ಅಂದರೆ ಬಿಜುವಿನ ದೋಣಿ ಕಡೆಗೂ ಉಪಯೋಗಕ್ಕೆ ಬಂತಲ್ಲ'' ಹರಿ ನೆಮ್ಮದಿಯಿಂದ ಹೇಳಿದ. ಬಿರುಗಾಳಿಯಿಂದ ಕೂಡಿದ ಸಮುದ್ರದಿಂದ ಶಾಂತವಾದ ದಡಕ್ಕೆ ತನ್ನನ್ನು ಎಳೆದು ಹಾಕಿದ ಭಾವನೆ ಅವನಿಗುಂಟಾಯಿತು.

''ಅದೊಂದು ಅದ್ಭುತವಾದ ದೋಣಿ'' ಬೇಲ ಮತ್ತು ಕಮಲ ಒಟ್ಟಿಗೆ ಹೇಳಿದರು. ಆದರೆ ಲೀಲ, ''ಆದರೂ ಅವನು ಯಾವಾಗಲೂ ತನ್ನ ದೋಣಿಯ ಬಗ್ಗೆ ಜಂಬ ಕೊಚ್ಚಿಕೊಳ್ಳುವ ಅಗತ್ಯವಿಲ್ಲ'' ಎಂದಳು.

''ಖಂಡಿತ ಇಲ್ಲ... ಆದರೂ ಮೀನುಗಾರರನ್ನು ರಕ್ಷಿಸಿದ್ದಕ್ಕಾಗಿ ನಾವು ಅವನಿಗೆ ಆಭಾರಿಯಾಗಿರಬೇಕು'' ಎಂದು ಹರಿ ಅವಳಿಗೆ ತಿಳಿಸಿದ. ತಾನೇ ಆಭಾರಿಯಾಗಿರುವ ಭಾವನೆ ಅವನಿಗುಂಟಾಯಿತು. ಬಿರುಗಾಳಿಯ ಆ ಕಾಲದಲ್ಲಿ ತಾನು ಈ ಸುದ್ದಿಯನ್ನು ರೇಡಿಯೋದಲ್ಲಿ ಹೇಗೆ ಕೇಳಿದನೆಂಬುದನ್ನೂ, ಥುಲ್‌ಗೆ ಹಿಂದಿರುಗಿ ತನ್ನ ಜನರ ಜೊತೆ ಇರಬೇಕೆಂದು ತಾನು ಹಂಬಲಿಸಿದ್ದನ್ನೂ ಅವನು ಅವರಿಗೆ ವಿವರಿಸಿದ. ತಾನು ಥುಲ್‌ನ ಹುಡುಗ ಹಾಗೂ ಹಾಗೇ ಇರಬೇಕು ಎಂಬುದನ್ನು ಆ ಘಟನೆ ತನಗೆ ಮನವರಿಕೆ ಮಾಡಿಕೊಟ್ಟಿದ್ದಾಗಿ ಹರಿ ಹೇಳಿದ. ಅವನ ಈ ಭಾವನೆಗಾಗಿ ಅವರು ಹರ್ಷದಿಂದ ಮುಗುಳ್ನಕ್ಕರು. ಮೀನು ದೋಣಿಗಳು ಹಿಂದಿರುಗಲು ಪ್ರಯತ್ನಿಸುತ್ತಿದ್ದವು. ಆಕಾಶಕ್ಕೆ ಎದುರಾಗಿ ಅವುಗಳ ಪಟಗಳು ಈಜು ರೆಕ್ಕೆಗಳಂತೆ ಕಾಣುತ್ತಿದ್ದವು. ಸಮುದ್ರದಲ್ಲಿ ಉಬ್ಬರವಿಳಿತವು ಕಡಿಮೆಯಾಗುತ್ತಿದ್ದಂತೆ ದೋಣಿಗಳು ಸಮುದ್ರದಲ್ಲಿ ಲಂಗರು ಹಾಕಬೇಕಿತ್ತು. ಮೀನುಗಾತಿಯರು, ತಮ್ಮ ಸೀರೆಯಂಚುಗಳನ್ನು ಎತ್ತಿ ಕಟ್ಟಿಕೊಂಡು, ನೀರಿನಲ್ಲಿ ನುಗ್ಗಿಕೊಂಡು ಹೋಗಿ, ಬುಟ್ಟಿಗಳಲ್ಲಿ ತುಂಬಿದ ಮೀನುಗಳನ್ನು ದಡಕ್ಕೆ ತರಬೇಕಿತ್ತು. ಬುಟ್ಟಿಗಳನ್ನು ತಂದು, ಅವುಗಳ ಮುಚ್ಚಳಗಳನ್ನು ತೆರೆದಾಗ ಚೌಕಾಸಿ ವ್ಯಾಪಾರವೂ, ಕೂಗಾಟವೂ ಕೇಳಲಾರಂಭಿಸಿತು.

''ಅವರು ಗಲ್‌ಗಳಿಗಿಂತ ಹೆಚ್ಚು ಗಲಾಟೆ ಮಾಡುತ್ತಿದ್ದಾರೆ'' ಲೀಲ ಹೇಳಿದಳು.

''ನಾವೂ ಸ್ವಲ್ಪ ಕೊಳ್ಳೋಣವಾ? ನನ್ನಲ್ಲಿ ಸ್ವಲ್ಪ ಹಣವಿದೆ'' ಹರಿ ಸ್ವಲ್ಪ ಜಂಬಂದಿದಲೇ ಹೇಳಿದ.

''ಓ, ನೀನು ನಗರದಿಂದ ಸಾಹುಕಾರನಾಗಿ ವಾಪಸ್ ಬಂದಿದ್ದೀ, ಅಲ್ಲವಾ?'' ಹುಡುಗಿಯರು ಸಂತೋಷದಿಂದ ನಗುತ್ತಾ ಅವನನ್ನು ಅಣಕಿಸಿದರು.

''ಕಡೆಯ ಪಕ್ಷ, ಕೆಲವು ದಿನಗಳ ಶ್ರೀಮಂತ'' ಹರಿ ಹೇಳಿದ, ''ಬನ್ನಿ. ಲೀಲ, ನೀನೇ ಆರಿಸಿಕೊ. ಪಾಮ್‌ಫ್ರೆಟನ್ನೋ, ಸುರ್‌ಮಾಯ್ ಅನ್ನೋ, ಸ್ವಲ್ಪ ಏಡಿಗಳನ್ನೊ ಕೊಳ್ಳೋಣ.''

ಆದರೆ, ಲೀಲ ಒಂದೇ ದಿನ ಶ್ರೀಮಂತಳಾಗುವ ಇಚ್ಛೆ ಹೊಂದಿರಲಿಲ್ಲ. ಇತರರು

ಚೌಕಾಸಿ ಮಾಡುತ್ತಾ, ಗಲಾಟೆ ಮಾಡುತ್ತಿದ್ದುದನ್ನು ನೋಡುತ್ತಿದ್ದಳು. ಎಲ್ಲ ಪ್ರಾನ್ ಮತ್ತು ಪಾಮ್‌ಫ್ರೆಟ್ ಮೀನುಗಳೂ ಖರ್ಚಾದ ಮೇಲೆ, ಅತ್ಯಂತ ಅಗ್ಗವಾದ 'ಜವೋಲ' ಮೀನುಗಳನ್ನು ಕೊಂಡಳು. ಕಡುಗೆಂಪಿನ ಉದ್ದ ಬಾಲದ ಆ ಚಿಕ್ಕ ಮೀನುಗಳು ಚೀಲದ ಕೆಳಗೆ ತಿರುಳಿನಂತೆ ಕಾಣುತ್ತಿದ್ದವು. ಬೇಲ ಮತ್ತು ಕಮಲರಿಗೆ ನಿರಾಶೆಯಾಯಿತು. ಆದರೆ, ''ಬಹುಕಾಲದಿಂದ ನಾನು ಜವೋಲವನ್ನು ತಿಂದೇ ಇಲ್ಲ'' ಎಂದು ಹರಿ ಹೇಳಿದ. ತಾನು ಕೊಂಡದ್ದನ್ನು ಮನೆಗೆ ಒಯ್ಯಲು ಲೀಲ ಅದನ್ನು ಗಂಟು ಕಟ್ಟಿದಳು.

ಮನೆಗೆ ಹಿಂದಿರುಗುವ ಮುನ್ನ ಅವರು, ಥುಲ್ ಅನ್ನು ಅಲಿಬಾಗ್ ಕಡಲ ದಂಡೆಯಿಂದ ಬೇರ್ಪಡಿಸುವ ಚಾಚು ಪ್ರದೇಶದವರೆಗೆ ನಡೆದು ಹೋದರು. ಚಿಕ್ಕದಾದ ಮತ್ತು ಹಗುರವಾದ ದೋಣಿಗಳನ್ನು ಅಲ್ಲಿಯವರೆಗೆ ಎಳೆದು ತಂದು ಲಂಗರು ಹಾಕಲಾಗಿತ್ತು. ಅವುಗಳ ಪಟಗಳನ್ನೂ ಇಳಿಸಲಾಗಿತ್ತು. ಆದರೆ ಮೀನುಗಾತಿಯರ ಹಳೆ ಸೀರೆಯಿಂದ ಮಾಡಿದ ನಿಶಾನೆಗಳು ಗಾಳಿಯಲ್ಲಿ ಜೋರಾಗಿ ಹಾರಾಡುತ್ತಿದ್ದವು. ಅವುಗಳಾಚೆ ಇದ್ದ ಹಳದಿ ಬೆಟ್ಟಗಳಿಗೆ, ಬಂಗಾರದ ಬಣ್ಣದ ಆಕಾಶದ ಹಿನ್ನಲೆಯಲ್ಲಿ ಕಂದು ಮತ್ತು ಕಡುನೀಲಿ ಬಣ್ಣದಲ್ಲಿ ಮೆರಗು ಹಾಕಿದಂತಿತ್ತು.

ಹರಿ ಮತ್ತು ಸೋದರಿಯರು ಚಾಚು ಪ್ರದೇಶದ ತುದಿಯವರೆಗೆ ಹೋದರು. ಅಲ್ಲಿ ಕಡಲ ಪ್ರತಿ ಅಲೆಯೂ ಶಂಖ, ಚಿಪ್ಪುಗಳನ್ನು ತರುತ್ತಿತ್ತು. ಅವೆಲ್ಲಾ ಮರಳ ದಂಡೆಯ ಮೇಲೆ ಚೆಲ್ಲಾಪಿಲ್ಲಿಯಾಗಿ ಬಿದ್ದಿದ್ದವು. ಅವುಗಳಲ್ಲನೇಕವು ಪುಡಿಪುಡಿಯಾಗಿ ಹೊಳೆಯುವ ಕಾಳುಗಳಂತೆ ಬಿದ್ದಿದ್ದವು. ಆದರೆ ಕೆಲವು ದೊಡ್ಡ ಚೂರುಗಳೂ ಇದ್ದು, ಅವುಗಳ ಒಳಗೆ ಫಳಫಳನೆ ಹೊಳೆಯುವ ಮಣಿಗಳಂಥ ಕಲ್ಲುಗಳಿದ್ದವು. ಹರಿ ಬಗ್ಗಿ ಅವುಗಳಲ್ಲಿ ಕೆಲವನ್ನು ಆರಿಸಿ, ಸಮುದ್ರದೊಳಗೆ ಬಿಸಾಡಿದ. ಚಾಚು ಪ್ರದೇಶದಾಚೆ, ಅಲಿಬಾಗ್ ಸಮುದ್ರ ದಂಡೆಯ ಸರ್ವೆಮರಗಳ ತೋಪಿತ್ತು. ಅದರಾಚೆ ಪಟ್ಟಣವೂ, ಕೋಟೆಯೂ ಇದ್ದವು. ಬಹು ಹಿಂದೆ ಮೊಘಲರ ಕಾಲದಲ್ಲಿ ಕಡಲ ಸಾಹಸಿಗಳಾದ ಆಂಗ್ರರು ಆ ಕೋಟೆಯನ್ನು ಕಟ್ಟಿದ್ದರೆಂದು ಹೇಳಲಾಗುತ್ತಿತ್ತು.

ಅಲಿಬಾಗ್‌ನತ್ತ ನೋಡುತ್ತಾ ಲೀಲ ಹೇಳಿದಳು, ''ನಾಳೆ ದೀಪಾವಳಿ, ಅಮ್ಮನನ್ನು ಕರೆದುಕೊಂಡು ಬರಬೇಕು.''

''ಅವಳು ಈಗ ವಾಪಸ್ ಬಂದು ಮನೆಯಲ್ಲೇ ಇರಬಹುದೆ? ಅಷ್ಟರಮಟ್ಟಿಗೆ ಅವಳು ಹುಷಾರಾಗಿದ್ದಾಳಾ?''

''ತುಂಬಾ ಸುಧಾರಿಸಿದ್ದಾಳೆ. ದೀಪಾವಳಿಯಲ್ಲಿ ಅವಳು ಮನೆಗೆ ಹಿಂದಿರುಗಬಹುದೆಂದು ವೈದ್ಯರು ಹೇಳಿದ್ದರು.''

''ಹಾಗಿದ್ದರೆ ನಾನೇ ಹೋಗಿ ಕರೆದುಕೊಂಡು ಬರುತ್ತೇನೆ.''

''ಆಗಲಿ, ನೀನು ಬೆಳಿಗ್ಗೆ ಹೋಗು. ನಾನು ಮತ್ತು ತಂಗಿಯರು ಮನೆಯಲ್ಲೇ ಇದ್ದು ದೀಪಾವಳಿಗಾಗಿ ಎಲ್ಲ ಸಿದ್ಧತೆಗಳನ್ನೂ ಮಾಡುತ್ತೇವೆ.''

''ಈಗ ನಾವು ಮನೆಗೆ ಹೋಗಿ ಊಟ ಮಾಡೋಣ'' ಬೇಲ ಹಸಿವಿನಿಂದ ಹೇಳಿದಳು.

''ಓಡಿ, ನಾನು ನಿಮ್ಮನ್ನು ಹಿಡಿಯುತ್ತೇನೆ'' ಹರಿ ಕೂಗಿದ. ತಂಗಿಯರಿಬ್ಬರೂ ಓಡಿದರು.

ಸೂರ್ಯನ ಬೆಳಕಿನಿಂದ ಕ್ಷಿತಿಜವು ಉಜ್ವಲವಾಗಿತ್ತು. ಕರಗುತ್ತಿರುವ ಗಾಜಿನ

ಉಂಡೆಯಂತೆ, ಸೂರ್ಯ ಕಡಲಲ್ಲಿ ಕರಗುತ್ತಿರುವಂತೆ ಕಾಣುತ್ತಿತ್ತು. ಆಕಾಶದ ಬಣ್ಣವು ಮಂದಮಂದವಾಗುತ್ತಾ ನಿಂಬೆ ಹಳದಿಗೆ ತಿರುಗಿತ್ತು. ಪೂರ್ವ ದಿಗಂತ ಆಗಲೇ ಧೂಮ್ರ-ವರ್ಣವಾಗಿತ್ತು. ಆಕಾಶದಲ್ಲಿ ಒಂದು ನಕ್ಷತ್ರ ಕಾಣಿಸಿಕೊಂಡಿತು. ಅದು ಯಾವಾಗಲೂ ಮೊದಲು ಕಾಣಿಸಿಕೊಳ್ಳುವ ಪ್ರಕಾಶಮಾನವಾದ ಶುಕ್ರಗ್ರಹ.

ತಂಗಿಯರನ್ನು ಅಟ್ಟಿಸಿಕೊಂಡು ಓಡುತ್ತಿದ್ದ ಹರಿ, ಕೊನೆಗೆ ಏದುಸಿರು ಬಿಡುತ್ತಾ ಹಿಂದುಳಿದು, ಲೀಲಳ ಪಕ್ಕದಲ್ಲಿ ನಡೆಯಲಾರಂಭಿಸಿದ.

''ನಾವು ಮನೆಗೆ ಹೋದ ಮೇಲೆ ಮುಂಬೈ ಬಗ್ಗೆ ನೀನು ಎಲ್ಲವನ್ನೂ ತಿಳಿಸಬೇಕು'' ಲೀಲ ಹೇಳಿದಳು.

''ಆದರೆ ಮೊದಲು ಮನೆಯ ಬಗ್ಗೆ ಎಲ್ಲ ವಿಷಯವನ್ನೂ ತಿಳಿಸು'' ಹರಿ ಹೇಳಿದ.

ಊಟಮಾಡಿದ ಮೇಲೆ, ಗುಡಿಸಿಲೊಳಗೆ ಲಾಂದ್ರ ಉರಿಯಲು ಬಿಟ್ಟು, ಹೊರಗೆ ನಕ್ಷತ್ರಗಳ ಕೆಳಗೆ ಕುಳಿತರು. ಅಲ್ಲಿ ಮಿಂಚುಹುಳುಗಳು, ಹೊಳೆಯುವ ಮೀನುಗಳಂತೆ, ತೆಂಗಿನ ತೋಟಗಳ ಕತ್ತಲೆಯ ಜೌಗು ಪ್ರದೇಶದಲ್ಲಿ ಹಾರಾಡುತ್ತಿದ್ದವು. ತಾವು ಅಗಲಿದ್ದ ತಿಂಗಳುಗಳಲ್ಲಿ ಸಂಭವಿಸಿದ ಸಂಗತಿಗಳ ಬಗ್ಗೆ ಅವರು ಒಂದೇ ಸಮನೆ ಮಾತನಾಡಿದರು.

ಶ್ರೀಕೃಷ್ಣ ಖಾನಾವಳಿ ಮತ್ತು ಡಿಂಗ್‌ಡಾಂಗ್ ವಾಚ್ ವರ್ಕ್ಸ್‌ಗಳ ಬಗ್ಗೆ, ಪಾನ್‌ವಾಲಾ ಮತ್ತು ಜಗುವಿನ ಬಗ್ಗೆ, ಪಾರ್ಕಿನ ಮತ್ತು ತೆಂಗು ದಿನದ ಹಬ್ಬದ ಬಗ್ಗೆ ಹರಿ ವಿವರವಾಗಿ ತಿಳಿಸಿದ ಮೇಲೆ, ಅವನ ಗೈರುಹಾಜರಿಯಲ್ಲಿ ನಡೆದ ಸಂಗತಿಗಳನ್ನು ತಿಳಿಸುವುದು ಲೀಲಳ ಪಾಲಿಗೆ ಬಂದಿತ್ತು.

''ನಾವು ನಿನಗಾಗಿ ಸದಾ ಕಾಯುತ್ತಿದ್ದೆವು. ದೀಪಾವಳಿಗೆ ನೀನು ಮನೆಗೆ ಬರುತ್ತೀಯೆಂದು ತಿಳಿದಿದ್ದೆವು.''

''ಅಂತೆಯೇ ನೀನು ಬಂದೆ'' ಕಮಲ ಹರಿಯ ಕೈಯನ್ನು ಹಿಡಿದು ಎದೆಗೆ ಒತ್ತಿಕೊಳ್ಳುತ್ತಾ ಉದ್ಗಾರ ತೆಗೆದಳು. ಅವಳ ಕೈ ಬಳೆಗಳು ಝಣಝಣ ಶಬ್ದ ಮಾಡುತ್ತಾ ಫಳಫಳ ಹೊಳೆದವು.

''ಹೌದು, ನಾನು ಬಂದೆ'' ಹರಿ ಅವಳ ಕೈ ತಟ್ಟುತ್ತಾ ಹೇಳಿದ, ''ನಾಳೆ ದೀಪಾವಳಿ, ಅಮ್ಮನನ್ನು ನೋಡಲು ನಾನು ಅಲಿಬಾಗ್‌ಗೆ ಹೋಗುತ್ತೇನೆ.''

''ಅವಳನ್ನು ದಯವಿಟ್ಟು ಮನೆಗೆ ಕರೆದುಕೊಂಡು ಬಾ'' ಬೇಲ ಯಾಚಿಸಿದಳು.

''ಖಂಡಿತ'' ಹರಿ ಆಶ್ವಾಸನೆ ನೀಡಿದ. ಅವಳತ್ತ ಮತ್ತು ಎಲ್ಲರತ್ತ ನೋಡಿ ನಸುನಕ್ಕ. '' ಓ, ನೀವೆಲ್ಲಾ ಪ್ರಚಂಡರು,'' ಅವನು ಹೇಳಿದ, ''ಇಷ್ಟೊಂದು ತಿಂಗಳು ಇಷ್ಟು ಸಲೀಸಾಗಿ ನೀವು ನಿಭಾಯಿಸಿರುವುದು ಆಶ್ಚರ್ಯ!''

ಲೀಲಳೂ ನಸುನಕ್ಕಳು. ಅದು ಒಂದು ರೀತಿ ಹೆಮ್ಮೆಯ ನಗುವಾಗಿತ್ತು. ''ಹೌದು. ನಾವು ನಿಭಾಯಿಸಿದೆವು'' ಎಂದು ಹೇಳಿ, ಅವಳು ನಾಚಿಕೆಯಿಂದ ತಲೆತಗ್ಗಿಸಿ ತನ್ನ ಪಾದಗಳತ್ತ ನೋಡಿದಳು. ''ಇಲ್ಲ, ನಿಭಾಯಿಸುವುದು ಸಾಧ್ಯವಾಗುತ್ತಿರಲಿಲ್ಲ. ಡಿಸಿಲ್ವಾ ಕುಟುಂಬದವರು ಅಮ್ಮನಿಗೆ ಸಹಾಯ ಮಾಡಿದರು. ಅವರೆಲ್ಲಾ ಹೋದ ಮೇಲೆ ಬಂಗಲೆಯಲ್ಲಿರುವ ಸ್ಯೆಯದ್ ಅಲಿ ಸಾಹಬ್ ನಮಗೆ ಸಹಾಯ ಮಾಡಿದರು. ಇಲ್ಲದಿದ್ದರೆ ನಿಭಾಯಿಸುವುದು ಖಂಡಿತ ಸಾಧ್ಯವಿರುತ್ತಿರಲಿಲ್ಲ.''

''ಸ್ಯೆಯದ್ ಅಲಿ ಸಾಹಬ್?'' ಹರಿ ಹುಬ್ಬೇರಿಸಿದ. ಈ ಹೆಸರು ತನಗೆ ತುಂಬ ಪರಿಚಿತ.

ಆದರೆ, ಹಿಂದೆ ಈ ಹೆಸರನ್ನು ಕೇಳಿದ್ದೆವೆಂಬುದು ಅವನ ನೆನಪಿಗೆ ಬರಲಿಲ್ಲ. ಮುಂಬೈನಲ್ಲೆ? ಅಥವಾ ಈ ಹುಡುಗಿಯರೇ ಹಿಂದೆ ಈ ಹೆಸರನ್ನು ತಿಳಿಸಿದ್ದರೆ? ಬಂಗಲೆಯಲ್ಲಿರುವ ಅಪರಿಚಿತನ ಬಗ್ಗೆ ಹೆಚ್ಚು ಕುತೂಹಲ ತಳೆದ ಅವನು ಹೇಳಿದ, ''ಅಲಿಬಾಗ್‌ನಿಂದ ಹಿಂದಿರುಗಿದ ಮೇಲೆ ನಾನು ಆತನಲ್ಲಿಗೆ ಹೋಗಿ, ನಿಮ್ಮನ್ನೆಲ್ಲಾ ಚೆನ್ನಾಗಿ ನೋಡಿಕೊಂಡದ್ದ-ಕ್ಕಾಗಿ ವಂದನೆ ಸೂಚಿಸುತ್ತೇನೆ.''

''ಇಲ್ಲ'' ಬೇಲ ಜೋರಾಗಿ ಹೇಳಿದಳು, ''ನಾವು ನಮ್ಮನ್ನು ನೋಡಿಕೊಂಡದ್ದು ಮಾತ್ರವಲ್ಲದೆ, ಆತನನ್ನೂ ನೋಡಿಕೊಂಡೆವು.''

''ಹೌದು, ನಿಮ್ಮ ಮಾತು ನಿಜ'' ಹರಿ ನಗುತ್ತಾ ಹೇಳಿದ,

''ನೀವೆಲ್ಲಾ ಖಂಡಿತ ಮಹಾ ಪ್ರಚಂಡರು.''

# 13

ದೀಪಾವಳಿಯ ಬೆಳಿಗ್ಗೆ, ಸಿದ್ದತೆಗಾಗಿ ತನ್ನ ಸೋದರಿಯರನ್ನು ಮನೆಯಲ್ಲೇ ಬಿಟ್ಟು, ಹರಿ ಅಲಿಬಾಗ್‌ಗೆ ಬಸ್ ಹಿಡಿಯಲು ಹಳ್ಳಿಯ ಹಾದಿಯಲ್ಲಿ ಹೊರಡುವ ಮುನ್ನ. ತನಗೇನು ಬೇಕೆಂದು ಹೇಳಿದರೆ ತರುವುದಾಗಿ ಅವನು ಲೀಲಳನ್ನು ಕೇಳಿದ. ಅವಳು ಏನೂ ಬೇಡವೆಂಬಂತೆ ತಲೆಯಾಡಿಸುತ್ತಾ, ''ನಮಗೆ ಬೇಕಾದ್ದೆಲ್ಲಾ ಇದೆ ಹರಿ'' ಎಂದಳು. ಆದರೆ, ತೆಂಗಿನ ತೋಟದ ಮೂಲಕ ಮರಳ ಹಾದಿಯಲ್ಲಿ ಹೋಗುತ್ತಿದ್ದಾಗ ಬೇಲ ಹಿಂದೆ ಓಡಿ ಬಂದು ಅವನ ಕೈ ಹಿಡಿದು ಮೆಲ್ಲಗೆ ಹೇಳಿದಳು, ''ದೀಪಾವಳಿಯಲ್ಲಿ ಅಲಿಬಾಗ್‌ನಲ್ಲಿ ಮಾರುವ ಸಕ್ಕರೆಅಚ್ಚು ತರುತ್ತೀಯಾ? ನಾನು ಹೇಳುವುದು ಗೊತ್ತಾಯಿತು ತಾನೆ?.. ಅದೇ ಬಿಳಿ ಸಕ್ಕರೆಯ ಕುದುರೆಗಳು, ಆನೆಗಳು...? ಸೈಯದ್ ಅಲಿ ಸಾಹೇಬರನ್ನು ನೀರಿನಿಂದ ಹೊರಗೆಳೆದು ಹಾಕಿದಾಗ ಅವರು ನನಗೆ ಕೊಟ್ಟ ಸ್ವಲ್ಪ ದುಡ್ಡು ನನ್ನಲ್ಲಿದೆ...''

''ಅದನ್ನು ನೀನೇ ಇಟ್ಟುಕೊ'' ಹರಿ ನಗುತ್ತಾ ಹೇಳಿದ, ''ಆ ಸಕ್ಕರೆಯ ಆಟಿಕೆಗಳನ್ನು ನನ್ನ ಹಣದಿಂದಲೇ ತರುತ್ತೇನೆ'' ಹರಿ ಸ್ವಲ್ಪ ಜಂಬದಿಂದಲೇ ಹೇಳಿ ಮುಂದಕ್ಕೆ ಹೊರಟ.

ಅದು, ಮುಂಗಾರು ಕಳೆದ ನಂತರ ಕಾಣಬರುವ ಒಂದು ಆಹ್ಲಾದಕರವಾದ ಮುಂಜಾನೆ. ಮುಂಬರುವ ಚಳಿಗಾಲದ ಸೂಚನೆಯಾಗಿ, ಹುಲ್ಲಿನ ಮೇಲೆ ಇಬ್ಬನಿ ಬಿದ್ದಿತ್ತು. ಗಾಳಿ ಸ್ವಚ್ಛವಾಗಿತ್ತು. ಹರಿ, ತಮ್ಮ ಜಮೀನಿಗೆ ಹೋಗಿ ಒಂದು ಮೂಲೆಯಲ್ಲಿ ಸ್ವಲ್ಪ ಹೊತ್ತು ನಿಂತ. ಅದರಲ್ಲಿ ಕೋಳಿ ಸಾಕಣೆ ಕೇಂದ್ರವನ್ನು ಹೇಗೆ ಪ್ರಾರಂಭಿಸಬಹುದೆಂಬ ಬಗ್ಗೆ ಚಿಂತಿಸಿದ. ಕೋಳಿಗಳ ಬಗ್ಗೆ ಅವನಿಗೇನೂ ತಿಳಿಯದು. ಆದರೆ ಕಲಿಯುವುದು ಸಾಧ್ಯ ಎಂಬ ವಿಶ್ವಾಸ ಅವನಿಗಿತ್ತು.ಅದೇನು ಅಷ್ಟು ಕಷ್ಟವಾಗಲಾರದೆಂದು ಭಾವಿಸಿದ. ಪ್ರಾರಂಭದಲ್ಲಿ ಸ್ವಲ್ಪ ಕೋಳಿಗಳನ್ನು ಕೊಳ್ಳುವುದು, ಅವುಗಳ ಬಗ್ಗೆ ಹೆಚ್ಚು ಹೆಚ್ಚು ತಿಳಿದಂತೆ ಮತ್ತು ತನ್ನ ಆತ್ಮವಿಶ್ವಾಸ ಹೆಚ್ಚಿದಂತೆ, ಕೇಂದ್ರದ ಗಾತ್ರವನ್ನು ಹೆಚ್ಚಿಸುವುದು, ಕಾರ್ಖಾನೆ ಮತ್ತು ವಸತಿ ಪ್ರದೇಶಗಳು ಪ್ರಾರಂಭವಾಗುವ ತನಕ ತಾನೇ ಆ ಕೇಂದ್ರವನ್ನು ನೋಡಿಕೊಳ್ಳುವುದು, ನಂತರ ಗ್ರಾಮದ ಗಡಿಯಾರ ರಿಪೇರಿ ಕೆಲಸ ಪ್ರಾರಂಭಿಸುವುದು.....

ಈ ಆಲೋಚನೆಯು ಅವನನ್ನು ಹರ್ಷಚಿತ್ತನನ್ನಾಗಿಯೂ, ಆಶಾವಾದಿಯನ್ನಾಗಿಯೂ ಮಾಡಿತು. ಅವನು ಹಳ್ಳಿಯ ಹಾದಿಯಿಂದ ತಿರುಗಿ ತೆಂಗು ಮತ್ತು ಅಡಿಕೆ ಮರಗಳ ನಡುವಣ ಕೆಸರಿನ ಹಾದಿಯಲ್ಲಿ ನಡೆಯಲಾರಂಭಿಸಿದ. ಹಳೆಯ ಮನೆಗಳೆಲ್ಲಾ ಅದೇ ರೀತಿ ಇದ್ದುದು ನೋಡಿ ಅವನಿಗೆ ಸಂತೋಷವಾಯಿತು. ಮುದುಕರು ವರಾಂಡದಲ್ಲಿ ಉಯ್ಯಾಲೆಯ ಮೇಲೆ ಕುಳಿತು ಗಟ್ಟಿಯಾಗಿ ಮಾತನಾಡುತ್ತಿದ್ದರು. ಹೆಂಗಸರು ದೀಪಾವಳಿಯ ಸಲುವಾಗಿ ವಿವಿಧ

ನಮೂನೆಯ ರಂಗೋಲಿಗಳನ್ನು ಇಡುತ್ತಿದ್ದರು. ಬಿಸಿಲಿಗೆ ಬಣ್ಣ ಬಣ್ಣದ ಕಾಗದದ ದೀಪಗಳನ್ನು ಕಟ್ಟುತ್ತಿದ್ದರು. ಕೋಳಿ ನೆಲವನ್ನು ಕೆರೆಯುತ್ತಾ ಓಡಾಡುತ್ತಿದ್ದವು. ಬೆಕ್ಕುಗಳು ಅಂಗಣದ ನೆರಳಿನಲ್ಲಿ ಮಲಗಿ ನಿದ್ರಿಸುತ್ತಿದ್ದವು. ರಸ್ತೆಯ ತುದಿಯಲ್ಲಿ ಅರಳುತ್ತಿದ್ದ ಕಡುಗೆಂಪು, ಬಿಳಿಯ ಕಮಲ ಪುಷ್ಪಗಳುಳ್ಳ ಸುಂದರವಾದ ಕೊಳವಿತ್ತು. ಅಲ್ಲಿ ಹೆಂಗಸರು ಕಲ್ಲಿನ ಮೇಲೆ ಬಟ್ಟೆಗಳನ್ನು ಒಗೆಯುತ್ತಿದ್ದರು. ಬಾಲಕಿಯರ ಶಾಲೆ ಮತ್ತು ಬಾಲಕರ ಶಾಲೆಯನ್ನು ಬಳಸಿಕೊಂಡು ಹೋಗುವ ಹಾದಿಯು, ಗಾಡಿಗಳ ಓಡಾಟದಿಂದ ಮತ್ತಷ್ಟು ಒರಟಾಗಿಯೂ ದೂಳಿನಿಂದಲೂ ಕೂಡಿತ್ತು. ಅಲ್ಲೇ ಹಳ್ಳಿಯ ಹಾದಿ ಮತ್ತು ಹೆದ್ದಾರಿ ಕೂಡುವ ಜಾಗವಿತ್ತು. ಅಲ್ಲಿ ನಿಂತು ಬಸ್ ಹಿಡಿಯಲು ಹರಿ ಕಾಯುತ್ತಿದ್ದ.

ಬೆಟ್ಟದ ಗುಡಿಯ ಮೇಲೆ ನಸುಗೆಂಪು ಛಾಯೆಯ ನೀಲಿ ಆಕಾಶದಲ್ಲಿ ಎರಡು ಗಾಳಿಪಟಗಳು ಸುತ್ತುತ್ತಾ ಏರಿಳಿಯುತ್ತಿದ್ದುದನ್ನು ಅವನು ನೋಡುತ್ತಿದ್ದಾಗ, ಜೋರಾಗಿ ಗಂಟೆ ಬಡಿಯುತ್ತಾ ಸೈಕಲ್ಲೊಂದು ವೇಗವಾಗಿ ಬಂತು. ರಾಮು ಅದರಿಂದ ಹಾರಿ ಹರಿಯ ಮುಂದೆ ನಿಂತು ಕೂಗಿದ, ''ಹರಿ! ಹರಿ, ವಾಪಸ್ ಬಂದೆಯಾ? ನೀನು ಎಲ್ಲಿಗೆ ಹೋಗಿದ್ದೆ, ಹರಿ? ಎಂದು ವಾಪಸ್ ಬಂದೆ?''

ರಾಮು ಎಂದಿನಂತೆ ತಾನೇ ತಾನಾಗಿ ಎಲ್ಲ ಗಲಾಟೆಯನ್ನೂ ಮಾಡುತ್ತಿದ್ದುದು ಕಂಡು ಹರಿಗೆ ನಗು ಬಂತು. ''ನಾನು ಮುಂಬೈನಲ್ಲಿದ್ದೆ, ರಾಮು.''

''ಏನು, ಆಗಲೇ ಮತ್ತೆ ವಾಪಸ್ ಹೊರಟೆಯಾ?''

''ಇಲ್ಲ, ಆಸ್ಪತ್ರೆಯಲ್ಲಿರುವ ನನ್ನ ತಾಯಿಯನ್ನು ನೋಡಲು ಅಲಿಬಾಗ್‌ಗೆ ಹೋಗುತ್ತಿದ್ದೇನೆ.''

''ದೀಪಾವಳಿಗಾಗಿ ಪಟಾಕಿ, ಬಾಣ ಬಿರುಸುಗಳನ್ನು ಕೊಳ್ಳಲು ನಾನೂ ಅಲಿಬಾಗ್‌ಗೆ ಹೋಗುತ್ತಿದ್ದೇನೆ. ಬಾ, ಕೂತುಕೊ, ನಿನ್ನನ್ನೂ ಕರೆದುಕೊಂಡು ಹೋಗುತ್ತೇನೆ.''

ಹರಿ ನೆಗೆದು ಹಿಂದೆ ಕುಳಿತ. ರಾಮು ಪೆಡಲ್ ತುಳಿಯಲಾರಂಭಿಸಿದ. ಆ ಹಳೆಯ ತುಕ್ಕು ಹಿಡಿದ ಸೈಕಲ್ ರಸ್ತೆಯುದ್ದಕ್ಕೂ ಕುಕ್ಕುತ್ತಾ ಮಾಡುತ್ತಿದ್ದ ಶಬ್ದದಿಂದ, ಅವರಿಬ್ಬರೂ ಆಡುತ್ತಿದ್ದ ಮಾತುಗಳು ಅವರಿಗೇ ಕೇಳಿಸುತ್ತಿರಲಿಲ್ಲ. ಆದರೆ ತಾವು ಹೇಳಬೇಕಾದ್ದನ್ನು ಅವರು ಜೋರಾಗಿ ಕೂಗಿ ಹೇಳುತ್ತಿದ್ದರು.

''ನೀನು ಎಂದು ಬಂದೆ?''

''ನಿನ್ನೆ, ದೀಪಾವಳಿಗಾಗಿ.''

''ದೀಪಾವಳಿಯ ನಂತರ ವಾಪಸ್ ಹೋಗುತ್ತೀಯಾ?''

''ಇಲ್ಲೇ ಇರುತ್ತೇನೆ. ನಾನು ಸ್ವಲ್ಪ ಹಣ ಗಳಿಸಿದ್ದೇನೆ. ಅದನ್ನು ತಂದಿದ್ದೇನೆ. ನಾನು ಇಲ್ಲೇ ಯಾವುದಾದರೂ ಕೆಲಸ ಮಾಡುತ್ತೇನೆ.''

''ಇಲ್ಲೆಂತಹ ಕೆಲಸ?'' ರಾಮು ಹಿಂದಿನಂತೆಯೇ ಅವನನ್ನು ಗೇಲಿ ಮಾಡಿದ, ''ಇಲ್ಲಿ ನಿನಗೆ ಕೆಲಸ ಸಿಗುವುದೇ?''

''ಏನಾದರೂ ಮಾಡುತ್ತೇನೆ'' ಹರಿ ಹರ್ಷಚಿತ್ತನಾಗಿ ಜೋರಾಗಿ ಹೇಳಿದ. ಆದರೆ ತನ್ನ ಆಲೋಚನೆಗಳನ್ನು ತನ್ನಲ್ಲೇ ಇಟ್ಟುಕೊಂಡಿದ್ದ.

''ಸ್ವತಃ ಯಾವ ಕೆಲಸವನ್ನೂ ಮಾಡುವುದಕ್ಕಾಗುವುದಿಲ್ಲ.''

ರಾಮು ಕೂಗಿ ಹೇಳಿದ, ''ಕಾರ್ಖಾನೆಯು ಬರುವವರೆಗೂ ಕಾಯಿ, ನಂತರ ಕೆಲಸಗಳು ಸಿಗುತ್ತವೆ.''

''ಅಲಿಬಾಗ್‌ನ ಮೀನುಗಾರರೂ, ರೈತರೂ ಕಾರ್ಖಾನೆ ಬರದಂತೆ ತಡೆಯಬಹುದು.''

''ಆಂ? ಹೌದು, ಅದಕ್ಕಾಗಿಯೇ ಅಲ್ಲವೆ ನೀನು ಮುಂಬೈಗೆ ಹೋದದ್ದು? ಅದನ್ನು ಕಟ್ಟದಂತೆ ಸರ್ಕಾರವನ್ನು ತಡೆಯುವುದಕ್ಕಾಗಿ, ಅಲ್ಲವಾ? ಅದನ್ನು ಕಟ್ಟದಂತೆ ಸರ್ಕಾರವನ್ನು ತಡೆಯುವುದು ಕೇವಲ ಕೆಲವು ಗ್ರಾಮಸ್ಥರಿಗೆ ಹೇಗೆ ಸಾಧ್ಯ? ಅತ್ಯಲ್ಪ ಸಂಖ್ಯೆಯಲ್ಲಿ ಗ್ರಾಮಸ್ಥರು ಸರ್ಕಾರವನ್ನು ತಡೆಯುವುದು ಸಾಧ್ಯವಿಲ್ಲ.''

ರಾಮು ಎಂದಿನಂತೆಯೇ ತನ್ನ ಹಳೆಯ ರೀತಿಯಲ್ಲಿ ಕೂಗಿ ಮಾತನಾಡುತ್ತಿದ್ದಾಗ ಹರಿ ಮೌನದಿಂದ ಕೇಳುತ್ತಿದ್ದ. ''ಇಲ್ಲಿ ಎಲ್ಲವೂ ಬದಲಾಗುತ್ತದೆ. ಪ್ರತಿಯೊಂದೂ ಭಿನ್ನವಾಗುತ್ತದೆ'' ರಾಮು ಹೇಳಿದ.

''ಆದರೆ, ರಾಮು....'' ಹರಿ ಕೊನೆಗೆ ಮಧ್ಯೆ ಮಾತನಾಡಿ ಹೇಳಿದ, ''ನಾವೂ ಬದಲಾಗಬೇಕು, ನಾವೂ ಭಿನ್ನರಾಗಲೇಬೇಕು.''

ಈ ಮಾತು ರಾಮುವನ್ನು ಮೌನಗೊಳಿಸಿತು. ಹರಿ ಬೈಸಿಕಲ್‌ನ ಆಸನವನ್ನು ಹಿಡಿದುಕೊಂಡು, ಸುತ್ತಮುತ್ತಲಿದ್ದ ಕೆಸರಿನ ಗದ್ದೆಯನ್ನು ನೋಡಿದ. ಚಳಿಗಾಲದ ಬೆಳೆಗೆ ಜಮೀನು ಹಸನಾಗುತ್ತಿತ್ತು. ಈ ದೃಶ್ಯ ಪೂರ್ಣವಾಗಿ ಬದಲಾಗುತ್ತದೆ. ಈ ರೀತಿಯ ಜೀವನೋಪಾಯವೇ ಕೊನೆಗೊಳ್ಳುತ್ತದೆ ಎಂದು ಊಹಿಸುವುದೂ ಸಹ ಹರಿಗೆ ಕಷ್ಟವಾಗಿತ್ತು.

* * *

ಅಂತೂ ಅವರು ಅಲಿಬಾಗ್ ತಲುಪಿದರು. ಅದು ಜಿಲ್ಲೆಯ ಅತಿ ದೊಡ್ಡ ಪಟ್ಟಣ. ಸುಣ್ಣ ಬಳಿದ ದೊಡ್ಡ ಬಂಗಲೆಗಳು, ಅಗಲವಾದ ರಸ್ತೆಗಳು, ಪೇಟೆಗಳು ಮತ್ತು ಅಂಗಡಿಗಳಿದ್ದು, ಅವುಗಳಲ್ಲಿ ಯಂತ್ರಗಳಿಂದ ತಯಾರಿಸಿದ ಬ್ರೆಡ್, ಪಟಾಕಿ, ಬಾಣ ಬಿರುಸುಗಳು ಮತ್ತು ಬೇಕಾದ ಎಲ್ಲಾ ಸಾಮಾನುಗಳೂ ಸಿಗುತ್ತಿದ್ದವು. ಹರಿ, ಸೈಕಲ್‌ನಿಂದಿಳಿದು ತನ್ನ ಸೋದರಿಯರಿಗಾಗಿ ಸಕ್ಕರೆ ಅಚ್ಚುಗಳನ್ನು ಹುಡುಕಲು ಹೊರಟ. ಹೋಗುವ ಮುನ್ನ ಕೈಯಾಡಿಸಿ ರಾಮುವಿಗೆ ವಿದಾಯ ಹೇಳಿದ. ಹರಿಯಲ್ಲಿ ಆಗಿರುವ ಬದಲಾವಣೆಗಳನ್ನು ಕುರಿತು ಯೋಚಿಸುತ್ತಾ ರಾಮುವೂ ಮೌನವಾಗಿ ಕೈಯಾಡಿಸಿದ. ರಸ್ತೆಯ ಪಕ್ಕದಲ್ಲಿದ್ದ ಕೈಬಂಡಿಯೊಂದರಲ್ಲಿ ತನಗೆ ಬೇಕಾದ್ದನ್ನೆಲ್ಲಾ ಕೊಂಡು, ಚೀಲದಲ್ಲಿ ತುಂಬಿಕೊಂಡು ಹರಿ, ನೇರವಾಗಿ ಆಸ್ಪತ್ರೆಯ ಬಾಗಿಲಿಗೆ ಬಂದ.

ತನ್ನ ತಾಯಿಯ ಬಗ್ಗೆ ವಿಚಾರಿಸಲು ಆಸ್ಪತ್ರೆಯ ಸಮವಸ್ತ್ರ ಧರಿಸಿದ ಯಾರಾದರೂ ಬರುವರೇ ಎಂದು ನೋಡುತ್ತಾ ಹರಿ ವರಾಂಡದಲ್ಲಿ ನಿಂತಿದ್ದ. ಅಷ್ಟರಲ್ಲಿ ವೃದ್ಧನೊಬ್ಬ ಕಾಲೆಳೆದುಕೊಂಡು ಅಲ್ಲಿಗೆ ಬಂದು, ನಡುಗುವ ತನ್ನ ಕೈಗಳನ್ನು ಅವನ ಭುಜದ ಮೇಲಿಟ್ಟು ಮೆಲ್ಲಗೆ ಕೇಳಿದ, ''ಯಾರು, ಹರಿಯೆ?''

ಸುಕ್ಕುಗಟ್ಟಿದ ಮತ್ತು ಬಿಳಿಯ ಕೂದಲಿನ ವ್ಯಕ್ತಿಯನ್ನು ಹರಿ ಒಂದು ನಿಮಿಷ ದೃಷ್ಟಿಸಿ ನೋಡಿ ಉದ್ಗಾರ ತೆಗೆದ, ''ಅಪ್ಪ!''

''ನೀನು ಅವಳನ್ನು ನೋಡಲು ಬಂದೆಯಾ?'' ಕಂಪಿಸುತ್ತಾ ಅವನು ಕೇಳಿದ, ''ಅಂತೂ ನೀನೂ ಬಂದೆಯಲ್ಲ?''

''ಮುಂಬೈನಲ್ಲಿದ್ದೆ, ಅಪ್ಪ.''

''ಅವಳನ್ನು ನೋಡಲು ನೀನು ಒಂದೇ ಒಂದು ಸಲ ಸಹ ಬರಲಿಲ್ಲ.''

''ನಾನು ಬಂದದ್ದೇ ನಿನ್ನೆ. ಅಮ್ಮ ಇಲ್ಲಿರುವಳೆಂದು ಲೀಲ ಹೇಳಿದಳು. ನಾನು ಈಗ ಅವಳನ್ನು ಮನೆಗೆ ಕರೆದುಕೊಂಡು ಹೋಗಬಹುದೆ?''

''ನೀನು ಈ ಬಗ್ಗೆ ಮೊದಲು ಡಾಕ್ಟರನ್ನು ಕೇಳಬೇಕು.'' ವೃದ್ಧ ಹೇಳುತ್ತಾ ವರಾಂಡದ ತುದಿಯಲ್ಲಿದ್ದ ಬಾಗಿಲಿಗೆ ಹಸಿರು ಪರದೆಯನ್ನು ಹಾಕಿದ್ದ ಒಂದು ಕೊಠಡಿಯನ್ನು ತೋರಿಸಿದ. ಹರಿ ಮೆಲ್ಲಗೆ ಅಲ್ಲಿಗೆ ಹೋಗಿ, ಪರದೆಯನ್ನು ಪಕ್ಕಕ್ಕೆ ಸರಿಸಿ, ಒಳಗೆ ನೋಡಿದ. ವೈದ್ಯರೊಬ್ಬರು ಮೇಜಿನ ಮುಂದೆ ಕುಳಿತು ಏನನ್ನೋ ಸರಸರನೆ ಬರೆಯುತ್ತಿದ್ದರು. ಕೊಠಡಿಯ ಮತ್ತೊಂದು ಕೊನೆಯಲ್ಲಿ ಇಬ್ಬರು ದಾದಿಯರು ಸಿಂಕ್ ಅನ್ನು ತೊಳೆಯುತ್ತಿದ್ದರು ಮತ್ತು ಇತರ ವಸ್ತುಗಳನ್ನು ಶುಚಿಗೊಳಿಸುತ್ತಿದ್ದರು. ಅವರು ಹರಿಯನ್ನು ನೋಡಿ ಕೇಳಿದರು, ''ಏನು? ನಿನಗೇನು ಬೇಕು?''

ಹರಿ ಮೆತ್ತಗೆ ತನ್ನ ತಾಯಿಯ ಹೆಸರು ಕೇಳಿದ. ಅವಳು ಅವರಿಗೆ ಗೊತ್ತೋ ಇಲ್ಲವೋ ಎಂಬ ಶಂಕೆ ಅವನಿಗಿತ್ತು. ಆದರೆ ಅವರಿಗೆ ಕೂಡಲೇ ಗೊತ್ತಾಯಿತು. ಎಷ್ಟಾದರೂ ಅವಳು ಅವರ ಜೊತೆ ಏಳು ತಿಂಗಳಿನಿಂದ ಇದ್ದಳು.

''ಸರಿ, ಸರಿ, ಸರಿ.... ಹೋಗಿ ಆಕೆಯನ್ನು ನೋಡು, ಎರಡನೇ ವಾರ್ಡ್... ನಲವತ್ತೈದನೆ ಹಾಸಿಗೆ'' ದಪ್ಪನೆಯ ನರ್ಸ್, ತನ್ನ ಕನ್ನಡಕದ ಹಿಂದೆ ಮಿನುಗುತ್ತಿದ್ದ ಆತ್ಮೀಯ ಕಣ್ಣುಗಳಿಂದ



ಅವನನ್ನು ನೋಡುತ್ತಾ ಹೇಳಿದಳು.

ಆಗ ವೈದ್ಯರು ಬರೆಯುವುದನ್ನು ನಿಲ್ಲಿಸಿ, ಅವನತ್ತ ನೋಡಿದರು. ''ನೀನು ಯಾರು? ಅವಳ ಹಳ್ಳಿಯಿಂದ ಬಂದಿದ್ದೀಯಾ?''

''ನಾನು ಅವಳ ಮಗ. ಮುಂಬೈನಿಂದ ಬಂದಿದ್ದೇನೆ.'' ಇಷ್ಟು ದಿನ ಏಕೆ ಬರಲಿಲ್ಲ ಎಂಬುದನ್ನು ಮನವರಿಕೆ ಮಾಡಿಕೊಡಲು ಅವನು ಹೇಳಬೇಕಾಯಿತು.

''ಓ, ಮುಂಬೈನಿಂದ? ಅವಳ ಒಬ್ಬ ಮಗ ಮುಂಬೈನಲ್ಲಿದ್ದಾನೆಂದು ಯಾರೂ ನನಗೆ ತಿಳಿಸಲೇ ಇಲ್ಲ'' ವೈದ್ಯರು ಹೇಳಿದರು, ''ಧುಲ್‌ನಿಂದ ಹೆಣ್ಣು ಮಕ್ಕಳು ಮಾತ್ರ ಬರುತ್ತಿದ್ದು-ದನ್ನು ನಾನು ನೋಡಿದ್ದೆ. ದೀಪಾವಳಿಗೆ ಅವಳನ್ನು ಕರೆದುಕೊಂಡು ಹೋಗಲು ಬಂದಿದ್ದೀ ಅಲ್ಲವಾ?''

ಹರಿ ಹೌದೆನ್ನುವಂತೆ ತಲೆಯಾಡಿಸಿದ. ಇದು ಸಾಧ್ಯವೇ ಎಂಬುದನ್ನು ತಿಳಿಯಲು ವೈದ್ಯರ ಮುಖ ನೋಡಿದ.

''ಆಗಲಿ'' ವೈದ್ಯರು ಹೇಳಿದರು, ''ಅವಳೀಗ ಮನೆಗೆ ಹೋಗುವಷ್ಟು ಗುಣವಾಗಿದ್ದಾಳೆ. ಆದರೆ ಪ್ರತಿ ತಿಂಗಳೂ ತಪಾಸಣೆಗಾಗಿ ನೀನು ಅವಳನ್ನು ಇಲ್ಲಿಗೆ ಕರೆತರಬೇಕು. ನಿಮ್ಮ ಹಳ್ಳಿಯ ನಕಲಿ ವೈದ್ಯರ ಕೈಗೆ ಅವಳು ಮತ್ತೆ ಸಿಗುವುದಕ್ಕೆ ಅವಕಾಶ ಕೊಡಬೇಡ. ಅವಳೀಗ ಚೆನ್ನಾಗಿ ಚೇತರಿಸಿಕೊಂಡಿದ್ದಾಳೆ.''

''ಅವಳನ್ನು ಇಲ್ಲಿಗೇ ಕರೆತರುತ್ತಿರುತ್ತೇನೆ'' ಹರಿ ಹೇಳಿದ, ''ನಾನೂ ಮುಂಬೈಗೆ ಮತ್ತೆ ಹೋಗುವುದಿಲ್ಲ. ನಾನು ಈಗ ಇಲ್ಲೇ, ನಮ್ಮ ಗ್ರಾಮದಲ್ಲಿರುತ್ತೇನೆ. ನಾನೇ ಅವಳನ್ನು ಪ್ರತಿ ತಿಂಗಳೂ ಇಲ್ಲಿಗೆ ಕರೆದುಕೊಂಡು ಬರುತ್ತೇನೆ.''

''ನೀನು ಹಾಗೆಯೇ ಮಾಡು'' ವೈದ್ಯರು ಹೇಳಿದರು, ''ಏಕೆಂದರೆ ಅವಳಿಗೆ ಇನ್ನೂ ಆರೈಕೆಯ ಅಗತ್ಯವಿದೆ.'' ನಂತರ ಅವರು ನರ್ಸ್‌ಗಳತ್ತ ತಿರುಗಿ, ಬಿಡುಗಡೆ ಮಾಡುವ ಕಾಗದ ಪತ್ರಗಳ ಬಗ್ಗೆ ನರ್ಸ್‌ಗಳೊಡನೆ ಮಾತನಾಡಿದರು. ಎಲ್ಲ ಕಾಗದಗಳನ್ನೂ ಸಿದ್ಧಪಡಿಸಿದ ಮೇಲೆ, ಹರಿಯನ್ನು ವಾರ್ಡಿಗೆ ಕರೆದೊಯ್ಯಲಾಯಿತು.

ಹರಿಗೆ ತನ್ನ ತಾಯಿಯನ್ನು ಗುರುತು ಹಿಡಿಯುವುದೇ ಕಷ್ಟವಾಯಿತು. ಅವಳು ಹಾಸಿಗೆಯ ಮೇಲೆ ಮಲಗಿ, ಮಾತನಾಡದೆ ಅರೆ ನಿದ್ರೆಯಲ್ಲೇ ಇರುತ್ತಿದ್ದುದನ್ನು ಹರಿ ದೀರ್ಘ ಕಾಲದಿಂದ ನೋಡಿದ್ದ. ಆದರೆ ಈಗ ಹಾಸಿಗೆಯ ತುದಿಯಲ್ಲಿ ಕುಳಿತು ತನ್ನತ್ತ ನೋಡಿ ನಗುತ್ತಿದ್ದ ಹೆಂಗಸು ತನ್ನ ತಾಯಿ ಎಂದು ನಂಬುವುದೇ ಅವನಿಗೆ ಕಷ್ಟವಾಯಿತು. ವರ್ಷಾನುಗಟ್ಟಲೆ ಅವಳಲ್ಲಿ ಮನೆಮಾಡಿದ್ದ ಕಾಯಿಲೆ ಕಣ್ಮರೆಯಾಗಿದ್ದು, ಕಾಯಿಲೆಗೆ ಮುಂಚೆ ಅವಳು ಹೇಗಿದ್ದಳೋ ಅದೇ ರೀತಿ ಮತ್ತೆ ಆಗಿದ್ದಳು. ನಿಜ, ಅವಳ ತಲೆಗೂದಲು ಈಗ ಬೆಳ್ಳಗಾಗಿತ್ತು, ಮುಖದ ಮೇಲೆ ಕೆಲವು ಗೆರೆಗಳು ಮೂಡಿದ್ದವು. ಆದರೆ ಅವಳೀಗ ಸ್ವಲ್ಪ ದಪ್ಪಗಾಗಿದ್ದಳು ಮತ್ತು ಕಣ್ಣುಗಳಲ್ಲಿ ಕಾಂತಿಯಿತ್ತು.

''ಹರಿ! ಹರಿ! ದೀಪಾವಳಿಗಾಗಿ ನೀನು ಮನೆಗೆ ಬಂದೆಯಾ?''

''ಹೌದು, ದೀಪಾವಳಿಗೆ ಮನೆಗೆ ಕರೆದುಕೊಂಡು ಹೋಗಲು ಬಂದಿದ್ದೇನೆ.''

''ಹೌದೇ?'' ಕಾತುರದಿಂದ ಅವಳು ನರ್ಸ್‌ನತ್ತ ನೋಡಿದಳು.

''ಹೌದು, ದೀಪಾವಳಿಯಲ್ಲಿ ನಾವು ನಿನ್ನನ್ನು ಆಸ್ಪತ್ರೆಯಲ್ಲಿ ಇಟ್ಟುಕೊಂಡಿರುವುದಿಲ್ಲ.

ಮನೆಗೆ, ನಿನ್ನ ಮಕ್ಕಳ ಬಳಿಗೆ ಹೋಗುವ ಕಾಲ ಬಂದಿದೆ'' ನರ್ಸ್ ಹೇಳಿದಳು, ''ನಡೆ, ನಿನ್ನ ಸಾಮಾನುಗಳನ್ನು ಪ್ಯಾಕ್ ಮಾಡೋಣ. ಉಡುಪುಗಳು, ನಿನ್ನ ಬಾಚಣಿಗೆ, ಔಷಧಗಳು....''

ಸ್ವಲ್ಪ ಸಮಯದ ನಂತರ ಬಾಗಿಲ ಬಳಿ, ಬಾಡಿಗೆಗೆ ಹಿಡಿದ ಕುದುರೆ ಗಾಡಿಯೊಂದರಲ್ಲಿ ಕೂರಲು, ಹರಿ ಮತ್ತು ಅವನ ತಂದೆ ಅವಳಿಗೆ ಸಹಾಯ ಮಾಡಿದರು. ಬಹಳ ಕಾಲದಿಂದ ನಡೆಯುವ ಅಭ್ಯಾಸವೇ ತಪ್ಪಿಹೋಗಿದ್ದ ಅವಳ ಕಾಲುಗಳು ದುರ್ಬಲಗೊಂಡಿದ್ದವು. ಪ್ರಕಾಶಮಾನವಾದ ಸೂರ್ಯನ ಬೆಳಕಿನಲ್ಲಿ ರಸ್ತೆಯ ಮೇಲೆ ನಡೆಯಬೇಕಾದ ಅವಳಿಗೆ ಗಾಬರಿಯಿಂದ ಮೈ ನಡುಗುತ್ತಿತ್ತು. ಟಾಂಗಾದ ಹಿಂಭಾಗದ ಅಗಲವಾದ ಆಸನದಲ್ಲಿ ಹರಿ ಮತ್ತು ಅವನ ತಂದೆ ಅವಳ ಕೈಗಳನ್ನು ಹಿಡಿದು ಕುಳಿತರು. ನಂತರ ಟಾಂಗಾ ಚಾಲಕ ತನ್ನ ಚಾವಟಿಯಿಂದ ಕುದುರೆಯ ಬೆನ್ನ ಮೇಲೆ ಬಿಗಿದ. ದೀಪಾವಳಿಗಾಗಿ ಅವರನ್ನು ಧುಲ್‌ಗೆ ಒಯ್ಯಲು, ಕುದುರೆ ನಾಗಾಲೋಟದೊಡನೆ ಅವರ ಮನೆಯತ್ತ ಹೊರಟಿತು.

* * *

ಅವರು ಮನೆ ತಲುಪುವ ವೇಳೆಗೆ ಲೀಲ, ಬೇಲ ಮತ್ತು ಕಮಲ ಎಲ್ಲವನ್ನು ಸಿದ್ಧಪಡಿಸಿದ್ದರು. ಹಳದಿ, ಕೆಂಪು ಮತ್ತು ಬಿಳಿ-ಹೀಗೆ ವಿವಿಧ ಬಣ್ಣಗಳಿಂದ ವರಾಂಡದ ನೆಲದ ಮೇಲೆ ಸೊಗಸಾದ ರಂಗೋಲಿಯನ್ನು ಹಾಕಿದ್ದರು. ತೊಲೆಯಿಂದ ಕೆಂಪು ಕಾಗದದ ದೊಡ್ಡ ಲಾಟೀನನ್ನು ತೂಗುಹಾಕಲಾಗಿತ್ತು. ಅದರ ಉದ್ದನೆಯ ಕಾಗದದ ಎಳೆಗಳು ಗಾಳಿಯಲ್ಲಿ ರಪರಪನೆ ಶಬ್ದ ಮಾಡುತ್ತಿದ್ದವು. ಮನೆಯೊಳಗೆ, ಅಡಿಗೆ ಮನೆಯ ಕಪಾಟುಗಳಲ್ಲಿ ದೀಪದ ಹಾಗೆ ಫಳಫಳ ಹೊಳೆಯುವಂತೆ ತೊಳೆದಿದ್ದ ಪಾತ್ರೆಗಳನ್ನೂ, ಲೋಟಗಳನ್ನೂ ಜೋಡಿಸಿಡಲಾಗಿತ್ತು. ಹಬ್ಬದ ಎಲ್ಲ ಸಿಹಿ ತಿಂಡಿಗಳನ್ನೂ ಲೀಲ, ಒಂದು ತಟ್ಟೆಯಲ್ಲಿ ಜೋಡಿಸಿಟ್ಟಿದ್ದಳು. ಹೂರಣ ತುಂಬಿದ ಕರಿಗಡುಬುಗಳು, ಬೇಸನ್ ಲಾಡುಗಳು, ಕುಂಬಳ ಕಾಯಿಂದ ಮಾಡಿದ ಸ್ಫಟಿಕಾಕಾರದ ಚೂರುಗಳು, ದ್ರಾಕ್ಷಿ ಮತ್ತು ಗೋಡಂಬಿ ಹಾಕಿ ತಯಾರಿಸಿದ ಹಲ್ವಾ ಇತ್ಯಾದಿ. ಹರಿ, ತನ್ನ ತಂದೆ-ತಾಯಿಯರೊಡನೆ ಬಂದಾಗ ಲೀಲ ಕಾದ ಎಣ್ಣೆಯ ಬಾಣಲೆಯಲ್ಲಿ ಕೆಂಪಗೆ ಗುಂಡು ಗುಂಡಾಗಿದ್ದ ಜಿಲೇಬಿಗಳನ್ನು ಕರಿದು, ಸಕ್ಕರೆಯ ಪಾಕದಲ್ಲಿ ಮುಳುಗಿಸುತ್ತಿದ್ದಳು.

ಗುಲಾಬಿ ಮತ್ತು ಚೆಂಡು ಹೂಗಳಿಂದ ಕಟ್ಟಿದ ಹಾರಗಳನ್ನು, ಬೇಲ ಮತ್ತು ಕಮಲ, ತಮ್ಮ ತಾಯಿಗಾಗಿ ಸಿದ್ಧಪಡಿಸಿದ್ದರು. ಅವಳಿಗೆ ಆ ಹಾರಗಳನ್ನು ಹಾಕುತ್ತಿದ್ದಂತೆ, ಮಕ್ಕಳು ನಗುತ್ತಾ ಹರ್ಷೋದ್ಗಾರ ಮಾಡಿದರು. ಅವರ ತಾಯಿಯೂ ಸಂತೋಷದಿಂದ ನಗುತ್ತಿದ್ದಳು. ಈ ದೃಶ್ಯವನ್ನು ನೋಡಿ, ಅವರ ತಂದೆಯು ಮಾತ್ರ ಮೌನವಾಗಿ ಅಳಲಾರಂಭಿಸಿದ್ದ. ತಾಯಿಯು ಅಡಿಗೆ ಮನೆಯ ಮೂಲೆಯಲ್ಲಿದ್ದ ಗೂಡಿನತ್ತ ಹೋದಳು. ಅದರೊಳಗಿದ್ದ ಗಣೇಶ ಮತ್ತು ಲಕ್ಷ್ಮಿಯ ಮಣ್ಣಿನ ಮೂರ್ತಿಗಳ ಮುಂದೆ ಊದುಕಡ್ಡಿಗಳನ್ನು ಹಚ್ಚಿಡಲಾಗಿತ್ತು. ಅವಳು ದೇವರಿಗೆ ಮಾಲೆಯನ್ನು ಅರ್ಪಿಸಿ, ಕೃತಜ್ಞತಾ ಸೂಚಕವಾಗಿ ಪ್ರಾರ್ಥನೆ ಸಲ್ಲಿಸಿದಳು.

ಸಂಜೆ, ವರಾಂಡದ ಉದ್ದಕ್ಕೂ ಸಾಲುಗಳಲ್ಲಿ, ತಗ್ಗಾದ ಗೋಡೆಗಳ ಮೇಲೆ, ಉದ್ಯಾನದ ಮರಗಳು ಮತ್ತು ಪೊದೆಗಳಿಗೆ ಹೋಗುವ ಮಾರ್ಗದಲ್ಲಿ ಸುತ್ತಲೂ ಮಣ್ಣಿನ ಹಣತೆಗಳನ್ನು ಹಚ್ಚಿಡುವಲ್ಲಿ ಹರಿ, ತನ್ನ ಸೋದರಿಯರಿಗೆ ಸಹಾಯ ಮಾಡಿದ. ಅವರು ಹತ್ತಿಯಿಂದ

ಬತ್ತಿಗಳನ್ನು ಮಾಡಿ,ತುದಿಯನ್ನು ಚೆನ್ನಾಗಿ ಹೊಸೆದು, ದಪ್ಪನೆಯ ಭಾಗವನ್ನು ಎಣ್ಣೆಯಲ್ಲಿ ಮುಳುಗಿಸಿದರು. ಹರಿ ಮೋಂಬತ್ತಿಯನ್ನು ಹಿಡಿದಿದ್ದ ಹಣತೆಗಳನ್ನು ಹಚ್ಚಿದ. ಕತ್ತಲೆಯಲ್ಲಿ ಹೊಂಬಣ್ಣದ ಆ ಬೆಳಕು ಜೀವನವನ್ನು ಉಲ್ಲಾಸಗೊಳಿಸಿತು.

ನಂತರ ಹರಿ, ಪಟಾಕಿ, ಬಾಣ ಬಿರುಸುಗಳ ಬುಟ್ಟಿಯನ್ನು ಹಿಡಿದು ತೆಂಗಿನ ತೋಟದ ಹುಲ್ಲಿನ ದಿಣ್ಣೆಯ ಮೇಲೆ ಹೋದ. ಬೇಲ ಮತ್ತು ಕಮಲ ಉದ್ವೇಗದಿಂದ ಕೂಗುತ್ತಿದ್ದಂತೆ ರಾಕೆಟ್ಟೊಂದನ್ನು ಆಕಾಶದತ್ತ ಹಾರಿಸಿದ. ಅದು ಮೇಲೆ ಶಬ್ದ ಮಾಡಿಕೊಂಡು ಆಸ್ಫೋಟಿಸಿ ಬಣ್ಣ ಬಣ್ಣದ ಹೂಮಳೆಗರೆಯಿತು. ಸೋದರಿಯರಿಬ್ಬರೂ, ಹರಿ ಕೈಯಲ್ಲಿ ಅವರಿಗಾಗಿ ಹಿಡಿದಿದ್ದ ಮೋಂಬತ್ತಿಯಲ್ಲಿ ಹೂಬಾಣಗಳನ್ನೂ ಹೊತ್ತಿಸಿ, ಅದನ್ನು ತಿರುಗಿಸುತ್ತಾ ತೆಂಗಿನ ತೋಟದ ಸುತ್ತ ಓಡಿದರು. ಅವು ಕತ್ತಲೆಯಲ್ಲಿ ವಿವಿಧ ವಿನ್ಯಾಸಗಳನ್ನು ತೋರಿಸಿದವು. ಅನಂತರ, ಬೆಳ್ಳಿಯ ಲೇಪವನ್ನು ಹಚ್ಚಿದ ಚಿಕ್ಕ ಬಾಯಿಯ ದಾಳಿಂಬೆಯಾಕಾರದ ಕುಡುಕೆಯ ತುದಿಗೆ, ಲೀಲ ಬಗ್ಗಿ, ಮೋಂಬತ್ತಿಯಿಂದ ಹಚ್ಚಿದಳು. ಅದು ಬುರ್ರನೆ ಹತ್ತಿಕೊಂಡು ಚಿನ್ನ ಮತ್ತು ಬೆಳ್ಳಿಯ ನಕ್ಷತ್ರಗಳನ್ನು ಉಗುಳುತ್ತಾ ಕಾರಂಜಿಯಂತೆ ತೆಂಗಿನ ಮರದ ಎತ್ತರದಷ್ಟು ಏರಿ ಹೂಮಳೆಗರೆಯುತ್ತಾ ಕೆಳಗೆ ಬಿದ್ದಿತು. ಬೇಲ ಮತ್ತು ಕಮಲ ವರಾಂಡದ ನಯವಾದ ನೆಲದ ಮೇಲೆ ಭೂಚಕ್ರವನ್ನೂ ಹಚ್ಚಿದರು. ಅವು ಬಿಸಿ ಕೆಂಡಗಳನ್ನು ಕಾರುತ್ತಾ ವೇಗವಾಗಿ ತಿರುಗಲಾರಂಭಿಸಿದವು. ಹರಿ, ಅವುಗಳ ಮೇಲೆ ಹಾರಿ, ಅದನ್ನು ಒದ್ದಾಗ ಅವು ತಮ್ಮ ದಿಕ್ಕನ್ನು ಬದಲಿಸಿ ತಿರುಗಿದವು. ಲೀಲ ಮತ್ತು ಅವನ ತಾಯಿ ಹುಷಾರಾಗಿರುವಂತೆ ಅವನನ್ನು ಎಚ್ಚರಿಸಿದರು. ಆಗ ಅವನು ಮತ್ತೆ ಹುಲ್ಲಿನ ದಿಬ್ಬಕ್ಕೆ ಹೋಗಿ, ಇನ್ನೂ ಹೆಚ್ಚು ರಾಕೆಟ್‌ಗಳನ್ನು ಹಚ್ಚಿದ. ಒಂದು ರಾಕೆಟ್ ಆಕಾಶದಲ್ಲಿ ಹಾರಿ, ಆಸ್ಫೋಟಿಸಿ ನಕ್ಷತ್ರಗಳ ಪುಂಜವನ್ನೇ ಸೃಷ್ಟಿಸಿತು. ಒಂದರ ನಂತರ ಮತ್ತೊಂದು ರಾಕೆಟ್ ಹಚ್ಚುತ್ತಿದ್ದ.

ಬುಟ್ಟಿಯಲ್ಲಿನ ಬಾಣ ಬಿರುಸುಗಳನ್ನೆಲ್ಲಾ ಅವನು ಹಚ್ಚಿ ಮುಗಿಸಿದ ಮೇಲೆ, ಬೇಲ ಮತ್ತು ಕಮಲ ವಿಷಾದದಿಂದ ಹೇಳಿದರು, ''ಓ, ಎಷ್ಟು ಬೇಗ ಅವೆಲ್ಲಾ ಮುಗಿದು ಹೋದವು.'' ಹರಿ ಹೇಳಿದ, ''ಈಗ ಮರಳ ದಂಡೆಗೆ ಹೋಗಿ ಉತ್ಸವಾಗ್ನಿಯನ್ನು ಹಚ್ಚೋಣ.'' ಆಗ ಅವರು ನಗುತ್ತಾ, ಚಪ್ಪಾಳೆ ತಟ್ಟುತ್ತಾ ಕತ್ತಲೆಯ ಹಾದಿಯಲ್ಲಿ ಅವನ ಹಿಂದೆ ಮರಳ ದಂಡೆಗೆ ಓಡಿದರು. ಒಣಗಿದ ತೆಂಗಿನ ಸೋಗೆಯನ್ನು ಹಚ್ಚಿ, ಅದರ ಬೆಳಕಿನಿಂದ ಹರಿ ಅವರಿಗೆ ದಾರಿ ತೋರಿದ. ಲೀಲ, ತನ್ನ ತಂದೆ-ತಾಯಿಯರ ಜೊತೆ ವರಾಂಡದಲ್ಲೇ ನಿಂತಳು. ''ನಾವು ಇಲ್ಲಿಂದಲೇ ನೋಡುತ್ತೇವೆ. ಮರಳ ದಂಡೆಯ ಮೇಲೆ ಬೀಸುವ ತಣ್ಣನೆಯ ಬಿರುಸಾದ ಗಾಳಿಯನ್ನು ಅಮ್ಮ ಸಹಿಸಲಾರಳು'' ಎಂದು ಅವಳು ಹೇಳಿದಳು.

ಹರಿ, ಬೇಲ ಮತ್ತು ಕಮಲ, ತಣ್ಣನೆಯ ಮರಳ ಮೇಲೆ ಬಗ್ಗಿ ಕುಳಿತು ಒಣಗಿದ ತೆಂಗಿನ ಗರಿಗಳನ್ನೂ, ಕೊಂಬೆಗಳನ್ನೂ ಹುಷಾರಾಗಿ ಗೋಪುರದಂತೆ ಜೋಡಿಸಿದರು. ನಂತರ ಹರಿ ಅದಕ್ಕೆ ಬೆಂಕಿ ಹಚ್ಚಿದ. ಸಿಡಿದು ಉರಿಯುತ್ತಿದ್ದ ಬೆಂಕಿಯ ಜ್ವಾಲೆಯಿಂದ ಸ್ವಲ್ಪ ಹಿಂದೆ ನಿಂತು ಅವರು ನೋಡುತ್ತಿದ್ದರು. ಗರಿಗಳೂ, ಕೊಂಬೆಗಳೂ, ಬೇಗ ಉರಿದವು. ಗೋಪುರವು ಕೆಂಡವಾಗಿ ಬೂದಿಯಾಗಿ ಕುಸಿಯಿತು. ರಾತ್ರಿಯ ಕತ್ತಲೆ ಕವಿಯಿತು. ಆಕಾಶ, ಮರಳು ಮತ್ತು ಸಮುದ್ರ -ಎಲ್ಲವೂ ಗಾಢವಾಗಿ ಆ ಕಡುಗತ್ತಲಲ್ಲಿ ಮುಳುಗಿದಂತೆ ತೋರುತ್ತಿತ್ತು. ಆದರೆ, ಕತ್ತಲೆಗೆ ಅವರ ಕಣ್ಣುಗಳು ಹೊಂದಿಕೊಂಡ ಮೇಲೆ, ಕಡಲಿನಿಂದ ತಮ್ಮತ್ತ ಪಿಸು

ಮಾತನಾಡಿಕೊಂಡು ಬರುತ್ತಿರುವಂತೆ ತೋರುತ್ತಿದ್ದ ತೆರೆಗಳ ಮೇಲಿನ ಬಿಳಿ ರೇಖೆಯನ್ನು ಅವರು ನೋಡುತ್ತಿದ್ದರು. ನಿಜ, ಆಕಾಶದಲ್ಲಿ ಮೂಡಿದ್ದ ಲಕ್ಷಾಂತರ ನಕ್ಷತ್ರಗಳು ಉಜ್ವಲವಾಗಿ ಮತ್ತು ಶಾಂತವಾಗಿ ಮಿನುಗುತ್ತಿದ್ದವು.

* * *

''ಬನ್ನಿ, ವಾಪಸ್ ಹೋಗಿ ಅಮ್ಮನ ಜೊತೆ ಕುಳಿತುಕೊಳ್ಳೋಣ'' ಉರಿಯುತ್ತಿದ್ದ ಕೊಂಬೆಗಳಲ್ಲಿ ಕೊನೆಯದು ಬೂದಿಯಾಗಿ ಕುಸಿದಾಗ, ಹರಿ ಹೇಳಿದ.

''ಅಮ್ಮ ನಮಗೆ ದೀಪಾವಳಿಯ ಕಥೆಯನ್ನು ಹೇಳುತ್ತಾಳೆ'' ತುಂಬಾ ವರ್ಷಗಳಿಂದ, ಏಕೆ, ತಾನು ಮಗುವಾಗಿದ್ದಾಗಿನಿಂದಲೂ ಆಚರಿಸುತ್ತಿದ್ದ ಈ ಸಂಪ್ರದಾಯವನ್ನು ಹಠಾತ್ತನೆ ನೆನಪಿಗೆ ತಂದುಕೊಂಡು ಬೇಲ ಹೇಳಿದಳು.

ಅವರು ಮನೆಯ ವರಾಂಡಕ್ಕೆ ಹಿಂದಿರುಗಿದರು. ಗುಲಾಬಿ ಬಣ್ಣದ ಕಾಗದದ ಲಾಟೀನು ಇನ್ನೂ ಉರಿಯುತ್ತಿತ್ತು. ಅವರು ಅಮ್ಮನ ಬಳಿ ಕುಳಿತರು. ಅವಳು ದೀಪಾವಳಿಯ ಕಥೆಯನ್ನು ಹೇಳಲಾರಂಭಿಸಿದಳು. ಅಯೋಧ್ಯೆಯ ರಾಜಕುಮಾರ ರಾಮನು, ಅರಣ್ಯದಲ್ಲಿ ತನ್ನ ಪತ್ನಿ ಸೀತೆಯನ್ನು ಅಪಹರಿಸಿಕೊಂಡು ಹೋಗಿದ್ದ ಲಂಕೆಯ ರಾಕ್ಷಸ ದೊರೆ ರಾವಣನೊಡನೆ, ಘೋರ ಯುದ್ಧವನ್ನು, ಮಾಡಿ ಅವರು ವಿಜಯೋತ್ಸಾಹದೊಡನೆ ಅಯೋಧ್ಯೆಗೆ ಹಿಂದಿರುಗಿದಾಗ, ಅವರನ್ನು ಸ್ವಾಗತಿಸಲು ಇಡೀ ನಗರಕ್ಕೇ ಹೇಗೆ ದೀಪಾಲಂಕಾರ ಮಾಡಲಾಗಿತ್ತೆಂಬುದನ್ನು ವಿವರಿಸಿದಳು.

''ಆದ್ದರಿದಲೇ ದೀಪಾವಳಿಯ ದಿನ ನಮ್ಮ ಮನೆಗಳನ್ನು ಬೆಳಗಿಸುತ್ತೇವೆ'' ಎಂದು ಬೇಲ ತನ್ನ ತಾಯಿ, ಕಥೆಯ ಮುಕ್ತಾಯದ ಸಮಯದಲ್ಲಿ ಸದಾ ಹೇಳುತ್ತಿದ್ದ ವಾಕ್ಯವನ್ನು ಉಚ್ಚರಿಸಿದಳು.

''ಹೌದು'' ಅಮ್ಮ ಹೇಳಿದಳು, ''ಅಲ್ಲದೆ, ದೀಪಗಳು ಸಂಪತ್ತಿನ ದೇವತೆಯಾದ ಲಕ್ಷ್ಮಿಗೆ ದಾರಿ ತೋರುತ್ತವೆ. ಆದ್ದರಿಂದ ಅವಳು ನಮ್ಮ ಮನೆಗಳಿಗೂ ಭೇಟಿ ಕೊಡುತ್ತಾಳೆ. ಕತ್ತಲೆಯಲ್ಲಿ ದಾರಿ ತಪ್ಪದಂತೆ ದೀಪವು ಮಾರ್ಗ ತೋರುತ್ತದೆ.''

''ಅಮ್ಮ, ನಮ್ಮ ಮನೆಗೆ ಸಂಪತ್ತು ತಂದಿರುವುದು, ನಮ್ಮ ಹರಿ '' ಎಂದು ಕಮಲ ಗಂಭೀರವಾಗಿ ಹೇಳಿ, ಅವನ ಕೈಗಳನ್ನು ತಟ್ಟಿ, ಅವನು ಹೆಮ್ಮೆಯಿಂದ ಬೀಗುವಂತೆ ಮಾಡಿದಳು.

''ನೀವೆಲ್ಲರೂ ನನ್ನ ಪಕ್ಕದಲ್ಲಿರುವುದೇ ನನಗೆ ದೊಡ್ಡ ಸಂಪತ್ತು'' ಎಂದು ಅಮ್ಮ ಮೆತ್ತಗೆ ಹೇಳಿದಳು.

ಅವರೆಲ್ಲಾ ಮೌನವಾಗಿ ಕುಳಿತು ತೆಂಗಿನ ಮರಗಳಲ್ಲಿ ಗಾಳಿ ಬೀಸುತ್ತಿದ್ದ ಮತ್ತು ಅಲೆಗಳು ದಡಕ್ಕೆ ಬಡಿದು ನೊರೆಯೆಬ್ಬಿಸುತ್ತಿದ್ದ ಸದ್ದನ್ನು ಕೇಳುತ್ತಿದ್ದರು. ನಂತರ ನಕ್ಷತ್ರಗಳು ಬೆಳಗುತ್ತಿದ್ದುದನ್ನೂ ನೋಡುತ್ತಿದ್ದರು. ನಂತರ ಅವರ ಅಪ್ಪ ಕೆಮ್ಮಿದ, ಗಂಟಲು ಸರಿಪಡಿಸಿಕೊಂಡ ಮತ್ತು ಮೊದಲ ಸಲ ತನ್ನ ಕುಂದಿದ ಧ್ವನಿಯಲ್ಲಿ, '' ನಮ್ಮ ಪಿಂಟೊ ಮಾತ್ರ ನಮ್ಮ ಜೊತೆ ಇಲ್ಲ'' ಎಂದು ಹೇಳಿದಾಗ, ಅವರೆಲ್ಲಾ ತುಂಬ ಬೇಸರಗೊಂಡರು. ''ಪಾಪ, ಪಿಂಟೊ!'' ಎಂದು ಅವನು ಮೆಲ್ಲಗೆ ಹೇಳಿ, ಮೌನಿಯಾದ. ಅವನು ಹೆಚ್ಚಾಗಿ ಏನೂ ಹೇಳದಿದ್ದರೂ, ಪಿಂಟೊವಿನ ಸಾವಿಗೆ ತಾನೇ ಹೊಣೆಗಾರನೆಂದು ಅವನು ವಿಷಾದಿಸುತ್ತಿರುವ-

ನೆಂದು ಅವರೆಲ್ಲ ಅರಿತರು. ಹಿಂದೆ ಯಾವ ಸಂದರ್ಭದಲ್ಲೂ ಹೀಗೆ ವಿಷಾದಿಸಿರಲಿಲ್ಲ. ಅವರೆಲ್ಲಾ ಮೌನದಿಂದ ಕುಳಿತರು. ಕೊನೆಗೆ ಲೀಲ ತನ್ನ ಸೆರಗಿನ ತುದಿಯಿಂದ ಕಣ್ಣನ್ನು ಒರಸಿಕೊಳ್ಳುತ್ತಾ ಎದ್ದು, ತಂದೆಯನ್ನು ಸಂತೈಸಲು, ''ನಿಮಗೆ ಸ್ವಲ್ಪ ಬಿಸಿ ಚಹಾ ಮಾಡಲೆ?'' ಎಂದು ಕೇಳಿದಳು. ಅವನು ಬೇಡವೆಂದು ತಲೆಯಾಡಿಸಿದ. ಇತರರೂ ಹಾಗೆಯೇ ಮಾಡಿದರು. ಆಗ ಅವನಿಗೆ ಮತ್ತೇನೂ ಬೇಕಾಗಿರಲಿಲ್ಲ.

* * *

ದೀಪಾವಳಿಯ ಮಾರನೆ ದಿನ ಹೊಸ ವರ್ಷದ ದಿನ. ಅಂದು ಗ್ರಾಮದ ಪ್ರತಿ ಮನೆಯನ್ನೂ ಮಾವಿನ ಎಲೆಗಳ ತೋರಣಗಳಿಂದ, ಮಲ್ಲಿಗೆಯ ಮಾಲೆಗಳಿಂದ ಅಲಂಕರಿಸುತ್ತಾರೆ. ಅಂದು ವಿಶೇಷ ಸಮಾರಂಭ. ಪ್ರತಿ ಅಂಗಡಿಯೂ ಹೊಸ ಲೆಕ್ಕದ ಪುಸ್ತಕವನ್ನು ತೆರೆಯುತ್ತದೆ. ಮುಂಬರುವ ವರ್ಷದಲ್ಲಿ ಸಂಪತ್ತಿನ ದೇವತೆ ಲಕ್ಷ್ಮಿಯ ಕೃಪಾಕಟಾಕ್ಷ ತಮ್ಮ ಮೇಲೆ ಇರಲೆಂದು ಕೋರಿ ವ್ಯಾಪಾರಿಗಳು ಪೂಜೆ ಸಲ್ಲಿಸುತ್ತಾರೆ.

ಆದ್ದರಿಂದ ಮಾರನೆಯ ಬೆಳಗ್ಗೆ ಲೀಲ ಮತ್ತು ಅವಳ ತಂಗಿಯರು ಮನೆಯನ್ನು ಗುಡಿಸಿ, ಸಾರಿಸಿ, ಹೊಸ ಮಾಲೆಗಳಿಂದ ಅಲಂಕರಿಸಿದರು. ವಿವಿಧ ವಿನ್ಯಾಸಗಳಲ್ಲಿ ರಂಗೋಲಿಯನ್ನು ಹಾಕಿದರು. ಅಂದು ಸಂಜೆ ಮರಳು ದಂಡೆಯ ಮೇಲೆ ವಾರ್ಷಿಕ ಎತ್ತಿನ ಗಾಡಿಗಳ ಓಟದ



ಸ್ಪರ್ಧೆ ನಡೆಯುತ್ತದೆ. ಆ ಸಂದರ್ಭದಲ್ಲಿ ಎತ್ತುಗಳ ಬಾಗಿದ ಕೊಂಬುಗಳಿಗೆ ಕಂಡುಗೆಂಪು ಬಣ್ಣವನ್ನು ಬಳಿದು ಶೃಂಗರಿಸಲಾಗುವುದು. ಇಡೀ ಗ್ರಾಮದಲ್ಲೇ ಅಮಿತ ಉತ್ಸಾಹ ಮತ್ತು ಗದ್ದಲ ಕಂಡು ಬರುತ್ತದೆ. ಅಂದು ಟಾಂಗಾ ಚಾಲಕರೂ ಗುನ್ನಂಪಟ್ಟೆ ಕಾಗದಗಳಿಂದ ಮತ್ತು ಉದ್ದನೆಯ ಬಾವುಟಗಳಿಂದ ಟಾಂಗಾಗಳನ್ನು ಅಲಂಕರಿಸುವರು. ತಮ್ಮ ಕುದುರೆಗಳಿಗೆ ಮಾಲೀಸು ಮಾಡಿ, ಚೆನ್ನಾಗಿ ಬ್ರಷ್ ಮಾಡುತ್ತಾರೆ. ಚಮಕಿಗಳಿಂದ ಲಗಾಮುಗಳನ್ನು ಅಲಂಕರಿಸುತ್ತಾರೆ.

ಹರಿಗೆ ಮಾತ್ರ ಮಾಡಲೇನೂ ಕೆಲಸವಿರಲಿಲ್ಲ. ಇತರರು ಮಾಡುತ್ತಿದ್ದ ಕೆಲಸವನ್ನು ಅವನು ಸ್ವಲ್ಪ ಸಮಯ ಗಮನಿಸಿ, ನಂತರ ಹೇಳಿದ, ''ನನಗೀಗ ಇಲ್ಲಿ ಮಾಡಲು ಯಾವ ಕೆಲಸವೂ ಇಲ್ಲ. ಆದ್ದರಿಂದ ಬಂಗಲೆಗೆ ಹೋಗಿ, ಸಾಹೇಬರನ್ನು ಕಂಡು ಬರುತ್ತೇನೆ.''

''ಆಗಲಿ, ಆದರೆ ಬೇಗ ಬಾ'' ವರಾಂಡದ ನೆಲದ ಮೇಲೆ ಕುಳಿತು, ರಂಗೋಲಿ ಇಡುವಲ್ಲಿ ಲೀಲಳಿಗೆ ಸಹಾಯ ಮಾಡುತ್ತಿದ್ದ ಅವನ ತಾಯಿ ಹೇಳಿದಳು.

''ಹರಿ, ನೀನು ಮರಳ ದಂಡೆಯಲ್ಲಿ ನಡೆಯುವ ಓಟದ ಸ್ಪರ್ಧೆ ನೋಡಲು ಕರೆದುಕೊಂಡು ಹೋಗುವೆ ಎಂದು ಹೇಳಿದ್ದೆ'' ಕೊರಕಲ ಮೇಲಿನ ದಿಮ್ಮಿಯನ್ನು ದಾಟುತ್ತಿದ್ದ ಹರಿಯನ್ನು ನೋಡಿ ಅವನ ತಂಗಿಯರು ಕೂಗಿ ಹೇಳಿದರು.

* * *

ಹರಿ 'ಮೊನ್ ರಿಪೋಸ್'ಗೆ ಹೋದಾಗ, ಲೀಲ ಆ ಮನೆಯನ್ನು ಆಗಲೇ ಶುಚಿಗೊಳಿಸಿ, ವರಾಂಡದ ಚದುರ ಬಿಲ್ಲೆಗಳ ಮೇಲೆ ಸರಳವಾಗಿ ಕೆಂಪು ಮತ್ತು ಬಿಳಿಯ ರಂಗೋಲಿ ಇಟ್ಟಿದ್ದನ್ನೂ, ತಂಗಿಯರು ಬಾಗಿಲ ಮೇಲೆ ಮಾವಿನಸೊಪ್ಪಿನ ತೋರಣ ಕಟ್ಟಿದ್ದನ್ನೂ ನೋಡಿದ. ಆಗ ಅಲ್ಲಿ ಯಾರೂ ಇರಲಿಲ್ಲ. ಮನೆ ತುಂಬ ಶಾಂತವಾಗಿತ್ತು. ಹರಿ ಅಲ್ಲೇ ಸುತ್ತಮುತ್ತ ಓಡಾಡುತ್ತಾ ನೋಡುತ್ತಿದ್ದಾಗ, ಜವುಗು ಪ್ರದೇಶದ ಅಂಚಿನಲ್ಲಿ ಜೊಂಡಿನ ಬಳಿ ಕುಳಿತಿದ್ದ ಸಾಹೇಬ್, ಅವನ ಕಣ್ಣಿಗೆ ಬಿದ್ದ. ಕಲ್ಲಿನ ಮೇಲೆ ಕುಳಿತ ಕ್ರೌಂಚ ಪಕ್ಷಿಯಂತೆ ಅವನು ಸ್ಥಿರನಾಗಿ ಕುಳಿತಿದ್ದ. ಎದುರು ದಂಡೆಯ ಮೇಲಿನ ತೆಂಗಿನ ಮರದತ್ತ ಅವನು ತನ್ನ ದುರ್ಬೀನು ಹಿಡಿದು ತದೇಕ ಚಿತ್ತನಾಗಿ ನೋಡುತ್ತಿದ್ದ.

ಹರಿಯ ಹೆಜ್ಜೆಯ ಸಪ್ಪಳ ಕೇಳಿ, ಅವನು ತನ್ನ ತಲೆಯನ್ನು ಸ್ವಲ್ಪ ತಿರುಗಿಸಿದ. ಆದರೆ ಮಾತನಾಡಲಿಲ್ಲ. ಹರಿ, ಸ್ವಲ್ಪ ಹಿಂಜರಿದ. ಈ ಮನುಷ್ಯನನ್ನು ಹಿಂದೆ ಎಲ್ಲಿ ನೋಡಿದ್ದೆ ಎಂದು ಯೋಚಿಸಲಾರಂಭಿಸಿದ. ತನ್ನ ಸೋದರಿಯರು ತಿಳಿಸಿದಂತೆ ಅವನು ಮುಂಬೈನಿಂದ ಬಂದವನಾದ್ದರಿಂದ, ಏನಾದರೂ ಸೂಚನೆ ಸಿಗುವುದೋ ಎಂದು ಮುಂಬೈನಲ್ಲಿನ ತನ್ನ ನೆನಪುಗಳನ್ನು ಅವನು ಕೆದಕುತ್ತಿದ್ದ. ಆದರೆ ಅವನಿಗೆ ನೆನಪು ಬರಲಿಲ್ಲ.

''ನಾನು ನಿಮಗೆ ಅಡ್ಡಿ ಮಾಡುತ್ತಿರುವೆನ, ಸರ್! ಆಮೇಲ ಬರಲ!'' ಹರಿ ಅಳುಕುತ್ತಾ ಕೇಳಿದ.

ಇದಕ್ಕೆ ಉತ್ತರವಾಗಿ ತನ್ನ ಪಕ್ಕದಲ್ಲಿ ನೆಲವನ್ನು ತಟ್ಟಿ ಕೂರುವಂತೆ ತೋರಿಸಿ, ಅವನು ಹೇಳಿದ, ''ನೀನು ನನ್ನ ಜೊತೆ ಮಾತನಾಡಬೇಕಾ? ಕುಳಿತುಕೊ. ಆಗ ನಾವು ಪಕ್ಷಿಗಳಿಗೆ ಅಡ್ಡಿ ಮಾಡಿದಂತಾಗುವುದಿಲ್ಲ.''

ಸಾಹೇಬರು ಪಕ್ಷಿಗಳ ಅಧ್ಯಯನ ನಡೆಸುತ್ತಿದ್ದಾರೆಂದು ತನ್ನ ಸೋದರಿಯರು ಹೇಳಿದ್ದು

ಹರಿಗೆ ಗೊತ್ತಿತ್ತು. ಆದರೆ ಯಾರು ತಾನೆ ಹೀಗೆ ಇಂತಹ ಅಧ್ಯಯನ ನಡೆಸಬಲ್ಲರು ಎಂಬುದು ಅವನ ಅರಿವಿಗೆ ಬಂದಿರಲಿಲ್ಲ. ಈಗ ಅವನು ಅದನ್ನು ಕಲಿಯಬೇಕು. ತನಗೆ ಸಾಧ್ಯವಾದದ್ದನ್ನೆಲ್ಲಾ ಕಲಿಯುತ್ತಲೇ ಇರಬೇಕೇ ವಿನಹ, ಎಂದೂ ನಿಲ್ಲಿಸಬಾರದು ಎಂದು ಪಾನ್‌ವಾಲಾ ಹೇಳಿದ್ದನ್ನು ಹರಿ ನೆನಪಿಗೆ ತಂದುಕೊಳ್ಳುತ್ತಿದ್ದ. ಈ ಮನುಷ್ಯನ ಟೋಪಿಯ ಕೆಳಗಿದ್ದ ಬಿಳಿ ಕೂದಲು ಮತ್ತು ಗಡ್ಡವನ್ನು ಬಿಟ್ಟರೆ, ಇವನಿಗೂ, ಪಾನ್‌ವಾಲಾನಿಗೂ ಸಾಮ್ಯತೆ ಇರುವುದಾಗಿ ಭಾವಿಸಿದ. ಅವರಿಬ್ಬರೂ ಸುಮಾರು ಪಕ್ಷಿಗಳಂತೆಯೇ ಇದ್ದರು. ಇದು ಅವನಲ್ಲಿ ವಿಶ್ವಾಸವನ್ನೂ, ಭರವಸೆಯನ್ನೂ ಮೂಡಿಸಿತು. ಅವನು ಗೌರವಪೂರ್ವಕವಾಗಿ ಕೇಳಿದ, "ಸರ್, ನೀವು ಇಲ್ಲಿ ಪಕ್ಷಿಗಳ ಅಧ್ಯಯನ ಮಾಡುತ್ತಿದ್ದೀರಾ?"

"ಗೀಜಗನ ಹಕ್ಕಿ ಗೂಡುಕಟ್ಟುವ ಹವ್ಯಾಸವನ್ನು ಕುರಿತು ನಾನು ಅಧ್ಯಯನ ನಡೆಸುತ್ತಿದ್ದೇನೆ" ಎಂದು ಹೇಳಿ ಜವುಗು ಪ್ರದೇಶದತ್ತ ವಾಲಿದ್ದ ತೆಂಗಿನ ಮರದಿಂದ ಇಳಿಬಿದ್ದು, ತೂಗಾಡುತ್ತಿದ್ದ ಗೂಡುಗಳತ್ತ ಕೈ ತೋರಿಸಿದ."ಇಡೀ ಮಳೆಗಾಲ ನಾನು ಅವುಗಳನ್ನು ಗಮನಿಸಿದೆ. ಈಗ ಅವು ತಮ್ಮ ಮರಿಗಳನ್ನು ಸಾಕುತ್ತಾ ಅವುಗಳಿಗೆ ಶಿಕ್ಷಣ ನೀಡುತ್ತಿವೆ" ಎಂದು ಅವನು ಉತ್ಸಾಹದ ದನಿಯಲ್ಲಿ ಹೇಳಿ, ಮತ್ತೆ ವೀಕ್ಷಿಸಲು ಅತ್ತ ತಿರುಗಿದ.

ಹರಿಗೂ ಅದನ್ನು ನೋಡುವುದು ಬಿಟ್ಟು ಅನ್ಯ ಮಾರ್ಗವಿರಲಿಲ್ಲ. ಹಿಂದೆ ಯಾವಾಗಲೂ ಪಕ್ಷಿಗಳ ಬಗ್ಗೆ ಅವನು ಇಷ್ಟು ಗಮನ ಕೊಟ್ಟಿರಲಿಲ್ಲ. ಅಲ್ಲದೆ ಗೀಜಗನ ಹಕ್ಕಿಗಳು ಮಿಂಚುಳ್ಳಿಯಂತೆ, ಇಲ್ಲಿನ ಹೇರಾನ್ ಪಕ್ಷಿಗಳಂತೆ ಸುಂದರವಾಗಿಯೂ ಇರಲಿಲ್ಲ. ಅವು ಗುಬ್ಬಚ್ಚಿಗಳಂತೆ ಚಿಕ್ಕ ಗಾತ್ರದಲ್ಲಿದ್ದು ಕಂದು ಬಣ್ಣದ ಚುಕ್ಕೆಗಳನ್ನು ಹೊಂದಿದ್ದವು. ಅವುಗಳಲ್ಲಿ ಕೆಲವು ಹಳದಿ ಬಣ್ಣದ ತಲೆಗಳನ್ನು ಹೊಂದಿದ್ದವು. ವಿಧಿಯಿಲ್ಲದೆ ಹರಿ ಅವುಗಳನ್ನೇ ನೋಡುತ್ತಿದ್ದಾಗ, ನೀರಿನ ಮೇಲೆ ತೂಗಾಡುತ್ತಿದ್ದ ಗೂಡುಗಳ ಜಾಲವನ್ನೇ ನಿರ್ಮಿಸಿರುವ ಈ ಸಣ್ಣ ಪಕ್ಷಿಗಳ ಬಗ್ಗೆ ಆಸಕ್ತಿ ಉಂಟಾಯಿತು. ಈ ಗೂಡುಗಳನ್ನು ಯಾರೇ ಆಗಲಿ ಜಖಂ ಮಾಡಲು ಹಾಗೂ ಮರಿಗಳನ್ನು ಘಾಸಿಪಡಿಸಲು ಸಾಧ್ಯವಿರಲಿಲ್ಲ. ಗೂಡುಗಳು ಕೊಳವೆಗಳು ಇಲ್ಲವೆ ಲಾಳಿಗಳಂತೆ ರೂಪುಗೊಂಡಿದ್ದವು. ಹುಲ್ಲು ಮತ್ತು ಭತ್ತದ ತೆನೆಗಳಿಂದ ಅವನ್ನು ಸೊಗಸಾಗಿ ಹೆಣೆದಿದ್ದವು. ಎಚ್ಚರದ ನೇಯ್ಗೆಯಿಂದ ಮತ್ತು ಕೆಸರಿನ ತುಣುಕುಗಳಿಂದ ಗೂಡುಗಳನ್ನು ಅಚ್ಚುಕಟ್ಟಾಗಿ ಕಟ್ಟಿದ್ದವು. ಪಕ್ಷಿಗಳು ಗೂಡುಗಳ ಒಳಗೆ, ಹೊರಗೆ ಹಾರಾಡುತ್ತಾ, "ತಿಲಿಲಿಲಿಲಿಲೀ-ತಿಲಿಲೀ-ಕಿಟಿ-ತಿಲಿಲೀ-ಕಿಟಿ" ಎಂದು ಚಿಲಿಪಿಲಿ ಗುಟ್ಟುತಿದ್ದವು.

ಆ ಮನುಷ್ಯ ಹರಿಗೆ ವಿವರಿಸಿದ, "ಇಂತಹ ಗೂಡುಗಳನ್ನು ಕಟ್ಟುವುದು ಕಷ್ಟ. ಅದನ್ನು ಕಟ್ಟಿ, ಮರಿಗಳನ್ನು ಸಾಕುವ ಮುನ್ನ, ಅದನ್ನು ಕುರಿತು ಗಂಡು ಪಕ್ಷಿಯು ಚೆನ್ನಾಗಿ ಅಭ್ಯಾಸ ಮಾಡುತ್ತದ. ಏನಾದರೂ ತಪ್ಪಾದಲ್ಲಿ ಹಾಗೂ ಗೂಡು ಸರಿಯಾಗಿ ರೂಪುಗೊಳ್ಳದಿದ್ದಲ್ಲಿ, ಅದು, ಆ ಗೂಡನ್ನು ತೊರೆದು ಬೇರೊಂದನ್ನು ಕಟ್ಟಲಾರಂಭಿಸುತ್ತದೆ. ಗೂಡು ಪರಿಪಕ್ವವಾದರೆ ಮಾತ್ರ ಅದಕ್ಕೆ ತೃಪ್ತಿ. ಅದು ಹಲವಾರು ಗೂಡುಗಳನ್ನು ನಿರ್ಮಿಸುತ್ತದೆ. ಇದರಿಂದಾಗಿ ಅದು ಹಲವಾರು ಹೆಂಡಿರನ್ನೂ ಪಡೆಯಬಹುದಾಗಿದೆ. ಹೆಣ್ಣುಗಳನ್ನು ಆಕರ್ಷಿಸುವ ಸಲುವಾಗಿ ಅದು ಮಣ್ಣಿನ ಹೆಂಟೆಗಳಲ್ಲಿ ಹೂವಿನ ಎಸಳುಗಳನ್ನೂ, ಪುಕ್ಕಗಳನ್ನೂ ಸಿಕ್ಕಿಸಿ ಗೂಡುಗಳನ್ನು ಸಿಂಗರಿಸುತ್ತದೆ. ತಮಗಾಗಿ ಸೊಗಸಾದ ಮನೆಗಳನ್ನು ಕಟ್ಟುವಂಥವುಗಳೊಡನೆ ಮಾತ್ರ

ಹೆಣ್ಣು ಪಕ್ಷಿಗಳು ಕೂಡುತ್ತವೆ'' ಎಂದು ಒಳಗೊಳಗೇ ನಗುತ್ತಾ, ''ಇದಕ್ಕಿಂತ ಹೆಚ್ಚು ಬುದ್ಧಿವಂತವಾದ ಇತರ ಯಾವುದಾದರೂ ಪಕ್ಷಿಗಳು ಇವೆಯಾ?'' ಎಂದು ಕೇಳಿದ.

ಹರಿ ತಟ್ಟನೆ ಚಕಿತಗೊಂಡ. ಅವನ ಧ್ವನಿಯನ್ನು ಗುರುತಿಸಿದ. ಈ ಧ್ವನಿಯನ್ನು ಹಿಂದೆ ತಾನು ಖಂಡಿತ ಕೇಳಿರುವುದು ಅವನ ಅರಿವಿಗೆ ಬಂತು. ಅವನು ಪಕ್ಕಕ್ಕೆ ತಿರುಗಿ ಆತನನ್ನೇ ದಿಟ್ಟಿಸಿ ನೋಡಿದ. ಆಗ ಈ ಮನುಷ್ಯ ಯಾರೆಂಬುದು ಅವನಿಗೆ ಸ್ಪಷ್ಟವಾಯಿತು. ಮುಂಬೈನಲ್ಲಿ 'ಕಪ್ಪು ಕುದುರೆ'ಯ ಬಳಿ ಅವನು ಮೆರವಣಿಗೆಗಾರರ ಗುಂಪನ್ನುದ್ದೇಶಿಸಿ ಮಾತನಾಡಿದ್ದ. ಮುಂಬೈನ ನಾಗರಿಕನಾದ ತಾನು, ಅಲಿಬಾಗ್‌ನ ಕರಾವಳಿಯ ಬಗ್ಗೆ ಏಕೆ ಇಷ್ಟು ಕಾಳಜಿ ಹೊಂದಿದ್ದೇನೆ, ಆಗಲಿರುವ ಎಲ್ಲ ಬದಲಾವಣೆಗಳಿಂದ ಅವೆಲ್ಲಾ ಹಾಳಾಗುತ್ತವೆಂದು ತಾನೇಕೆ ಹೆದರಿದ್ದೇನೆ, ಎಂಬುದನ್ನು ಹೇಳಿದ್ದ. ಈಗ ಅವನು ಇಲ್ಲಿದ್ದಾನೆ, ಥುಲ್‌ನಲ್ಲಿ !

''ಸರ್'' ಹರಿ ಉಗುಳು ನುಂಗಿಕೊಳ್ಳುತ್ತಾ ಹೇಳಿದ, ''ಸರ್, ಮುಂಬೈನಲ್ಲಿ 'ಕಪ್ಪ ಕುದುರೆ'ಯ ಬಳಿ ನೀವು ಮಾತನಾಡಿದ್ದನ್ನು ನಾನು ಕೇಳಿದ್ದೆ. ನನ್ನ ಗ್ರಾಮದ ಜನರ ಜೊತೆ ನಾನು ಬಂದಿದ್ದೆ.'' ಅವನು ತನ್ನ ದುರ್ಬೀನನ್ನು ಕೆಳಗೆ ಮಾಡಿ, ತಲೆಯನ್ನು ಸ್ವಲ್ಪ ವಾಲಿಸಿ ಪಕ್ಷಿಯನ್ನು ನೋಡುವಂತೆ, ಹರಿಯನ್ನೂ ನೋಡಿದ. ''ಓ, ನೀನೂ ಅವರಲ್ಲೊಬ್ಬನಾ?'' ಎಂದು ಕೇಳಿದ. ಅವನಿಗೆ ತನ್ನ ಗೀಜಗನಂತೆ ಹರಿಯೂ ಆಸಕ್ತಿಯುತವಾಗಿ ಕಂಡಿರಬೇಕು. ''ಓ, ಸರಿ, ಸರಿ, ಬಾ. ವರಾಂಡದೊಳಗೆ ಹೋಗಿ ಕುಳಿತು ಮಾತನಾಡೋಣ. ಈ ಸ್ಥಳ ತೇವವಾಗಿದ್ದು, ತುಂಬ ಹೊತ್ತು ಕುಳಿತುಕೊಳ್ಳುವುದು ಕಷ್ಟ.''

* * *

ಆದರೆ, ಅವರು ವರಾಂಡಕ್ಕೆ ಹೋದ ಮೇಲೂ ಆ ವ್ಯಕ್ತಿ ತನ್ನ ದುರ್ಬೀನನ್ನಾಗಲಿ, ಪಕ್ಷಿಗಳನ್ನು ವೀಕ್ಷಿಸುವುದನ್ನಾಗಲಿ ಬಿಡಲಿಲ್ಲ. 'ದ್ರೊಂಗೊ' ಪಕ್ಷಿಯ ಹಾರಾಟವನ್ನೂ, ಮಿಡತೆಗಳನ್ನು ತಿನ್ನುವ ಇತರ ಪಕ್ಷಿಗಳ ಹಾರಾಟವನ್ನೂ, ಅವನು ದುರ್ಬೀನಿನಲ್ಲಿ ನೋಡಿ, ಹರ್ಷದಿಂದ ತನಗೆ ತಾನೇ ನಗುತ್ತಿದ್ದಾಗ, ಥುಲ್‌ಗೆ ಗುಂಪು ಗುಂಪಾಗಿ ಬರುವ ಪಕ್ಷಿಗಳತ್ತ ಗಮನ ಕೊಡದೆ ತಾನು ಕಳೆದುಕೊಂಡಿರುವುದು ಅಪಾರ ಎಂದು ಹರಿ ಭಾವಿಸಿದ. ತನ್ನ ಕಣ್ಣುಗಳನ್ನು ಚೆನ್ನಾಗಿ ಉಪಯೋಗಿಸಿಕೊಂಡು, ಹೆಚ್ಚು ಹೆಚ್ಚು ಕಲಿಯಲು ಅವನು ನಿರ್ಧರಿಸಿದ. ಆ ವೇಳೆಗೆ ಸೈಯದ್ ಅಲಿ ದುರ್ಬೀನನ್ನು ಕೆಳಗೆ ಮಾಡಿದರು. ''ಮುಖ್ಯಮಂತ್ರಿ-ಯವರಿಗೆ ಮನವಿಪತ್ರ ಸಲ್ಲಿಸಲು ಮುಂಬೈಗೆ ಬಂದ ಅಲಿಬಾಗ್‌ನ ರೈತರಲ್ಲಿ ನೀನೂ ಒಬ್ಬನಾಗಿದ್ದೆ, ಅಲ್ಲವಾ?''

''ಇಲ್ಲ ಸರ್, ನಾನು ಥುಲ್‌ನವನು. ಆ ಗುಡಿಸಿಲಿನಲ್ಲಿ ವಾಸಿಸುತ್ತೇನೆ'' ಹರಿ ಹೇಳಿದ, ''ನನ್ನ ಸೋದರಿಯರು ಇಲ್ಲಿ ಮನೆಯನ್ನು ಸ್ವಚ್ಛಗೊಳಿಸಿ, ನಿಮಗಾಗಿ ಅಡಿಗೆ ಮಾಡುತ್ತಾರೆ.''

''ಓ, ಹೌದು, ಹೌದು.... ಹೌದು'' ಅವನು ಹೇಳಿದ. ಅಷ್ಟರಲ್ಲೇ ಚೂಪಾದ ಬಾಲವುಳ್ಳ ಎರಡು 'ದ್ರೊಂಗೊ' ಪಕ್ಷಿಗಳು ಆಕಾಶದತ್ತ ಜಿಗಿದು, ಸೂರ್ಯನ ಬೆಳಕಿನಲ್ಲಿ ಲಾಗ ಹೊಡೆಯುತ್ತಿದ್ದಾಗ, ಅವುಗಳ ನೀಲಿ ರೆಕ್ಕೆಗಳು ಹೊಳೆಯುತ್ತಿದ್ದನ್ನು ನೋಡಿ ಅವನು ಹರ್ಷೋದ್ಗಾರ ಮಾಡಿ, ತೆರೆದ ಬಾಯಿಯೊಡನೆ ಅವುಗಳತ್ತ ನೋಡಲಾರಂಭಿಸಿದ.

''ನಾನು ಮೆರವಣಿಗೆಯಲ್ಲಿ ಮುಂಬೈಗೆ ಹೋಗಿದ್ದೆ'' ಕೆಟ್ಟದಾಗಿ ಕೂಗುತ್ತಿದ್ದ 'ದ್ರೊಂಗೊ'ಗಳ ಸದ್ದಿನ ಮಧ್ಯೆ ಹರಿ ಅವನ ನೆನಪಿಗೆ ತಂದ. ''ಇಲ್ಲಿ ಕಾರ್ಖಾನೆಯನ್ನು

ಕಟ್ಟಿದಂತೆ ಅವರನ್ನು ತಡೆಯುವುದು ನಮ್ಮ ಉದ್ದೇಶವಾಗಿತ್ತು.''

''ಓಹ್!'' ಪಕ್ಷಿವೀಕ್ಷಕ ನಿಟ್ಟುಸಿರು ಬಿಟ್ಟು ತನ್ನ ದುರ್ಬೀನನ್ನು ಕೆಳಗೆ ಹಾಕಿ ತನ್ನ ಬೆತ್ತದ ಕುರ್ಚಿಯಲ್ಲಿ ಕುಸಿದು ಕುಳಿತ. ''ಓ, ಹಾಗಿದ್ದರೆ ಹೋರಾಟ ನಡೆಸಿದವರಲ್ಲಿ ನೀನೂ ಒಬ್ಬ. ಆದರೆ, ನಿಮಗೆ ಹೋರಾಟದಲ್ಲಿ ಸೋಲಾಯಿತು. ಗೊತ್ತಾ? ನ್ಯಾಯಾಲಯಗಳಲ್ಲಿ ನಮ್ಮ ಮೊಕದ್ದಮೆ ಬಿದ್ದು ಹೋಯಿತು. ರಾಜಕಾರಣಿಗಳು ಗೆದ್ದರು. ಭೂಮಿಯ ಮಾರಾಟ ಮತ್ತು ಅಭಿವೃದ್ಧಿಯ ಹೆಸರಿನಲ್ಲಿ ಪರವಾನಗಿಯ ಮೂಲಕ ಅವರು ಹಣ ಮಾಡುತ್ತಾರೆ. ಧುಲ್‌ಗೆ ಸೋಲಾಯಿತು'' ಎಂದು ಅವನು ನಿಟ್ಟುಸಿರು ಬಿಟ್ಟು, ತನ್ನ ಮೂಗಿನ ಮೇಲೆ ಕುಸಿದಿದ್ದ ಕನ್ನಡಕವನ್ನು ಸರಿಪಡಿಸಿಕೊಂಡು, ''ಎಲ್ಲವೂ ವ್ಯರ್ಥವಾಯಿತು. ನೀರಿನೊಳಗೆ ಹರಿಯಬಿಡುವ ರಾಸಾಯನಿಕ ಕಾರ್ಖಾನೆಗಳಿಂದ ಸಾಗರದಲ್ಲಿನ ಮೀನುಗಳು ಸಾಯುತ್ತವೆ. ಗದ್ದೆಗಳ ಮೇಲೆ ಕಾರ್ಖಾನೆಗಳನ್ನೂ, ಮನೆಗಳನ್ನೂ ನಿರ್ಮಿಸಲಾಗುವುದು. ನನ್ನ ಪುಟ್ಟ ಗೀಜಗನ ಹಕ್ಕಿಗಳು ತಮ್ಮ ಗೂಡುಗಳಿಗೆ ಭತ್ತದ ತೆನೆಗಳನ್ನು ಎಲ್ಲಿಂದ ತರುತ್ತವೆ? ಅವುಗಳ ಮರಿಗಳಿಗೆ ಕಾಳುಗಳೂ ಸಹ ಸಿಗುವುದಿಲ್ಲ. ದೂರ ಹಾರಿಹೋಗಿಬಿಡುತ್ತವೆ. ಇನ್ನೊಂದು ವರ್ಷದ ಬಳಿಕ ನಾನು ಅವನ್ನು ನೋಡಲಾಗುವುದಿಲ್ಲ.''

ಅತಿ ದುಃಖಿಗೊಂಡಂತೆ ಕಂಡ ಅವನನ್ನು ನೋಡಿ ಹರಿ ಕೇಳಿದ, ''ಪಕ್ಷಿಗಳ ಬಗ್ಗೆ ನಿಮಗೇಕೆ ಅಷ್ಟು ಕಾಳಜಿ, ಸರ್?''

''ಪಕ್ಷಿಗಳು ಭೂಮಿಯ ಮೇಲಿನ ಕಟ್ಟ ಕಡೆಯ ಸ್ವತಂತ್ರ ಜೀವಿಗಳು. ಪ್ರತಿ ಪ್ರಾಣಿಗಳನ್ನೂ ವಶಪಡಿಸಿಕೊಂಡು, ಪಳಗಿಸಿ, ಪಂಜರಗಳಲ್ಲಿ ಇಡಲಾಗುವುದು. ಪ್ರಾಣಿ ಸಂಗ್ರಹಾಲಯದಲ್ಲಿ ಹುಲಿಗಳೂ ಪಂಜರದಲ್ಲಿರುತ್ತವೆ. ಅಭಯಾರಣ್ಯಗಳಲ್ಲಿ ಜನರು, ಗುಂಪುಗುಂಪಾಗಿ, ಸಿಂಹಗಳನ್ನು ಕೆಕ್ಕರಿಸಿ ನೋಡುತ್ತಿರುತ್ತಾರೆ. ಸೆರೆಮನೆಯಂತಹ ಕಾರ್ಖಾನೆಗಳಲ್ಲಿ ಕೆಲಸಮಾಡುವ ಸ್ತ್ರೀಪುರುಷರು, ಬೆಂಕಿಪೊಟ್ಟಣದಂತಹ ಮನೆಗಳಲ್ಲಿ ವಾಸಿಸುತ್ತಿರುತ್ತಾರೆ. ಪಕ್ಷಿಗಳು ಮಾತ್ರ ಸ್ವತಂತ್ರವಾಗಿದ್ದು ತಮಗಿಷ್ಟ ಬಂದಾಗ ಹಾರಿ ಆಕಾಶದತ್ತ ಹೋಗಬಲ್ಲವು.'' ಅವನು ಮಾತನಾಡುತ್ತಿದ್ದಾಗ ಅವನ ಮುಖ ಕಾಂತಿಯುತ-ವಾಗಿತ್ತು, ಧ್ವನಿ ನಡುಗುತ್ತಿತ್ತು. ''ಆದ್ದರಿಂದಲೇ ನಾನು ಅವನ್ನು ಪ್ರೀತಿಸುತ್ತೇನೆಂದು ತೋರುತ್ತದೆ. ನಮಗಿಲ್ಲದಂತಹ ಅವುಗಳ ಸ್ವಾತಂತ್ರ್ಯಕ್ಕಾಗಿ. ಈ ಎಲ್ಲವನ್ನೂ ತ್ಯಜಿಸಿ, ಭೂಮಿಯ ಮೇಲೆ ನಾವು ಮಾಡಿರುವ ಎಲ್ಲ ಕುರೂಪವನ್ನೂ ತೊರೆದು, ಪಕ್ಷಿಗಳ ಜೊತೆ ಹಾರಿ ಹೋಗಲು ನಾನು ಇಷ್ಟಪಡುತ್ತೇನೆ. ನಿನಗೂ ಹಾಗೆನಿಸುವುದಿಲ್ಲವೆ?'' ಎಂದು ಅವನು ಹರಿಯನ್ನು ಕೇಳಿದ.

''ಆದರೆ ನಾವು ಹಾರಲಾರೆವು, ಸರ್'' ಹರಿ ಮುಗ್ಧನಂತೆ ಅವನಿಗೆ ಹೇಳಿದ, ''ಇಲ್ಲಿ ನಾವು ಭೂಮಿಯ ಮೇಲಿದ್ದೇವೆ. ಅದನ್ನು ನಾವು ಬಿಡಲಾರೆವು. ನಾವಂತೂ ಹೇಗೋ ಇದ್ದೇ ಇರಬೇಕು.''

ಪಕ್ಷಿ ವೀಕ್ಷಕ ವಿಷಾದಪೂರಿತ ಕಣ್ಣುಗಳಿಂದ ಹರಿಯನ್ನು ನೋಡಿದ. ''ಹೌದು, ನೀನೇನು ಮಾಡುತ್ತಿ? ನಿನ್ನಿಂದ ಏನು ಆಗುತ್ತದೆ? ನನಗೆ ಗೊತ್ತಿಲ್ಲ..ಏನೂ ತಿಳಿಯದೆ ನಾನು ದಿಗ್ಭ್ರಾಂತನಾಗುತ್ತಿದ್ದೇನೆ. ಅಂದ ಹಾಗೆ ನೀನೇನು ಮಾಡುತ್ತಿದ್ದಿ?''

ಹರಿ ಅವನ ಹತ್ತಿರ ಸ್ವಲ್ಪ ಸರಿದು ಹೇಳಿದ, ''ಸರ್, ನನಗೆ... ನನಗೆ... ಬೇಸಾಯ-

ವಸ್ನಾಗಲಿ, ಮೀನುಗಾರಿಕೆನ್ನಾಗಲಿ ಈಗ ಪ್ರಾರಂಭಿಸುವುದು ತುಂಬ ತಡವೆನಿಸುತ್ತದೆ. ಅಲ್ಲದೆ ಬೇಸಾಯ ಮಾಡುವುದಕ್ಕೆ ಮತ್ತು ಮೀನುಗಾರಿಕೆಗೆ ಇದು, ಇನ್ನು ಮುಂದೆ ಒಳ್ಳೆಯ ಸ್ಥಳವಾಗುವುದಿಲ್ಲ. ಕಾರ್ಖಾನೆಯಲ್ಲಿ ಕೆಲಸ ಮಾಡಲು ನನಗಿಷ್ಟವಿಲ್ಲ. ಸ್ವಲ್ಪ ಕೋಳಿಗಳನ್ನು ಕೊಂಡು, ನನ್ನ ಜಮೀನಿನಲ್ಲಿ ಕೋಳಿಗಳ ರೊಪ್ಪಗಳನ್ನು ಕಟ್ಟಿ ಕೋಳಿ ಸಾಕಣೆ ಕೇಂದ್ರವನ್ನು ಸ್ಥಾಪಿಸಲು ಉದ್ದೇಶಿಸಿದ್ದೇನೆ. ಮೊಟ್ಟೆಗಳನ್ನು ಗ್ರಾಮದಲ್ಲಿ ಮಾರುವುದು ಮತ್ತು ಥುಲ್‌ನಲ್ಲಿ ಕಾರ್ಖಾನೆ ಪ್ರಾರಂಭವಾಗಿ ಇಲ್ಲಿ ವಾಸಿಸಲು ಬರುವ ಜನರಿಗೆ ಕೋಳಿಗಳನ್ನು ಮಾರುವುದು. ಆ ರೀತಿ ಸ್ವಲ್ಪ ಕಾಲ ಜೀವನ ನಿರ್ವಹಣೆ ನಡೆಸುತ್ತೇನೆ. ಗಡಿಯಾರದ ರಿಪೇರಿ ಕೆಲಸವನ್ನು ಸ್ವಲ್ಪ ಮಟ್ಟಿಗೆ ಕಲಿತಿದ್ದೇನೆ ಮುಂದೆ ಅದನ್ನು ಮಾಡುವುದು ನನ್ನ ಆಸೆ'' ಹರಿ ಸ್ವಲ್ಪ ನಾಚಿಕೆ ಮತ್ತು ಹೆಮ್ಮೆಯಿಂದ ಹೇಳಿದ.

''ಹೌದಾ!'' ಅಚ್ಚರಿಯಿಂದ ಪಕ್ಷಿವೀಕ್ಷಕ ಕೇಳಿದ, ''ನೀನು ರಿಪೇರಿ ಮಾಡಬಲ್ಲೆಯಾ? ನನ್ನ ಗಡಿಯಾರವನ್ನು ಸರಿಪಡಿಸಬಲ್ಲೆಯಾ? ನಾನು ಆ ಕೊರಕಲಲ್ಲಿ ಬಿದ್ದೆ, ಗೊತ್ತಾ?'' ಅವನು ನಗುತ್ತಾ ಹೇಳಿದ, ''ಅಂದಿನಿಂದ ನನ್ನ ಗಡಿಯಾರ ನಡೆಯುತ್ತಿಲ್ಲ. ಅದು ಟಿಕ್-ಟಿಕ್ ಎಂದು ನಡೆಯುವಂತೆ ಮಾಡಬಲ್ಲೆಯಾ?'' ಎಂದು ಹೇಳಿ ಅವನು ತನ್ನ ಜೇಬಿನಿಂದ ಅದನ್ನು ತೆಗೆದು ಹರಿಗೆ ಕೊಟ್ಟ. ಹರಿ ಕಾತುರದಿಂದ ಅದನ್ನು ತೆಗೆದುಕೊಂಡ. ಮುಂಬೈನಲ್ಲಿ ತಮ್ಮನ್ನುದ್ದೇಶಿಸಿ ಮಾತನಾಡಿದ್ದ ಮತ್ತು ಥುಲ್‌ನಲ್ಲಿ ಪಕ್ಷಿಗಳನ್ನೂ ವೀಕ್ಷಿಸುತ್ತಿರುವ ಈ ದೊಡ್ಡ ಮನುಷ್ಯನಿಗಾಗಿ ಇಂಥ ಸೇವೆ ಸಲ್ಲಿಸಲು ತನ್ನನ್ನು ಕೇಳಲಾಗುತ್ತಿದೆ ಎಂಬುದನ್ನು ನಂಬುವುದೇ ಹರಿಗೆ ಕಷ್ಟವಾಗಿತ್ತು.

ಗಡಿಯಾರವನ್ನು ತೆಗೆದುಕೊಂಡು, ಅದನ್ನು ಮೆಲ್ಲಗೆ ಅಲ್ಲಾಡಿಸಿ, ತನ್ನ ಕಿವಿಯ ಬಳಿ ಇಟ್ಟುಕೊಂಡ. ''ಗಡಿಯಾರದೊಳಗೆ ನೀರು ಹೋಗಿದೆ, ಸರ್ ಶುದ್ಧಪಡಿಸಿ, ಅದು ಒಣಗುವಂತೆ ಮಾಡುವುದು ಸುಲಭ- ಮುಂಬೈನಲ್ಲಿ ಮಳೆಗಾಲದಲ್ಲಿ ನಾನು ಅನೇಕ ಗಡಿಯಾರಗಳನ್ನು ಈ ರೀತಿ ಸರಿಪಡಿಸಿದ್ದೇನೆ.''

ಹರಿ ಮಾತನಾಡುತ್ತಿದ್ದಾಗ, ಪಕ್ಷಿವೀಕ್ಷಕ, ಅದ್ಭುತ ಮತ್ತು ಕುತೂಹಲಕರ ಕಾರ್ಯ ಮಾಡುತ್ತಿರುವ ಪಕ್ಷಿಯನ್ನು ನೋಡುವಂತೆ, ಅವನನ್ನೇ ವೀಕ್ಷಿಸುತ್ತಿದ್ದ.ನಂತರ ಅವನು ಹಠಾತ್ತನೆ ತನ್ನ ಕುರ್ಚಿಯಿಂದೆದ್ದು ಕೂಗಿದ, ''ಹೊಂದಿಕೊ, ಹೊಂದಿಕೊ!''

''ಏನು ಸರ್?'' ಹರಿ ತಬ್ಬಿಬ್ಬಾಗಿ ಕೇಳಿದ. ಆ ಪದದ ಅರ್ಥ ಅವನಿಗಾಗಲಿಲ್ಲ.

''ಹೊಂದಿಕೊ- ಅದೇ ನೀನು ಈಗ ಮಾಡಬೇಕಾದ್ದು. ಪಕ್ಷಿಗಳು ಮತ್ತು ಪ್ರಾಣಿಗಳು ಜೀವಂತ ಉಳಿಯಬೇಕಾದರೆ ಹಾಗೆ ಮಾಡಬೇಕಾಗುತ್ತದೆ. ಗುಬ್ಬಚ್ಚಿಗಳು ಮತ್ತು ಪಾರಿವಾಳಗಳು ನಗರ ಜೀವನಕ್ಕೆ ಹೊಂದಿಕೊಳ್ಳುತ್ತವೆ. ಅವು ಜಮೀನುಗಳಲ್ಲಿ ಕಾಳುಗಳ ಮತ್ತು ಹುಳ-ಹಪ್ಪಟೆಗಳನ್ನು ಹೆಕ್ಕುವ ಬದಲು, ರಸ್ತೆಗಳಲ್ಲಿ ಬಿಸಾಡುವ, ಮಿಕ್ಕಿದ ಆಹಾರ ಪದಾರ್ಥಗಳು ಮತ್ತು ಕಚಡಾ ವಸ್ತುಗಳನ್ನು ತಿಂದು ಬದುಕುತ್ತವೆ'' ಅವನು ವಿವರಿಸಿದ. ''ಅಂತೆಯೇ ನೀನೂ ಹೊಸ ಪರಿಸರಕ್ಕೆ ಹೊಂದಿಕೊಳ್ಳಬೇಕು.''

''ಯಾವ ರೀತಿ, ಎಂಬುದು ನನಗೆ ತಿಳಿಯದು, ಸರ್'' ಹರಿ ಅನಿರ್ದಿಷ್ಟತೆಯಿಂದ ಹೇಳಿದ.

''ಅಲ್ಲ, ಹುಡುಗ,ಯಾವ ರೀತಿ ಎಂಬುದನ್ನೂ ನೀನೇ ಇದೀಗ ನನಗೆ ತಿಳಿಸಿದೆ.

ಜೀವನೋಪಾಯಕ್ಕಾಗಿ ನಿನ್ನ ಸಾಂಪ್ರದಾಯಿಕ ಪದ್ಧತಿಗಳನ್ನು ತೊರೆದು, ಧುಲ್‌ನಲ್ಲಿ ಕಾರ್ಖಾನೆಯು ಸೃಜಿಸಲಿರುವ ಹೊಸ ಜೀವನ ವಿಧಾನವನ್ನು ಕಲಿಯುವುದಾಗಿ ಹೇಳಿದೆ. ಹೌದು, ಜೀವನವನ್ನು ನಿರ್ವಹಿಸಬಲ್ಲೆ.''

ಪಕ್ಷಿವೀಕ್ಷಕನು ಆಡುತ್ತಿದ್ದ ಮಾತುಗಳಲ್ಲಿ ಅರ್ಥದಷ್ಟು ಹರಿಗೆ ಅರ್ಥವಾಗಲಿಲ್ಲ. ಅವನನ್ನು ಸರಿಯಾಗಿ ಅರಿಯುವುದೂ ಹರಿಗೆ ಆಗಲಿಲ್ಲ. ಹಿಂದೊಮ್ಮೆ ಪಾನ್‌ವಾಲಾನನ್ನು ನೋಡಲು ಹರಿ ಹೋಗಿದ್ದಾಗ, ಬಾಲ್ಕನಿಯಲ್ಲಿ ಕುಳಿತಿದ್ದ ಅವನು, ರೇಲ್ವೆ ನಿಲ್ದಾಣದ ಛಾವಣಿಯ ಮೇಲೆ ಕುಳಿತಿದ್ದ ಪಾರಿವಾಳಗಳನ್ನು ವೀಕ್ಷಿಸುತ್ತಿದ್ದುದು ಅವನ ನೆನಪಿಗೆ ಬಂದಿತು. ''ಚಕ್ರ ಸುತ್ತುತ್ತಿದೆ'' ಎಂದು ಅವನು ನಿಧಾನವಾಗಿ ಹೇಳಿದ್ದ. ಪಾನ್‌ವಾಲಾನ ಆ ಮಾತುಗಳನ್ನು ನೆನೆದಂತೆ ಹರಿಗೆ ಅಚ್ಚರಿಯುಂಟಾಯಿತು. ''ಚಕ್ರ ಸುತ್ತುತ್ತಿದೆ, ಸುತ್ತುತ್ತಿದೆ, ಸುತ್ತುತ್ತಿದೆ''ಯನ್ನು ಅರ್ಥ ಮಾಡಿಕೊಳ್ಳುತ್ತಾ ಅವನು ಸ್ಕೈಯದ್ ಅಲಿಯತ್ತ ತಿರುಗಿದ. ಅವನಿಗೀಗ ಸಂಬಂಧದ ಅರ್ಥವಾಗಿತ್ತು. ಚಕ್ರದ ಈ ಮಹಾನ್ ಸುತ್ತುವಿಕೆಯಲ್ಲಿ ಪಕ್ಷಿಗಳು ಮತ್ತು ಮನುಷ್ಯರು ಹೇಗೆ ಒಗ್ಗೂಡಿದ್ದಾರೆ ಎಂಬುದು ಅವನಿಗೆ ಗೊತ್ತಾಗಿತ್ತು. ನಾವು ಅದನ್ನು ಸರಿಯಾಗಿ ಅರ್ಥಮಾಡಿಕೊಂಡಲ್ಲಿ ಅವು ನಮಗೆ ಅನೇಕ ಪ್ರಮುಖ ಅಂಶಗಳನ್ನು ತೋರಿಸುತ್ತವೆ ಮತ್ತು ಬೋಧಿಸುತ್ತವೆ. ''ಸರ್. ನನಗೆ ಅರ್ಥವಾಯಿತು'' ಹರಿ ಉತ್ಸಾಹದಿಂದ ಹೇಳಿದ. ಆದರೆ ಅದೇ ವೇಳೆಗೆ, ಭಾವೋದ್ರೇಕಗೊಂಡಿದ್ದ ಪಕ್ಷಿವೀಕ್ಷಕನ ದೇಹವು ವರಾಂಡದ ಅಂಚಿನಲ್ಲಿ ಮರೆಯಾಗಿತ್ತು. ಆತ ಹಿಂದಕ್ಕೆ ಮುಗ್ಗರಿಸಿ, ವರಾಂಡದಾಚೆ ದಾಸವಾಳದ ಗಿಡಗಳ ಮೇಲೆ ಬಿದ್ದಿದ್ದ. ಆತನನ್ನು ಹಿಡಿದೆತ್ತಿ ನಿಲ್ಲಿಸುವ ಸಲುವಾಗಿ, ಹರಿ ಕೆಳಗೆ ಹಾರಿ ಕೂಡಲೇ ಕೇಳಿದ, ''ಗಾಯವಾಯಿತೆ, ಸರ್? ನೀವು ಹುಷಾರಾಗಿದ್ದೀರಾ, ಸರ್?''

''ಸರಿ, ಸರಿ...ಸರಿ'' ಸ್ವಲ್ಪ ಗಾಬರಿಯಾದಂತೆ ಕಂಡ ಪಕ್ಷಿವೀಕ್ಷಕ ಬಿಕ್ಕುತ್ತಾ ಹೇಳಿದ. ಹರಿ ಅವನನ್ನು ಎಬ್ಬಿಸಿ, ಅವನ ಬಟ್ಟೆಯನ್ನು ಕೊಡವಿ, ದುರ್ಬೀನನ್ನು ತೆಗೆದುಕೊಟ್ಟಾಗ, ಅವನು ನಗುತ್ತಾ ಹೇಳಿದ, ''ನಿನಗೆ ನನ್ನ ಗಡಿಯಾರವನ್ನು ತೆಗೆದುಕೊಟ್ಟಿದ್ದು ಒಳ್ಳೆಯದಾಯಿತು. ಇಲ್ಲದಿದ್ದರೆ, ಅದು ಒಡೆದು ಹೋಗುತ್ತಿತ್ತು.''

''ಅದು ನನ್ನಲ್ಲಿ ಸುರಕ್ಷಿತವಾಗಿದೆ, ಸರ್'' ಹರಿ ತನ್ನ ಜೇಬು ತಟ್ಟಿಕೊಳ್ಳುತ್ತಾ ಹೇಳಿದ, ''ಅದನ್ನು ನಾನು ಮನೆಗೆ ತೆಗೆದುಕೊಂಡು ಹೋಗಿ ಸರಿಪಡಿಸುತ್ತೇನೆ. ಈ ಸಂಜೆ ಅದನ್ನು ನಿಮಗೆ ಹಿಂದಿರುಗಿಸುತ್ತೇನೆ. ಸರಿಯಾ, ಸರ್?''

ಆದರೆ ಪಕ್ಷಿವೀಕ್ಷಕ ಉತ್ತರಿಸಲಿಲ್ಲ. ತನ್ನ ಮರಿಗಾಗಿ ಕೊಕ್ಕಿನಲ್ಲಿ ಏನೋ ಹಿಡಿದು ಬರುತ್ತಿದ್ದ ಗೀಜಗನ ಹಕ್ಕಿಯನ್ನು ನೋಡಿ, ಹರ್ಷೋದ್ಗಾರ ಮಾಡುತ್ತಾ, ಜವುಗು ನೆಲದಲ್ಲಿ ಮುಗ್ಗರಿಸುತ್ತಿದ್ದ ಅವನು, ಹರಿಯ ಇರುವಿಕೆಯನ್ನೇ ಮರೆತಂತೆ ಕಾಣುತ್ತಿತ್ತು.

ಹರಿಗೆ ಇದರಿಂದ ಬೇಸರವೇನಾಗಲಿಲ್ಲ. ಪಕ್ಷಿವೀಕ್ಷಕನು ತನಗೆ ಹೇಳಿದ ಮಾತುಗಳಿಂದ, ತನಗೆ ಅಗತ್ಯವಾದ ವಿಶ್ವಾಸ ಅವನಿಗೆ ಬಂದಿತ್ತು. ಇನ್ನು ಅವನು ಮುನ್ನಡೆಯಬಹುದು.

ಆದರೆ, ಮೊದಲು ಅವನು ಮರಳ ದಂಡೆಯ ಮೇಲೆ ನಡೆಯುವ ಓಟಗಳಿಗೆ ತನ್ನ ಸೋದರಿಯರನ್ನು ಕರೆದೊಯ್ಯಬೇಕು.

* * *

ಬಿಳಿ ಎತ್ತುಗಳ ಕೊಂಬುಗಳಿಗೆ ಪಾಟಲ ಮತ್ತು ಕಡುಗೆಂಪು ಬಣ್ಣಗಳನ್ನು ಬಳಿದಿತ್ತು. ಅವು ಮರಳ ಮೇಲೆ ಶಬ್ದ ಮಾಡುತ್ತಾ ನಾಗಾಲೋಟ ಹಾಕಿದವು. ಅವುಗಳ ಹಿಂದೆ ಮರದ ಗಾಡಿಗಳನ್ನು ಕಟ್ಟಲಾಗಿತ್ತು. ಗಾಡಿಯವರು ಮಿರುಗುವ ಹೊಸ ಪೇಟ ಧರಿಸಿ, ಚಾಟಿಯನ್ನು ಝಳಪಿಸುತ್ತಾ, ಕೂಗುತ್ತಾ ಜೋರಾಗಿ ಓಡುವಂತೆ ಎತ್ತುಗಳನ್ನು ಹುರಿದುಂಬಿಸುತ್ತಿದ್ದರು.

''ಬಿಜು ಗಾಡಿ- ಬಿಜು ಎತ್ತು-ಬಿಜು ಗೆದ್ದ!'' ದಂಡೆಯ ಮತ್ತೊಂದು ತುದಿಯಲ್ಲಿ ಕೂಗು ಕೇಳಿಬಂದಿತು. ಮರಳ ದಂಡೆಗಳ ಮೇಲೆ ಕುಳಿತಿದ್ದ ಜನರ ಗುಂಪುಗಳ ಮೂಲಕ ಈ ಕೂಗು ಹಾದು ಹೋಯಿತು. ಹೊಳೆಯುತ್ತಿದ್ದ ಹೊಸ ಧೋತಿಯನ್ನು ಉಟ್ಟಿದ್ದ ಬಿಜು ಆ ಗುಂಪಿನಲ್ಲಿದ್ದ. ಹಸನ್ಮುಖನಾಗಿದ್ದ ಅವನು ಹಿಂದೆಂದಿಗಿಂತಲೂ ದಪ್ಪನಾಗಿ ಕಾಣುತಿದ್ದ. ದೀಪಾವಳಿಯ ಹೊಸ ಉಡುಪುಗಳನ್ನು ಧರಿಸಿದ್ದ ಅವನ ಹೆಂಡತಿ ಮತ್ತು ಮಗಳು ಅವನ ಪಕ್ಕದಲ್ಲಿದ್ದರು. ಜನ ಕೂಗಿ ಅವನನ್ನು ಅಭಿನಂದಿಸಿದರು. ಅವರು ಅವನ ಉಡಾಫೆ ಮತ್ತು ದುರಹಂಕಾರವನ್ನು ಮರೆತಂತಿತ್ತು. ಎಷ್ಟಾದರೂ ಅವನು ಮುಳುಗುತ್ತಿದ್ದ ಮೀನುಗಾರರನ್ನು ರಕ್ಷಿಸುವಲ್ಲಿ ಸಹಾಯ ಮಾಡಿದ್ದ.

ಆ ಬೃಹತ್ ಚಂಡಮಾರುತವು ಎಲ್ಲ ಮೀನುಗಾರರನ್ನೂ ಸಮೀಪಕ್ಕೆ ತಂದಿತ್ತು. ತಾವು ಪರಸ್ಪರರನ್ನು ಹೇಗೆ ಅವಲಂಬಿಸಿದ್ದೇವೆ, ಪರಸ್ಪರ ಅಗತ್ಯ ಎಷ್ಟೊಂದಿದೆ ಎಂಬುದು ಅವರ ಅರಿವಿಗೆ ಬಂದಿತ್ತು. ಈ ಏಕತೆಯನ್ನು ಅವರು ಇಂದು ಆಚರಿಸುತ್ತಿರುವಂತೆ ಕಾಣುತ್ತಿತ್ತು.

ಈಗ ಟಾಂಗಾಗಳ ಸರದಿ. ಹಗುರವಾಗಿದ್ದ ಅವು ಹೆಚ್ಚು ವೇಗದಿಂದ ಓಡಿದವು. ಮರಳ ಮೇಲೆ ಅವುಗಳ ಚಕ್ರಗಳು ತಿರುಗುತ್ತಿದ್ದವು. ಕುದುರೆಗಳು ತಮ್ಮ ಕತ್ತುಗಳನ್ನು ಮುಂದ ಚಾಚಿ ಹಾರುತ್ತಿರುವಂತೆ ಕಾಣುತ್ತಿದ್ದವು. ಅವುಗಳ ಕತ್ತಿನ ಕೂದಲು ತೆರತೆರೆಯಾಗಿ ಹಾರುತ್ತಿದ್ದವು. ಅವುಗಳ ಸಜ್ಜಿನ ಚಮಕಿಗಳು ಮಿಂಚುತ್ತಿದ್ದವು.

''ನೋಡು, ನೋಡು, ನೋಡು'' ಬೇಲ ಮತ್ತು ಕಮಲ ಉತ್ತೇಜಿತರಾಗಿ ಕೂಗಿದರು.

''ಕೂಗಬೇಡಿ'' ಹರಿ ಹೇಳಿದ, ''ಇಗೊ, ಸ್ವಲ್ಪ ಸಿಹಿ ತೆಗೆದುಕೊಳ್ಳಿ.'' ಅಲಿಬಾಗ್‌ನಿಂದ ತಾನು ಕೊಂಡು ತಂದಿದ್ದ ಸಕ್ಕರೆಅಚ್ಚು ಪೊಟ್ಟಣವನ್ನು ಅವರಿಗೆ ನೀಡಿದ. ಸೋದರಿಯರು ಒಬ್ಬರ ಮೇಲೊಬ್ಬರು ಬಿದ್ದು ಅದನ್ನು ತೆಗೆದುಕೊಂಡು ಸುತ್ತಮುತ್ತ ಇದ್ದ ತಮ್ಮ ಸ್ನೇಹಿತರಿಗೂ ಕೊಟ್ಟು, ಹರ್ಷದಿಂದ ತಿಂದರು. ಆ ಸಮಯದಲ್ಲಿ ಜೀವನ ಅತ್ಯಂತ ಸುಖಕರ ಎಂಬ ಭಾವನೆ ಅವರಿಗುಂಟಾಯಿತು.

ಓಟದ ಸ್ಪರ್ಧೆಗಳು ಮುಗಿದ ಮೇಲೆ ಗುಂಪು ಕರಗುತ್ತಿತ್ತು. ಹರಿ ಮರಳ ದಂಡೆಯ ಮೇಲೆ ಇನ್ನೂ ನಿಂತಿದ್ದ. ಕೈಗಳಲ್ಲಿ ಚಪ್ಪಟೆಯ ಚಿಕ್ಕ ಬುಟ್ಟಿಗಳನ್ನು ಹಿಡಿದುಕೊಂಡಿದ್ದ ಸ್ತ್ರೀಯರ ಗುಂಪೊಂದನ್ನು ನೋಡಿದ. ಅವರು ದಂಡೆಯಲ್ಲಿ ನಡೆಯುತ್ತಿದ್ದರು. ಹಸಿರು ಬಣ್ಣದ ಕಡಲಲ್ಲಿ ಅವರು ಮೂರು ಬಂಡೆಗಳತ್ತ ಹೋಗುತ್ತಿದ್ದರು. ನೊರೆ ಅವರ ಮೊಣಕಾಲುಗಳಿಗೆ ಬಡಿಯುತ್ತಿತ್ತು. ಬಂಡೆಗಳ ಮೇಲೆ ಹೂವಿನದಳಗಳನ್ನೂ ಕುಂಕುಮವನ್ನೂ ಇಟ್ಟು ಕಡಲಿಗೆ ಪ್ರಾರ್ಥನೆ ಸಲ್ಲಿಸಿದರು. ಆ ಗುಂಪಿನಲ್ಲಿ ತನ್ನ ತಾಯಿಯೂ ಇದ್ದುದನ್ನು ಹರಿ ನೋಡಿದ.

''ಲೀಲ, ಅಲ್ಲಿ ನೋಡು'' ಅವನು ಕೂಗಿದ, ''ಲೀಲ ನೋಡಲ್ಲಿ!''